# ದೇವೀಭಾಗವತಂ

## ಮಹಾಪುರಾಣಂ

### ೨ನೆಯ ಸ್ಕಂಧ

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ.)

೨ ನೆಯ ಸ್ಕಂಧ



ಅನುವಾದಕ

**ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,**

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೩

ಶ್ರೀಗಣೇಶ ಶಾರದಾಗುರುಭ್ಯೋ ನಮಃ.

# ಮೊದಲ ಮಾತು.

---

"ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ॥" ಎಂದರೆ ರಾಮಾಯಣ, ಭಾರತ ಮುಂತಾದ ಇತಿಹಾಸಗಳ, ಶೈವ, ವೈಷ್ಣವ, ದೇವೀಪುರಾಣಗಳ ವ್ಯಾಸಂಗದಿಂದ ವೇದವೇದಾಂತಗಳ ತತ್ತ್ವಾರ್ಥವನ್ನೂ, ಸಂಗ್ರಹವಾಗಿ ಸೂಚಿಸಿರುವ ಕಥೆಗಳನ್ನೂ ಹೆಚ್ಚು ವಿವರಗಳ, ತಕ್ಕ ಉದಾಹರಣೆಗಳ, ಉಚಿತವಾದ ಉಪಮಾನ ದೃಷ್ಟಾಂತಗಳ ಸಹಾಯದಿಂದ ಚನ್ನಾಗಿ ತಿಳಿದುಕೊಳ್ಳಬೇಕು. ಇದರಿಂದ ನಮ್ಮ ಮನಸ್ಸು ವಿಶಾಲವಾಗುವಂತೆಯೂ, ಹೃದಯವು ವಿಸ್ತಾರವಾಗುವಂತೆಯೂ, ತಿಳಿವಳಿಕೆಯು ಮೇಲ್ಪಡುವಂತೆಯೂ, ನಡೆವಳಿಕೆಯು ಉತ್ತಮವಾಗುವಂತೆಯೂ, ಮಾಡಿಕೊಳ್ಳುತ್ತಿರಬೇಕು. ಭಾರತಾರ್ಯರ ಸಂಸ್ಕೃತಿಯೂ ಸಂಸ್ಕೃತಭಾಷೆಯೂ, ಒಂದಕ್ಕಾಗಿ ಇನ್ನೊಂದು ಉಂಟಾಗಿದೆಯೇ ಎನ್ನುವಂತೆ ಹೊಂದಿಕೊಂಡಿರುವುದು ಒಂದು ಹೆಚ್ಚುಗಾರಿಕೆಯ ಗುಣವಾಗಿದೆ. ನಮ್ಮ ಸಂಸ್ಕೃತಿಯು ಧರ್ಮಮೂಲವಾದುದು. ಅಲ್ಲದೆ ಪ್ರತಿಯೊಬ್ಬರ ಕರ್ತವ್ಯಕರ್ಮಗಳೇ ಧರ್ಮವಿಶೇಷರೂಪವಾಗಿದೆ ಎಂದೂ, ಇವುಗಳಲ್ಲಿ ಅಡಗಿರುವ ವಿಶ್ವವಿಶಾಲವಾದ ಸಾಮಾನ್ಯಧರ್ಮವೇ ಈ ಪ್ರಪಂಚವೆಲ್ಲವನ್ನೂ ಕಾಪಾಡಬಲ್ಲುದೆಂದೂ, ಅವನ್ನು ಕಡೆಗಣಿಸಿದರೆ ಸರ್ವನಾಶದುಃಖವು ಕಡೆಗೆ ತಪ್ಪದೆಂದೂ ಗೊತ್ತಾಗುತ್ತದೆ. ಧರ್ಮಾಚರಣೆಯಿಂದ ಚಿತ್ತಶುದ್ಧಿಯೂ, ಅಜ್ಞಾನನಿವೃತ್ತಿಯೂ, ತತ್ತ್ವಜ್ಞಾನಸಾಕ್ಷಾತ್ಕಾರಗಳೂ ಕ್ರಮವಾಗಿ ತಪ್ಪದೆ ಎಲ್ಲರಿಗೂ ಉಂಟಾಗುತ್ತವೆ.

'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ'; 'ಸತ್ಯಂ ವದ ಧರ್ಮಂ ಚರ'; 'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ'; ಏಕಂ ಸದ್ವಿಪ್ರಾ ಬಹುಧಾ ವದಂತಿ'; ಎಂದು ಮುಂತಾದ ಶ್ರುತಿವಾಕ್ಯಗಳು ಪ್ರಭುವಿನಂತೆ ಅಪ್ಪಣೆಮಾಡುತ್ತಿವೆ. ಮತ್ತು 'ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ'; 'ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ'; 'ವಿದ್ವದ್ಭಿಸ್ಸೇವಿತಸ್ಸದ್ಭಿಃ ನಿತ್ಯಮದ್ವೇಷರಾಗಿಭಿಃ । ಹೃದಯೇನಾಭ್ಯನುಜ್ಞಾತಃ ಯೋ ಧರ್ಮಸ್ತಂ ನಿಬೋಧತ ॥' ಎಂದು ಮುಂತಾದ ಸ್ಮೃತಿ ಮತ್ತು ಪುರಾಣವಾಕ್ಯಗಳೂ, ಮಿತ್ರನಂತೆ ವಿವರಿಸಿ ತಿಳಿಯ ಹೇಳುತ್ತಿವೆ. ಇಂತಹ ತಿಳಿವಳಿಕೆಯಿಂದ ಮನಸ್ಸು ವಿಶಾಲವಾಗಿ, ಈ ಧರ್ಮಾಚರಣೆ

ಯಿಂದ ಹೃದಯವು ವಿಸ್ತಾರವಾಗಿ, ಈ ಪ್ರಪಂಚಕ್ಕೆಲ್ಲಾ ಕಲ್ಯಾಣವಾಗಬೇಕಾಗಿದೆ. ಈ ರೀತಿಯಲ್ಲಿ ಈಗಲೂ ಒದಗಿರುವ ಈ ಜಗತ್ತಿನ ವಿಷಮಸ್ಥಿತಿಯನ್ನು ಪರಿಹರಿಸಿ ಈ ಲೋಕದ ಭವಿಷ್ಯದ ಯೋಗಕ್ಷೇಮಗಳನ್ನು ಸಾಧಿಸಬೇಕಾದುದು ವಿವೇಕಿಗಳಾದ ಪ್ರಭುಗಳ, ಪ್ರಭಾವಶಾಲಿಗಳಾದ ಮುಂದಾಳುಗಳ, ವಿದ್ಯಾವಂತರಾದ ಸತ್ಪುರುಷರ ಧಾರ್ಮಿಕ ಕರ್ತವ್ಯವಾಗಿದೆ.

ಇಂತಹ ಒಳ್ಳೆಯ ಫಲವು ದೊರೆಯಬೇಕಾದರೆ ಜನರಲ್ಲಿ ಧರ್ಮದ, ಅದರಲ್ಲೂ ವಿಶೇಷವಾಗಿ ವಿಶ್ವಧರ್ಮದ, ಅರಿವು ಆಚರಣೆಗಳು ರೂಢಿಗೆ ಬರಬೇಕು. ಅಲ್ಲದೆ "ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ ।" ಎಂಬ ಧರ್ಮ ವನ್ನು ಎಲ್ಲರಿಗೂ ವಿಧಿಸಿದೆ. ಈ ಋಣಗಳಲ್ಲಿ ಒಂದಾದ ಋಷಿಋಣವನ್ನು ಪಾಠ ಪ್ರವಚನಗಳಿಂದಲೂ ಗ್ರಂಥರಚನೆ ಪ್ರಚಾರಣೆಗಳಿಂದಲೂ ಮೇಲಾದ ರೀತಿಯಲ್ಲೇ ತೀರಿಸಿ, ಐಹಿಕ ಆಮುಷ್ಮಿಕಗಳಾದ ಅಭ್ಯುದಯಗಳನ್ನೂ, ಕಡೆಗೆ ಮೋಕ್ಷರೂಪವಾದ ಶ್ರೇಯಸ್ಸನ್ನೂ ಪಡೆಯಲು ಒಳ್ಳೆಯ ಅವಕಾಶವಿದೆ. ಹೆಚ್ಚಾಗಿ ಹಣವನ್ನು ವೆಚ್ಚ ಮಾಡಿ ನೆರವೇರಿಸಬೇಕಾಗಿರುವ ಗ್ರಂಥಪ್ರಚಾರಣಕಾರ್ಯವು, ಈ ಮುಂದಾಲೋಚನೆ ಯುಳ್ಳ ಧಾರ್ಮಿಕರಾದ ಶ್ರೀಮಂತರನ್ನು ಅವಲಂಬಿಸಿದೆ.

ಕೀರ್ತಿಶೇಷರೂ ಪೂಜ್ಯರೂ ಆಗಿರುವ ಆಳಿದ ಮಹಾಸ್ವಾಮಿಗಳವರ ಮಂಗಳ ಕರಗಳಾದ ಮಾದರಿಗಳನ್ನು ಅನುಸರಿಸಿ ರಾಜ್ಯಭಾರದ ಇತರ ಮಹಾಕಾರ್ಯಗಳನ್ನು ನೆರವೇರಿಸುತ್ತಿರುವಂತೆ, ಈ ಮಹಾಕಾರ್ಯವನ್ನೂ ನಿರ್ವಹಿಸಬೇಕೆಂದು ಉದ್ದೇಶಿಸಿ ನಮ್ಮನ್ನಾಳುತ್ತಿರುವ ಮಹಾಪ್ರಭುಗಳಾದ **ಶ್ರೀಜಯಚಾಮರಾಜೇಂದ್ರಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು** ಉದಾರಬುದ್ಧಿಯಿಂದ ಇಂತಹ ಸದ್ಗ್ರಂಥ ಗಳ ಅರಿವು ಕನ್ನಡಿಗರೆಲ್ಲರಿಗೂ ದೊರೆಯುವಂತಾಗಲೆಂದು, ಈ ದೇವೀಭಾಗವತ ಮಹಾಪುರಾಣದ ಕನ್ನಡ ಅನುವಾದವನ್ನು ಬರೆಯಿಸಿ ಮುದ್ರಣಮಾಡಿಸಿ ಪ್ರಚಾರ ಮಾಡಲು ಅಪ್ಪಣೆಮಾಡಿರುವುದು ಎಲ್ಲ ಕನ್ನಡಿಗರಿಗೂ ಹೆಮ್ಮೆಯ ವಿಷಯವಾಗಿದೆ. ಈ ಘನವಾದ ಉದ್ದೇಶವು ಸಂತತವಾಗಿಯೂ ಸಫಲವಾಗಿಯೂ ನೆರವೇರುತ್ತಿರು ವಂತಾಗಲೆಂದು ಸರ್ವಶಕ್ತಿಸ್ವರೂಪಳಾದ ಮಹಾದೇವಿಯನ್ನು ಭಕ್ತಿನಮ್ರನಾಗಿ ಪ್ರಾರ್ಥಿಸುತ್ತೇನೆ.

ಚಿತ್ರಭಾನುಸಂವತ್ಸರದ ಮಾರ್ಗಶಿರಕೃಷ್ಣತೃತೀಯಾ

ಎಡತೊರೆ ದೇವಯ್ಯದೀಕ್ಷಿತರ ಮಗ
**ಚಂದ್ರಶೇಖರಶಾಸ್ತ್ರೀ.**

|| ಶ್ರೀಃ ||

# ಎರಡನೆಯ ಸ್ಕಂಧದ ವಿಷಯಸೂಚಿಕೆಯು

---

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

### || ಪ್ರಥಮೋಽಧ್ಯಾಯಃ ||

### ಒಂದನೆಯ ಅಧ್ಯಾಯವು

|| ಋಷಯ ಊಚುಃ ||

**ಆಶ್ಚರ್ಯಕರಮೇತತ್ತೇ ವಚನಂ ಗರ್ಭಹೇತುಕಂ ।**
**ಸಂದೇಹೋಽತ್ರ ಸಮುತ್ಪನ್ನಃ ಸರ್ವೇಷಾಂ ನಸ್ತಪಸ್ವಿನಾಂ ॥೧॥**

**ದೃಷ್ಟಾಂತಸ್ಸದ್ಗುರೋರ್ನಪ್ರಭವತಿ ಸದೃಶಂ ಸ್ವೇನ ಶಿಷ್ಯಂ ವಿಧಾತುಃ**
**ಸ್ಪರ್ಶೋ಼ ಲೋಹಂ ಸುವರ್ಣಂ ಕುರುತ ಇಹ ನ ತು ಸ್ಪರ್ಶಮಿತ್ಯೇವ ಹೇಯಃ ।**
**ದೀಪಾನ್ ಕುರ್ವನ್ ಹಿ ದೀಪೋಽಪ್ಯಸಮ ಇಹ ಭವೇತ್ತಾಪಹೃದ್ಜ್ಞಾನದಾತುಃ**
**ಆಚಾರ್ಯೋ ದೇವ ಏವೇತ್ಯುಪದಿಶತಿ ತತೋ ವೇದಮೂರ್ಧಾಪಿ ತತ್ತ್ವಂ ॥**

ಉತ್ತಮನಾದ ಗುರುವು ತಿಳಿವಳಿಕೆ ಇಲ್ಲದಿದ್ದ ಶಿಷ್ಯನನ್ನು ತನ್ನ ಉಪದೇಶ ಸಹವಾಸಗಳಿಂದ ತಿಳಿವಳಿಕೆ ಬೋಧನಶಕ್ತಿ ಇವುಗಳುಳ್ಳವನನ್ನಾಗಿ ಮಾಡುತ್ತಾನೆ. ಆದುದರಿಂದ ಶಿಷ್ಯನನ್ನೂ ತನ್ನಂತೆಯೇ ಆಗುವಂತೆ ಮಾಡುವ ಗುರುವಿಗೆ ಸಮನಾದ ವಸ್ತುವು ಮತ್ತೊಂದಿಲ್ಲವು. ಆದರೆ ಸ್ಪರ್ಶಮಣಿಯನ್ನು ಗುರುವಿಗೆ ಹೋಲಿಸುವುದುಂಟು. ಏಕೆಂದರೆ ಆ ಸ್ಪರ್ಶಮಣಿಯು ಬೆಲೆಯಲ್ಲಿ ತುಂಬ ಕಡಮೆಯಾದ ತಾಮ್ರ ಮುಂತಾದ ಲೋಹಗಳನ್ನು ಬೆಲೆಯುಳ್ಳ ಚಿನ್ನವನ್ನಾಗಿ ಮಾಡುತ್ತದೆಂಬ ನಂಬಿಕೆಯು ಪ್ರಸಿದ್ಧಿ ಇರುತ್ತದೆ. ಆದರೆ ಹಾಗೆ ಚಿನ್ನವಾದ ತಾಮ್ರವನ್ನು ಮತ್ತೊಂದು ತಾಮ್ರಕ್ಕೆ ತಗುಲಿಸಿದರೆ ಅದು ಚಿನ್ನವಾಗುವುದಿಲ್ಲವು. ಆದುದರಿಂದ ಸ್ಪರ್ಶವು ಲೋಹವನ್ನು ತನ್ನಂತೆಯೇ ಸ್ಪರ್ಶವನ್ನಾಗಿ ಮಾಡಿದ ಹಾಗಾಗಲಿಲ್ಲವು. ಆದುದರಿಂದ ಸ್ಪರ್ಶಮಣಿಯೂ ಗುರುವಿಗೆ ಸಮನಾಗಲಾರದೆಂದು ಮನಗಂಡು ಕೈಬಿಡಬೇಕು. ಒಂದು ದೀಪವು ತನ್ನಂತೆಯೇ ಇರುವ ಇತರ ದೀಪಗಳನ್ನುಂಟುಮಾಡುತ್ತದೆ. ಅದೂ

ಅಂತಹ ಇತರ ದೀಪಗಳನ್ನುಂಟುಮಾಡುತ್ತದೆ. ಆದುದರಿಂದ ದೀಪವನ್ನು ಗುರುವಿಗೆ ಹೋಲಿಸಬಹುದೆಂದರೆ ಅದೂ ಸರಿಯಲ್ಲವು. ಏಕೆಂದರೆ ದೀಪವು ಪದಾರ್ಥಗಳನ್ನು ತಿಳಿಯಲು ಅನುಕೂಲವಾಗುವ ಬೆಳಕನ್ನು ಕೊಟ್ಟರೂ ತಾಪವನ್ನು ಉಂಟುಮಾಡುತ್ತದೆ. ಗುರುವಾದರೋ ತಾಪತ್ರಯವನ್ನೂ ನಿರ್ಮೂಲವಾಗಿ ನಾಶಮಾಡುವ ತಿಳಿವಳಿಕೆಯ ತನಿ ಬೆಳಕನ್ನು ಕೊಡುತ್ತಾನೆ. ಈ ರೀತಿಯಲ್ಲಿ ಈ ಲೋಕದಲ್ಲಿರುವ ಯಾವ ವಸ್ತುವೂ ಸದ್ಗುರುವಿಗೆ ಸಮತೂಗಲಾರದುದರಿಂದ ವೇದಗಳಿಗೆ ಶಿರಸ್ಸಿನಂತಿರುವ ಉಪನಿಷತ್ತುಗಳೂ ಆಚಾರ್ಯನನ್ನು ದೇವನೆಂದೇ ತಿಳಿಯಬೇಕೆಂದು ನಿಜವಾದ ತತ್ವವನ್ನು ಸಾರಿಸಾರಿ ತಿಳಿಯಹೇಳುತ್ತಿವೆ. ಆದುದರಿಂದ

ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥

ಯಾವ ಶಿಷ್ಯನಿಗೆ ದೇವರಲ್ಲಿ ನಿರತಿಶಯವಾದ ಭಕ್ತಿಯು ಇರುತ್ತದೆಯೋ, ಅಂತಹ ಮೇಲಾದ ಭಕ್ತಿಯೇ ಗುರುವಿನಲ್ಲೂ ಉಂಟಾಗಿರುತ್ತದೆಯೋ, ಅಂತಹ ಮಹಾನುಭಾವನಾದ ಶಿಷ್ಯನಿಗೆ ಗುರುವು ಉಪದೇಶಿಸುವ ಗ್ರಂಥಗಳಲ್ಲಿ ಹೇಳಿರುವ ತತ್ತ್ವರಹಸ್ಯಗಳೆಲ್ಲವೂ ತಿಳಿಯಬರುತ್ತವೆ. ಅಲ್ಲದೆ ತಿಳಿಯಬೇಕಾದ ಹೊಸ ವಿಷಯಗಳೆಲ್ಲವೂ ಹೊಳೆಯುತ್ತಾ ಬರುತ್ತವೆ. ಭಕ್ತಿ ಇಲ್ಲದೆ ಈ ಫಲವು ದೊರೆಯುವುದಿಲ್ಲವು.

ಶೌನಕಾದಿಋಷಿಗಳು ಸೂತಮುನಿಯನ್ನು ಪ್ರಶ್ನೆಮಾಡಿದರು—ಓ ಸೂತ ಮುನಿಯೇ, ನೀನು ಹೇಳಿದ ಮಾತು ತುಂಬಾ ಆಶ್ಚರ್ಯಕರವಾಗಿದೆ. ಕಾರಣವು ಒಳಗೆ ಅಡಗಿರುವಂತಿದೆ, ಸರಿಯಾಗಿ ತಿಳಿಯುವುದಿಲ್ಲ. ಆದುದರಿಂದ ತಪಸ್ವಿಗಳಾದ ನಮ್ಮೆಲ್ಲರಿಗೂ ಈ ವಿಷಯದಲ್ಲಿ ಒಂದು ಸಂದೇಹವುಂಟಾಗಿದೆ.

**ಮಾತಾ ವ್ಯಾಸಸ್ಯ ಮೇಧಾವಿನ್ನಾಮ್ನಾ ಸತ್ಯವತೀತಿ ಚ ।**
**ವಿವಾಹಿತಾ ಪುರಾ ಜ್ಞಾತಾ ರಾಜ್ಞಾ ಶಂತನುನಾ ಯಥಾ ॥೨॥**

ತುಂಬಾ ತಿಳಿವಳಿಕೆಯುಳ್ಳ ಸೂತನೇ, ವ್ಯಾಸಮುನಿಯ ತಾಯಿಯ ಹೆಸರು ಸತ್ಯವತಿ ಎಂದೂ, ಅವಳನ್ನು ಪೂರ್ವಕಾಲದಲ್ಲಿ ಮಹಾರಾಜನಾದ ಶಂತನುವು ಮದುವೆಯಾದನೆಂದೂ ತಿಳಿದುಬಂದಿದೆ.

**ತಸ್ಯಾಃ ಪುತ್ರಃ ಕಥಂ ವ್ಯಾಸಃ ಸತೀ ಸ್ವಭವನೇ ಸ್ಥಿತಾ ।**
**ಈದೃಶೀ ಸಾ ಕಥಂ ರಾಜ್ಞಾ ಪುನಃ ಶಂತನುನಾ ವೃತಾ ॥೩॥**

ಮದುವೆಯಾಗಿ ತನ್ನ ಮನೆಯಲ್ಲಿ ಗೃಹಿಣಿಯಾಗಿದ್ದ ಅವಳಿಗೆ ವ್ಯಾಸಮುನಿಯು ಮಗನು ಹೇಗೆ ಆದನು? ಹಾಗಲ್ಲದ ಮೊದಲೇ ಪರಾಶರರಿಂದ ವರಿಸಲ್ಪಟ್ಟು ಪುತ್ರವತಿಯಾಗಿ ತನ್ನ ಮನೆಯಲ್ಲಿರತಕ್ಕ ಆ ಸತ್ಯವತಿಯನ್ನು ಶಂತನುರಾಜನಾದರೂ ಹೇಗೆ ಮದುವೆಯಾದನು?

**ತಸ್ಯಾಃ ಪುತ್ರಾವುಭೌ ಜಾತೌ ತತ್ತ್ವಂ ಕಥಯ ಸುವ್ರತ ।**
**ವಿಸ್ತರೇಣ ಮಹಾಭಾಗ ಕಥಾಂ ಪರಮಪಾವನೀಂ ॥೪॥**

ಮೇಲಾಗಿ ಅವಳಿಗೆ ಇಬ್ಬರು ಮಕ್ಕಳು ಹೇಗೆ ಆದರು? ಇದೆಲ್ಲದರ ನಿಜಾಂಶವನ್ನು ಹೇಳು. ನಿಯಮಗಳನ್ನು ಚನ್ನಾಗಿ ಪಾಲಿಸುವ ತುಂಬ ಪುಣ್ಯಶಾಲಿಯಾದ ಸೂತನೇ, ಅತಿಪವಿತ್ರವಾದ ಈ ಕಥೆಯನ್ನು ವಿವರಗಳೊಡನೆ ವಿಸ್ತಾರವಾಗಿ ಹೇಳು.

**ಉತ್ಪತ್ತಿಂ ವೇದವ್ಯಾಸಸ್ಯ ಸತ್ಯವತ್ಯಾಸ್ತಥಾ ಪುನಃ ।**
**ಶ್ರೋತುಕಾಮಾಃ ಪುನಃ ಸರ್ವೇ ಋಷಯಶ್ಶಂಸಿತವ್ರತಾಃ ॥೫॥**

ಋಗ್ವೇದ ಮುಂತಾದ ವೇದಗಳನ್ನು ನಾಲ್ಕುಭಾಗವಾಗಿ ವಿಂಗಡಿಸಿದ ವ್ಯಾಸಮುನಿಯ ಹುಟ್ಟುವಿಕೆಯನ್ನೂ ಅವನ ತಾಯಿಯಾದ ಸತ್ಯವತಿಯ ಜನ್ಮವೃತ್ತಾಂತವನ್ನೂ ಹೇಳು. ಉಪವಾಸ, ತಪಸ್ಸು ಮೊದಲಾದ ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸಿ ಪರಿಶುದ್ಧರಾದ ಎಲ್ಲ ಋಷಿಗಳೂ ಈ ವಿಷಯವನ್ನು ಕೇಳಬೇಕೆಂದಿರುತ್ತಾರೆ.

॥ ಸೂತ ಉವಾಚ ॥

**ಪ್ರಣಮ್ಯ ಪರಮಾಂ ಶಕ್ತಿಂ ಚತುರ್ವರ್ಗಪ್ರದಾಯಿನೀಂ ।**
**ಆದಿಶಕ್ತಿಂ ವದಿಷ್ಯಾಮಿ ಕಥಾಂ ಪೌರಾಣಿಕೀಂ ಶುಭಾಂ ॥೬॥**

ಸೂತನು ಹೇಳಿದನು—ನಾಲ್ಕು ಪುರುಷಾರ್ಥಗಳನ್ನು ಕೊಡುವ, ಈಶ್ವರನ ಸಾನ್ನಿಧ್ಯಮಾತ್ರದಿಂದ ಈ ಜಗತ್ತನ್ನು ಸೃಷ್ಟಿಸಿ, ಪಾಲಿಸಿ, ಕೊನೆಗೆ ತನ್ನಲ್ಲಿ ಅಡಗಿಸಿಕೊಳ್ಳುವ ಈಶ್ವರಶಕ್ತಿರೂಪವಾದ ಆದಿಶಕ್ತಿಯನ್ನು ನಮಸ್ಕರಿಸಿ ತುಂಬಾ ಹಿಂದೆ ಆಗಿಹೋದ ಮಂಗಳಕರವಾದ ಪುರಾಣಕಥೆಯನ್ನು ಹೇಳುತ್ತೇನೆ.

**ಯಸ್ಯೋಚ್ಚಾರಣಮಾತ್ರೇಣ ಸಿದ್ಧಿರ್ಭವತಿ ಶಾಶ್ವತೀ ।**
**ವ್ಯಾಜೇನಾಪಿ ಹಿ ಬೀಜಸ್ಯ ವಾಗ್ಭವಸ್ಯ ವಿಶೇಷತಃ ॥೭॥**

ಎಲ್ಲ ವಾಙ್ಮಯಕ್ಕೂ ಮೂಲಕಾರಣರೂಪವಾದ ಬೀಜಾಕ್ಷರವನ್ನು ಯಾವುದಾದರೂ ನೆವದಿಂದ ಕೂಡ ಉಚ್ಚಾರಣೆಮಾಡಿದರೂ ನಿತ್ಯವಾದ ಪುರುಷಾರ್ಥದ ಸಿದ್ಧಿಯು ವಿಶೇಷವಾಗಿ ಉಂಟಾಗುವುದೋ ಅಂತಹ ಜಗತ್ತಿಗೆ ಮೂಲವಾದ ಶಕ್ತಿ ದೇವತೆಯನ್ನು ನಮಸ್ಕರಿಸಿ ಕಥೆಯನ್ನು ಹೇಳುತ್ತೇನೆ.

**ಸಮ್ಯಕ್ಸರ್ವಾತ್ಮನಾ ಸರ್ವೈಃ ಸರ್ವಕಾಮಾರ್ಥಸಿದ್ಧಯೇ ।**
**ಸ್ಮರ್ತವ್ಯಾ ಸರ್ವದಾ ದೇವೀ ವಾಂಛಿತಾರ್ಥಪ್ರದಾಯಿನೀ ॥೮॥**

ಸಮಸ್ತ ಇಷ್ಟಾರ್ಥಗಳೂ ಈಡೇರಬೇಕೆನ್ನುವ ಮಾನವರೆಲ್ಲರೂ ಬೇಡಿದ ಎಲ್ಲ ಇಷ್ಟಾರ್ಥಗಳನ್ನೂ ಕೊಡಬಲ್ಲ ಆ ದೇವಿಯನ್ನೇ ಸಕಲರೀತಿಯಿಂದಲೂ ಸ್ಮರಿಸಬೇಕು.

**ರಾಜೋಪರಿಚರೋ ನಾಮ ಧಾರ್ಮಿಕಃ ಸತ್ಯಸಂಗರಃ ।**
**ಚೇದಿದೇಶಪತಿಃ ಶ್ರೀಮಾನ್ ಬಭೂವ ದ್ವಿಜಪೂಜಕಃ ॥೯॥**

ಹಿಂದೆ ಉಪರಿಚರನೆಂಬ ರಾಜನು ವರ್ಣಾಶ್ರಮಧರ್ಮಗಳನ್ನು ಪಾಲಿಸುವವನಾಗಿ ಸತ್ಯಪರತೆಯಿಂದ ಚೇದಿದೇಶವನ್ನು ಆಳುತ್ತಿದ್ದನು. ಅವನು ಯಾವಾಗಲೂ ವಿಮಾನದಲ್ಲೇ ಆಕಾಶದಲ್ಲೇ ಸಂಚರಿಸುತ್ತಲಿದ್ದುದರಿಂದ ಅವನಿಗೆ ಉಪರಿ (ಮೇಲೆ) ಚರ (ತಿರುಗುವವ)ನೆಂದು ಹೆಸರು ಬಂದಿತ್ತು; ಆ ದೊರೆಯು ತೇಜೋವಂತನಾಗಿಯೂ, ದ್ವಿಜರನ್ನು ಪೂಜಿಸುತ್ತಲೂ ಇದ್ದನು.

**ತಪಸಾ ತಸ್ಯ ತುಷ್ಟೇನ ವಿಮಾನಂ ಸ್ಫಾಟಿಕಂ ಶುಭಂ ।**
**ದತ್ತಮಿಂದ್ರೇಣ ತತ್ತಸ್ಮೈ ಸುಂದರಂ ಪ್ರಿಯಕಾಮ್ಯಯಾ ॥೧೦॥**

ಅವನು ತುಂಬಾ ತಪಸ್ವಿಯಾಗಿದ್ದನು. ಅವನ ತಪಸ್ಸಿಗೆ ಒಲಿದು ದೇವೇಂದ್ರನು ಆ ರಾಜನಿಗೆ ಅತಿ ಸುಂದರವೂ ಮನೋಹರವೂ ಆದ ಸ್ಫಟಿಕದಿಂದ ನಿರ್ಮಿಸಲ್ಪಟ್ಟ ವಿಮಾನವೊಂದನ್ನು ಅವನ ಮನಸ್ಸನ್ನು ಸಂತೋಷಗೊಳಿಸಲು ಕೊಟ್ಟನು.

**ತೇನಾರೂಢಸ್ತು ಸರ್ವತ್ರ ಯಾತಿ ದಿವ್ಯೇನ ಭೂಪತಿಃ ।**
**ನ ಭೂಮಾವುಪರಿಸ್ಥೋಽಸೌ ತೇನೋಪರಿಚರೋ ವಸುಃ ॥೧೧॥**

ದೇವಲೋಕದ ಆ ವಿಮಾನವನ್ನೇರಿ ಆ ರಾಜನು ಭೂಮಿಯಲ್ಲಿ ಸಂಚರಿಸುವುದನ್ನು ಬಿಟ್ಟು ಆಕಾಶಮಾರ್ಗದಲ್ಲಿಯೇ ತಿರುಗುತ್ತಿದ್ದನು. ಆದುದರಿಂದ ಅವನಿಗೆ

" ಉಪರಿಚರ "ನೆಂದು ಬಿರುದು ಬಂದಿತ್ತು. ಅವನ ನಿಜವಾದ ಹೆಸರು " ವಸು " ವೆಂಬುದು.

**ವಿಖ್ಯಾತಃ ಸರ್ವಲೋಕೇಷು ಧರ್ಮನಿತ್ಯಃ ಸ ಭೂಪತಿಃ ।**
**ತಸ್ಯ ಭಾರ್ಯಾ ವರಾರೋಹಾ ಗಿರಿಕಾ ನಾಮ ಸುಂದರೀ ॥೧೨॥**

ಆ ರಾಜನು ಒಳ್ಳೆಯ ಧರ್ಮನಿಷ್ಠನಾಗಿ ಎಲ್ಲಾ ಲೋಕಗಳಲ್ಲೂ ಪ್ರಸಿದ್ಧ ನಾಗಿದ್ದನು. ಅವನಿಗೆ ಸುಂದರಿಯಾದ ಗಿರಿಕೆಯೆಂಬ ಹೆಂಡತಿಯು ಇದ್ದಳು. ಅವಳು ತುಂಬಾ ಗುಣವಂತೆಯೂ ಉತ್ಕೃಷ್ಟಳೂ ಸುಖಕರಳೂ ಆಗಿದ್ದಳು.

**ಪುತ್ರಾಶ್ಚಾಸ್ಯ ಮಹಾವೀರ್ಯಾಃ ಪಂಚಾಸನ್ನಮಿತೌಜಸಃ ।**
**ಪೃಥಗ್ದೇಶೇಷು ರಾಜಾನಃ ಸ್ಥಾಪಿತಾಸ್ತೇನ ಭೂಭುಜಾ ॥೧೩॥**

ಅಲ್ಲದೆ ಆ ರಾಜನಿಗೆ ಐದುಮಂದಿ ಗಂಡುಮಕ್ಕಳಿದ್ದರು. ಅವರೆಲ್ಲರೂ ತುಂಬಾ ಬಲಶಾಲಿಗಳೂ, ಪರಾಕ್ರಮಶಾಲಿಗಳೂ ಆಗಿದ್ದರು. ಅವರೆಲ್ಲರಿಗೂ ಆ ರಾಜನು ಬೇರೆ ಬೇರೆ ರಾಜ್ಯಗಳನ್ನು ಕಲ್ಪಿಸಿಕೊಟ್ಟನು. ಅವರು ಬೇರೆ ಬೇರೆ ದೇಶಗಳಿಗೆ ದೊರೆಗಳಾಗಿದ್ದರು.

**ವಸೋಸ್ತು ಪತ್ನೀ ಗಿರಿಕಾ ಕಾಮಾನ್ ಕಾಲೇ ನ್ಯವೇದಯತ್ ।**
**ಋತುಕಾಲಮನುಪ್ರಾಪ್ತಾ ಸ್ನಾತಾ ಪುಂಸವನೇ ಶುಚಿಃ ॥೧೪॥**

ಹೀಗಿರಲು ಒಂದು ಬಾರಿ ರಾಜನ ಹೆಂಡತಿಯಾದ ಗಿರಿಕೆಯು ಋತುಸ್ನಾನ ಕಾಲದಲ್ಲಿ ಸ್ನಾನಮಾಡಿ ಪರಿಶುದ್ಧಳಾಗಿ ಬಂದು ತನಗೆ ಗಂಡುಮಗುವು ಆಗಬೇಕೆಂದು ಇಚ್ಛೆಯನ್ನು ಗಂಡನಿಗೆ ವಿಜ್ಞಾಪಿಸಿದಳು.

**ತದಹಃ ಪಿತರಶ್ಚೈನಮೂಚುರ್ಜಹಿ ಮೃಗಾನಿತಿ ।**
**ತಚ್ಛ್ರುತ್ವಾ ಚಿಂತಯಾಮಾಸ ಭಾರ್ಯಾಮೃತುಮತೀಂ ತಥಾ ॥೧೫॥**

ಎಂದು ಋತುಕಾಲದಲ್ಲಿ ಸ್ನಾನದಿಂದ ಗಿರಿಕೆಯು ಶುದ್ಧಳಾಗಿದ್ದಳೋ ಅಂದೇ, ಅವನ ಪಿತೃಗಳು ಅವನನ್ನು ಕುರಿತು ಮೃಗಗಳನ್ನು ಕೊಂದು ಅವುಗಳ ಮಾಂಸ ದಿಂದ ನಮಗೆ ಶ್ರಾದ್ಧವನ್ನು ಮಾಡು ಎಂದು ಅಪ್ಪಣೆಮಾಡಿದರು. ಅವರ ಮಾತನ್ನೂ

ಕೇಳಿ, ಹೆಂಡತಿಯು ಋತುಸ್ನಾತಳಾಗಿರುವುದನ್ನೂ ನೋಡಿ, ರಾಜನು ಬಹಳವಾಗಿ ಆಲೋಚಿಸಿದನು.

**ಪಿತೃವಾಕ್ಯಂ ಗುರುಂ ಮತ್ವಾ ಕರ್ತವ್ಯಮಿತಿ ನಿಶ್ಚಿತಂ ।**
**ಚಚಾರ ಮೃಗಯಾಂ ರಾಜಾ ಗಿರಿಕಾಂ ಮನಸಾ ಸ್ಮರನ್ ॥೧೬॥**

ಹೀಗೆ ಆಲೋಚಿಸಿ ಕೊನೆಗೆ ಪಿತೃಗಳ ಅಪ್ಪಣೆಯೇ ಮೇಲಾದುದು, ಅದನ್ನೇ ಪಾಲಿಸತಕ್ಕದ್ದು ಎಂದು ನಿಶ್ಚಯಿಸಿ, ಪಿತೃಶ್ರಾದ್ಧಕ್ಕಾಗಿ ಮೃಗಗಳನ್ನು ತರಲು ಬೇಟೆಗೆ ಹೋದನು. ಅಲ್ಲಿಯೂ ಅವನು ಋತುಸ್ನಾತಳಾದ ಗಿರಿಕೆಯನ್ನು ಸ್ಮರಿಸುತ್ತಲೇ ಇದ್ದನು.

**ವನೇ ಸ್ಥಿತಸ್ಸ ರಾಜರ್ಷಿಶ್ಚಿತ್ರೇ ಸಸ್ಮಾರ ಭಾಮಿನೀಂ ।**
**ಅತೀವ ರೂಪಸಂಪನ್ನಾಂ ಸಾಕ್ಷಾಚ್ಛ್ರಿಯಮಿವಾಪರಾಂ ॥೧೭॥**

ಹೀಗೆ ಬೇಟೆಗಾಗಿ ಕಾಡಿಗೆ ಹೋಗಿದ್ದ ಆ ರಾಜರ್ಷಿಯು ಅತಿ ಸುಂದರಿಯಾಗಿಯೂ, ಕಾಂತಿಯ ಸಂಪತ್ತುಳ್ಳವಳಾಗಿ ಎರಡನೆಯ ಲಕ್ಷ್ಮಿಯಂತೆಯೂ ಇದ್ದ ತನ್ನ ಹೆಂಡತಿಯಾದ ಗಿರಿಕೆಯನ್ನು ಮನಸ್ಸಿನಲ್ಲಿಯೇ ಸ್ಮರಿಸುತ್ತಿದ್ದನು.

**ತಸ್ಯ ರೇತಃ ಪ್ರಚಸ್ಕಂದ ಸ್ಮರತಸ್ತಾಂ ಚ ಕಾಮಿನೀಂ ।**
**ವಟಪತ್ರೇ ತು ತದ್ರಾಜಾ ಸ್ಕನ್ನಮಾತ್ರಂ ಸಮಾಕ್ಷಿಪತ್ ॥೧೮॥**

ಹೀಗೆ ಆ ರಾಜನು ತನ್ನ ಪ್ರಿಯೆಯನ್ನು ಸ್ಮರಿಸುತ್ತಿರಲು ಅವನಿಗೆ ವೀರ್ಯ ಸ್ಖಲನವಾಯಿತು. ಅವನು ಆ ವೀರ್ಯವನ್ನು ಸ್ಖಲನವಾದ ಕೂಡಲೇ ಒಂದು ಆಲದ ಎಲೆಯಲ್ಲಿ ಇರಿಸಿದನು.

**ಇದಂ ವೃಥಾ ಪರಿಸ್ಕನ್ನಂ ರೇತೋ ವೈ ನ ಭವೇತ್ಕಥಂ ।**
**ಋತುಕಾಲಂ ಚ ವಿಜ್ಞಾಯ ಮತಿಂ ಚಕ್ರೇ ನೃಪಸ್ತದಾ ॥೧೯॥**

ಸ್ಖಲಿತವಾದ ಈ ವೀರ್ಯವು ವ್ಯರ್ಥವಾಗದೇ ಇರುವುದು ಹೇಗೆ? ನನ್ನ ಪತ್ನಿಯಾದರೋ ಋತುಕಾಲದಲ್ಲಿ ಗರ್ಭಧಾರಣಕ್ಕೆ ಯೋಗ್ಯವಾದ ಕಾಲದಲ್ಲಿ ಇರುತ್ತಾಳೆ, ಎಂದು ಆಲೋಚಿಸಿ ಆಗ ರಾಜನು ಒಂದು ನಿಶ್ಚಯಕ್ಕೆ ಬಂದನು.

**ಅಮೋಘಂ ಸರ್ವಥಾ ವೀರ್ಯಂ ಮಮ ಚೈತನ್ನ ಸಂಶಯಃ ।**
**ಪ್ರಿಯಾಯೈ ಪ್ರೇಷಯಾಮ್ಯೇತದಿತಿ ಬುದ್ಧಿಮಕಲ್ಪಯತ್ ॥೨೦॥**

ನನ್ನ ಈ ವೀರ್ಯವು ಸರ್ವಥಾ ವ್ಯರ್ಥವಾಗತಕ್ಕುದಲ್ಲವು. ಈ ವಿಷಯದಲ್ಲಿ ಸಂಶಯವಿಲ್ಲ. ಆದುದರಿಂದ ಈ ವೀರ್ಯವನ್ನು ಪಟ್ಟಣದಲ್ಲಿ ಅಂತಃಪುರದಲ್ಲಿರುವ ನನ್ನ ಪ್ರಿಯೆಗೆ ಕಳುಹಿಸುವೆನು ಎಂದು ನಿಶ್ಚಯಿಸಿದನು.

**ಶುಕ್ರಪ್ರಸ್ಥಾಪನೇ ಕಾಲಂ ಮಹಿಷ್ಯಾಃ ಪ್ರಸಮೀಕ್ಷ್ಯ ಸಃ ।**
**ಅಭಿಮಂತ್ರ್ಯಾಥ ತದ್ವೀರ್ಯಂ ವಟಪರ್ಣಪುಟೇ ಕೃತಂ ॥೨೦॥**

ತನ್ನ ರಾಣಿಗೆ ಆ ವೀರ್ಯವನ್ನು ಕಳುಹಿಸಲು ಸರಿಯಾದ ನಕ್ಷತ್ರ ವಾರ ಮುಹೂರ್ತವಿರುವ ಕಾಲವನ್ನು ನೋಡಿ, ಆಗ ಅದನ್ನು ತಲಪಿಸಲು, ಆಲದೆಲೆಯಲ್ಲಿರುವ ಅದನ್ನು ಹಾಳಾಗದಂತೆ ಮಂತ್ರಿಸಿಟ್ಟನು.

**ಪಾರ್ಶ್ವಸ್ಥಂ ಶ್ಯೇನಮಾಭಾಷ್ಯ ರಾಜೋವಾಚ ದ್ವಿಜಂ ಪ್ರತಿ ।**
**ಗೃಹಾಣೇದಂ ಮಹಾಭಾಗ ಗಚ್ಛ ಶೀಘ್ರಂ ಗೃಹಂ ಮಮ ॥೨೨॥**

ಹಾಗೂ ತನ್ನ ಪಕ್ಕದಲ್ಲಿಯೇ ಇದ್ದ ತಾನು ಸಾಕಿದ್ದ ಗಿಡುಗವನ್ನು ಕುರಿತು ರಾಜನು ಹೇಳಿದನು—ಎಲೈ ಪುಣ್ಯಶಾಲಿಯಾದ ಪಕ್ಷಿಯೇ, ಈ ವೀರ್ಯವನ್ನು ತೆಗೆದುಕೊಂಡು ಕೂಡಲೆ ನೇರವಾಗಿ ನಮ್ಮ ಮನೆಗೆ ಹೊರಡು.

**ಮತ್ಪ್ರಿಯಾರ್ಥಮಿದಂ ಸೌಮ್ಯ ಗೃಹೀತ್ವಾ ತ್ವಂ ಗೃಹಂ ನಯ ।**
**ಗಿರಿಕಾಯೈ ಪ್ರಯಚ್ಛಾಶು ತಸ್ಯಾಸ್ತ್ವಾರ್ತವಮದ್ಯ ವೈ ॥೨೩॥**

ಎಲೈ ಸುಗುಣಶಾಲಿಯಾದ ಪಕ್ಷಿಯೇ, ಈ ವೀರ್ಯವನ್ನು ನನ್ನ ಪ್ರಿಯೆಗಾಗಿ ಮನೆಗೆ ತೆಗೆದುಕೊಂಡುಹೋಗು. ಮತ್ತು ನನ್ನ ಪ್ರಿಯತಮಳಾದ ಗಿರಿಕೆಗೆ ಆದಷ್ಟು ಜಾಗ್ರತೆಯಾಗಿ ಇದನ್ನು ಕೊಡು. ಆವಳಿಗೀಗ ಋತುಕಾಲವಾದುದರಿಂದ ಗರ್ಭಧಾರಣೆಗೆ ಯೋಗ್ಯವಾದ ಸಮಯವಾಗಿದೆ.

|| ಸೂತ ಉವಾಚ ||

**ಇತ್ಯುಕ್ತ್ವಾ ಪ್ರದದೌ ಪರ್ಣಂ ಶ್ಯೇನಾಯ ನೃಪಸತ್ತಮಃ ।**
**ಸ ಗೃಹೀತ್ವೋತ್ಪಪಾತಾಶು ಗಗನಂ ಗತಿವಿತ್ತಮಃ ॥೨೪॥**

ಸೂತಮುನಿಯು ಹೇಳಿದನು—ಹೀಗೆ ಹೇಳಿ ರಾಜನು, ತನ್ನ ವೀರ್ಯಪೂರಿತವಾದ ಆ ಆಲದ ಎಲೆಯನ್ನು ಆ ಸಾಕಿದ ಗಿಡುಗನ ವಶಕ್ಕೆ ಕೊಟ್ಟನು. ವೇಗ

ಗಮನದಲ್ಲಿ ಕುಶಲವಾದ ಆ ಪಕ್ಷಿಯು ಆ ಎಲೆಯನ್ನು ತೆಗೆದುಕೊಂಡು ಆಕಾಶದಲ್ಲಿ ಜಾಗ್ರತೆಯಾಗಿ ಹಾರಿಹೋಯಿತು.

**ಗಚ್ಛಂತಂ ಗಗನೇ ಶ್ಯೇನಂ ಧೃತ್ವಾ ಚಂಚುಪುಟೇ ಪುಟಂ ।**
**ತಮಪಶ್ಯದಥಾಽಽಯಾಂತಂ ಖಗಂ ಶ್ಯೇನಸ್ತಥಾ ಪರಃ ॥೨೫॥**

ಆಕಾಶದಲ್ಲಿ ಆ ಗಿಡುಗವು ತನ್ನ ಕೊಕ್ಕಿನಲ್ಲಿ ಆ ಆಲದ ಎಲೆಯನ್ನು ಕಚ್ಚಿ ಕೊಂಡು ಹಾರಿಹೋಗುತ್ತಲಿರುವಾಗ ಇದನ್ನು ಎದುರಿಗೆ ಹಾರಿಬರುತ್ತಿರುವ ಇನ್ನೊಂದು ಗಿಡುಗವು ನೋಡಿತು.

**ಆಮಿಷಂ ಸ ತು ವಿಜ್ಞಾಯ ಶೀಘ್ರಮಭ್ಯದ್ರವತ್ಖಗಂ ।**
**ತುಂಡಯುದ್ಧಮಥಾಕಾಶೇ ತಾವುಭೌ ಸಮಚಕ್ರತುಃ ॥೨೬॥**

ಆ ಇನ್ನೊಂದು ಗಿಡುಗವು ಆ ಆಲದ ಎಲೆಯನ್ನು ಮಾಂಸವೆಂದು ದೂರದಲ್ಲಿ ತಿಳಿದು ಆ ಗಿಡುಗವನ್ನು ಎದುರಿಸಿತು. ಆ ಎರಡು ಗಿಡುಗಗಳೂ ಆಕಾಶದಲ್ಲಿ ಆಗ ಪರಸ್ಪರವಾಗಿ ಕೊಕ್ಕಿನಿಂದ ಹೊಡೆದು ತಿವಿಯುತ್ತಾ ಯುದ್ಧವನ್ನು ಮಾಡಿದುವು.

**ಯುಧ್ಯತೋರಪತದ್ರೇತಸ್ತಚ್ಚಾಪಿ ಯಮುನಾಂಭಸಿ ।**
**ಖಗೌ ತೌ ನಿರ್ಗತೌ ಕಾಮಂ ಪುಟಕೇ ಪತಿತೇ ತದಾ ॥೨೭॥**

ಹೀಗೆ ಆ ಪಕ್ಷಿಗಳು ಯುದ್ಧಮಾಡುತ್ತಲಿರಲು, ಆ ರೇತಸ್ಸಿನಿಂದ ಕೂಡಿದ ಎಲೆಯು ಯಮುನಾನದಿಯ ಜಲದಲ್ಲಿ ಬಿದ್ದಿತು. ಅದು ಬಿದ್ದಕೂಡಲೆ ಆ ಎರಡು ಪಕ್ಷಿಗಳು ತಮಗೆ ಬೇಕಾದೆಡೆಗೆ ಹೊರಟುಹೋದುವು.

**ಏತಸ್ಮಿನ್ ಸಮಯೇ ಕಾಚಿದದ್ರಿಕಾ ನಾಮ ಚಾಪ್ಸರಾಃ ।**
**ಬ್ರಾಹ್ಮಣಂ ಸಮನುಪ್ರಾಪ್ತಂ ಸಂಧ್ಯಾವಂದನತತ್ಪರಂ ॥೨೮॥**

ಈ ಪಕ್ಷಿಗಳು ಯುದ್ಧಮಾಡುತ್ತಲಿದ್ದ ಸಮಯದಲ್ಲಿಯೇ ಅದ್ರಿಕೆಯೆಂಬ ಅಪ್ಸರಸ್ತ್ರೀಯು ಯಮುನಾನದಿಗೆ ಜಲಕ್ರೀಡೆಗೆ ಬಂದಿದ್ದಳು. ಅದೇ ನದಿಯಲ್ಲಿ ಆಗ ಒಬ್ಬ ಬ್ರಾಹ್ಮಣನು ಅಲ್ಲಿ ಸಂಧ್ಯಾವಂದನೆಯನ್ನು ಮಾಡುತ್ತಲಿದ್ದನು.

**ಕುರ್ವಂತೀ ಜಲಕೇಲಿಂ ಸಾ ಜಲೇ ಮಗ್ನಾ ಚಚಾರ ಸಾ ।**
**ಜಗ್ರಾಹ ಚರಣಂ ನಾರೀ ದ್ವಿಜಸ್ಯ ವರವರ್ಣಿನೀ ॥೨೯॥**

ಹೀಗೆ ಉತ್ತಮಜಾತಿಯ ಆ ಅಪ್ಸರಸ್ತ್ರೀಯು ಜಲಕ್ರೀಡೆಯನ್ನು ಮಾಡುತ್ತಾ ನೀರಿನಲ್ಲಿ ಮುಳುಗಿಕೊಂಡೇ ತಿರುಗುತ್ತಾ ಸಂಧ್ಯಾವಂದನೆಯನ್ನು ಮಾಡುತ್ತಲಿದ್ದ ಆ ಬ್ರಾಹ್ಮಣನ ಕಾಲನ್ನು ಹಿಡಿದುಕೊಂಡಳು.

**ಪ್ರಾಣಾಯಾಮಪರಃ ಸೋಽಥ ದೃಷ್ಟ್ವಾ ತಾಂ ಕಾಮಚಾರಿಣೀಂ ।**
**ಶಶಾಪ ಭವ ಮತ್ಸ್ಯೀ ತ್ವಂ ಧ್ಯಾನವಿಘ್ನಕರೀ ಯತಃ ॥೩೦॥**

ಶ್ವಾಸವನ್ನು ನಿಲ್ಲಿಸಿ ಧ್ಯಾನಮಗ್ನನಾಗಿದ್ದ ಆ ವಿಪ್ರನು, ಆ ಅಪ್ಸರಸ್ತ್ರೀಯು ಕಾಲು ಹಿಡಿದುಕೊಂಡುದರಿಂದ ಎಚ್ಚೆತ್ತು ಮನಬಂದಂತೆ ತಿರುಗುತ್ತಲಿರುವ ಅವಳನ್ನು ನೋಡಿ—ನನ್ನ ಧ್ಯಾನಕ್ಕೆ ತೊಂದರೆಯನ್ನುಂಟುಮಾಡಿದ್ದರಿಂದ ನೀನು ಹೆಣ್ಣು ಮೀನಾಗು ಎಂದು ಶಪಿಸಿದನು.

**ಸಾ ಶಪ್ತಾ ವಿಪ್ರಮುಖ್ಯೇನ ಬಭೂವ ಯಮುನಾಚರೀ ।**
**ಶಫರೀರೂಪಸಂಪನ್ನಾ ಹ್ಯದ್ರಿಕಾ ಚ ವರಾಪ್ಸರಾ ॥೩೧॥**

ಹೀಗೆ ಆ ಬ್ರಾಹ್ಮಣೋತ್ತಮನ ಶಾಪಕ್ಕೆ ಗುರಿಯಾದ ಆ ಶ್ರೇಷ್ಠಳಾದ ಅಪ್ಸರ ಸ್ತ್ರೀಯಾದ ಅದ್ರಿಕೆಯು ಯಮುನಾ ನದಿಯಲ್ಲಿ ಹೆಣ್ಣುಮೀನಾಗಿ ಸಂಚರಿಸುತ್ತಿದ್ದಳು.

**ಶ್ಯೇನಪಾದಪರಿಭ್ರಷ್ಟಂ ತಚ್ಛುಕ್ರಮಥ ವಾಸವೀ ।**
**ಜಗ್ರಾಹ ತರಸಾಽಭ್ಯೇತ್ಯ ಸಾದ್ರಿಕಾ ಮತ್ಸ್ಯರೂಪಿಣೀ ॥೩೨॥**

ಯಾವಾಗ ಅವಳು ಮೀನಾಗಿ ಸಂಚರಿಸುತ್ತಿದ್ದಳೋ ಆಗಲೇ ಮೇಲಿನಿಂದ ಗಿಡುಗನ ಕೊಕ್ಕಿನಿಂದ ಜಾರಿದ ಉಪರಿಚರರಾಜನ ಆ ವೀರ್ಯವು ನೀರಿನಲ್ಲಿ ಬಿದ್ದಿತು. ಆಗ ಮತ್ಸ್ಯರೂಪವನ್ನು ಧರಿಸಿದವಳಾಗಿದ್ದ ಇಂದ್ರಲೋಕದ ಅಪ್ಸರೆಯಾದ ಆ ಅದ್ರಿಕೆಯು ಆ ವೀರ್ಯವನ್ನು ಜಾಗ್ರತೆಯಾಗಿ ಸ್ವೀಕರಿಸಿದಳು.

**ಅಥ ಕಾಲೇನ ಕಿಯತಾ ಮತ್ಸ್ಯೀಂ ತಾಂ ಮತ್ಸ್ಯಜೀವನಃ ।**
**ಸಂಪ್ರಾಪ್ತೇ ದಶಮೇ ಮಾಸಿ ಬಬಂಧ ತಾಂ ಮನೋರಮಾಂ ॥೩೩॥**

ಹೀಗೆ ಕೆಲವು ಕಾಲ ಕಳೆಯಲು, ಆ ಹೆಣ್ಣುಮೀನು ಹತ್ತು ತಿಂಗಳ ಬಸುರಿ ಯಾಯಿತು. ಆಗ ಮೀನು ಮಾರಿ ಜೀವಿಸುವ ಒಬ್ಬ ಬೆಸ್ತರವನು ಬಲೆ ಹಾಕಿ ಆ ಮೀನನ್ನು ಹಿಡಿದನು.

**ಉದರಂ ವಿದದಾರಾಶು ಸ ತಸ್ಯಾ ಮತ್ಸ್ಯಜೀವನಃ ।**
**ಯುಗ್ಮಂ ವಿನಿಃಸೃತಂ ತಸ್ಮಾದುದರಾನ್ಮಾನುಷಾಕೃತಿ ॥೩೪॥**

ಆ ಬೆಸ್ತರವನು ಜಾಗ್ರತೆಯಾಗಿ ಆ ಹೆಣ್ಣುಮೀನಿನ ಹೊಟ್ಟೆಯನ್ನು ಎರಡು ಭಾಗವಾಗಿ ಸೀಳಿದನು. ಆಗ ಅದರ ಹೊಟ್ಟೆಯಿಂದ ಮನುಷ್ಯರೂಪದ ಅವಳಿ ಮಕ್ಕಳು ಇಬ್ಬರು ಈಚೆಗೆ ಬಂದರು.

**ಬಾಲಃ ಕುಮಾರಃ ಸುಭಗಸ್ತಥಾ ಕನ್ಯಾ ಶುಭಾನನಾ ।**
**ದೃಷ್ಟ್ವಾಽಶ್ಚರ್ಯಮಿದಂ ಸೋಽಥ ವಿಸ್ಮಯಂ ಪರಮಂ ಗತಃ ॥೩೫॥**

ಆ ಅವಳಿ ಮಕ್ಕಳಲ್ಲಿ ಒಂದು ಸುಂದರವಾದ ಗಂಡುಮಗುವೂ, ಇನ್ನೊಂದು ಮಂಗಳಕರವಾದ ಮುಖವುಳ್ಳ ಕನ್ಯೆಯೂ ಆಗಿದ್ದರು. ಅದ್ಭುತವಾದ ಇದನ್ನು ನೋಡಿ ಆ ಬೆಸ್ತರವನು ತುಂಬಾ ಆಶ್ಚರ್ಯಗೊಂಡನು.

**ರಾಜ್ಞೇ ನಿವೇದಯಾಮಾಸ ಪುತ್ರೌ ದ್ವೌ ತು ಝಷೋದ್ಭವೌ ।**
**ರಾಜಾಪಿ ವಿಸ್ಮಯಾವಿಷ್ಟಃ ಸುತಂ ಜಗ್ರಾಹ ತಂ ಶುಭಂ ॥೩೬॥**

ತನ್ನ ದೇಶದ ರಾಜನಾದ ಉಪರಿಚರನಿಗೆ ಈ ವಿಷಯವನ್ನು ಅರಿಕೆಮಾಡಿ ಮೀನಿನಲ್ಲಿ ಹುಟ್ಟಿದ್ದ ಆ ಎರಡು ಮಕ್ಕಳನ್ನೂ ಆ ಬೆಸ್ತರವನು ತಂದೊಪ್ಪಿಸಿದನು. ಆ ರಾಜನು ಆಶ್ಚರ್ಯಪಟ್ಟವನಾಗಿ ಆ ಮಕ್ಕಳು ತನ್ನ ಹಾಗಿದ್ದುದನ್ನು ನೋಡಿ ತನ್ನವೆಂದು ತಿಳಿದು ಆ ಗಂಡುಮಗನನ್ನು ತಾನು ಸ್ವೀಕರಿಸಿದನು.

**ಸ ಮತ್ಸ್ಯೋ ನಾಮ ರಾಜಾಸೌ ಧಾರ್ಮಿಕಃ ಸತ್ಯಸಂಗರಃ ।**
**ವಸುಪುತ್ರೋ ಮಹಾತೇಜಾಃ ಪಿತ್ರಾ ತುಲ್ಯಪರಾಕ್ರಮಃ ॥೩೭॥**

ಆ ಮಗುವೇ ಮುಂದೆ ಮತ್ಸ್ಯರಾಜನೆಂದು ಪ್ರಸಿದ್ಧನಾದನು. ಅವನು ಧರ್ಮನಿಷ್ಠನಾಗಿಯೂ, ಹೆಚ್ಚಾದ ತೇಜಸ್ಸುಳ್ಳವನೂ ಸತ್ಯಪ್ರತಿಜ್ಞನಾಗಿಯೂ, ತನ್ನ ತಂದೆಯಾದ ಉಪರಿಚರವಸುವಿನಂತೆ ಪರಾಕ್ರಮವುಳ್ಳವನೂ, ಬಲಶಾಲಿಯೂ ಆಗಿದ್ದನು.

**ಕನ್ಯಕಾ ವಸುನಾ ದತ್ತಾ ತರಸಾ ಜಲಜೀವಿನೇ ।**
**ನಾಮ್ನಾ ಕಾಲೀತಿ ವಿಖ್ಯಾತಾ ತಥಾ ಮತ್ಸ್ಯೋದರೀತಿ ಚ ॥೩೮॥**

ಎರಡನೆಯ ಮಗಳಾದ ಆ ಕನ್ಯೆಯನ್ನು ರಾಜನು ಕೃತಜ್ಞತೆಯಿಂದ ಆ ಬೆಸ್ತರವನಿಗೇ ಕೊಟ್ಟನು. ಅವಳು ಕಾಲಿಯೆಂದೂ ಮತ್ಸ್ಯೋದರಿಯೆಂದೂ ಪ್ರಸಿದ್ಧಳಾದಳು.

**ಮತ್ಸ್ಯಗಂಧೇತಿ ನಾಮ್ನಾ ವೈ ಗುಣೇನ ಸಮಜಾಯತ ।**
**ವಿವರ್ಧಮಾನಾ ದಾಶಸ್ಯ ಗೃಹೇ ಸಾ ವಾಸವೀ ಶುಭಾ ॥೩೯॥**

ಅವಳು ವಾಸನೆಯಲ್ಲಿ ಮೀನಿನ ಗಂಧವುಳ್ಳವಳಾದಕಾರಣ ಮತ್ಸ್ಯಗಂಧೆ ಎಂದು ಹೆಸರುಳ್ಳವಳಾದಳು. ಆ ಬೆಸ್ತರವನ ಮನೆಯಲ್ಲಿ ಹೀಗೆ ಆ ಇಂದ್ರಲೋಕದ ಅಪ್ಸರೆಯ ಮತ್ತು ವಸುವಿನ ಮಗಳಾದ ಆ ಹುಡುಗಿಯು ಬೆಳೆಯುತ್ತಿದ್ದಳು.

॥ ಋಷಯ ಊಚುಃ ॥

**ಅದ್ರಿಕಾ ಮುನಿನಾ ಶಪ್ತಾ ಮತ್ಸ್ಯೀ ಜಾತಾ ವರಾಪ್ಸರಾಃ ।**
**ವಿದಾರಿತಾ ಚ ದಾಶೇನ ಮೃತಾ ಚ ಭಕ್ಷಿತಾ ಪುನಃ ॥೪೦॥**

ಋಷಿಗಳು ಸೂತನನ್ನು ಕೇಳಿದರು—ಆ ಬ್ರಾಹ್ಮಣನಿಂದ ಶಪಿಸಲ್ಪಟ್ಟ ಶ್ರೇಷ್ಠ ಅಪ್ಸರೆಯಾದ ಅದ್ರಿಕೆಯು ಹೆಣ್ಣುಮೀನಾದಳು. ಮುಂದೆ ಬೆಸ್ತರವನು ಅದನ್ನು ಹಿಡಿದು ಸೀಳಿದನು. ಅದರಿಂದ ಅದು ಸತ್ತಿತು. ಹಾಗೂ ಅದನ್ನು ಬೆಸ್ತನು ಭಕ್ಷಿಸಿದನು.

**ಕಿಂ ಬಭೂವ ಪುನಸ್ತಸ್ಯಾ ಅಪ್ಸರಾಯಾ ವದಸ್ವ ತತ್ ।**
**ಶಾಪಸ್ಯಾಂತಂ ಕಥಂ ಸೂತ ಕಥಂ ಸ್ವರ್ಗಮವಾಪ ಸಾ ॥೪೧॥**

ಆ ಅಪ್ಸರೆಗೆ ಮುಂದೇನಾಯಿತು? ಶಾಪದ ಅವಸಾನವು ಹೇಗೆ ಉಂಟಾಯಿತು? ಕೊನೆಗೆ ಅವಳು ಹೇಗೆ ತನ್ನ ಸ್ಥಾನವಾದ ಸ್ವರ್ಗವನ್ನು ಸೇರಿದಳು? ಓ ಸೂತಮುನಿಯೇ, ಇದೆಲ್ಲವನ್ನೂ ನಮಗೆ ಹೇಳು.

॥ ಸೂತ ಉವಾಚ ॥

**ಶಪ್ತಾ ಯದಾ ಸಾ ಮುನಿನಾ ವಿಸ್ಮಿತಾ ಸಂಬಭೂವ ಹ ।**
**ಸ್ತುತಿಂ ಚಕಾರ ವಿಪ್ರಸ್ಯ ದೀನೇವ ರುದತೀ ತದಾ ॥೪೨॥**

ಸೂತಮುನಿಯು ಹೀಗೆ ಹೇಳಿದನು—ಯಾವಾಗ ಆ ಅಪ್ಸರೆಯನ್ನು ಬ್ರಾಹ್ಮಣನು ಶಪಿಸಿದನೋ ಆಗ ಅವಳು ತುಂಬಾ ಅಚ್ಚರಿಯಿಂದ ಚಕಿತಳಾಗಿ, ದೀನತೆಯಿಂದ ಅಳುತ್ತಾ ಆ ಬ್ರಾಹ್ಮಣನನ್ನು ಸ್ತೋತ್ರಮಾಡಿದಳು.

**ದಯಾವಾನ್ ಬ್ರಾಹ್ಮಣಃ ಪ್ರಾಹ ತಾಂ ತದಾ ರುದತೀಂ ಸ್ತ್ರಿಯಂ ।**
**ಮಾ ಶೋಕಂ ಕುರು ಕಲ್ಯಾಣಿ ಶಾಪಾಂತಂ ತೇ ವದಾಮ್ಯಹಂ ॥೪೩॥**

ಆಗ ತಿಳಿವಳಿಕೆ ಇಲ್ಲದೆ ತಪ್ಪುಮಾಡಿದ ಅವಳಲ್ಲಿ ಮನಸ್ಸು ಕರಗಿ ದಯಾಶಾಲಿಯಾದ ಆ ಬ್ರಾಹ್ಮಣನು ಅಳುತ್ತಲಿರುವ ಅಪ್ಸರೆಯನ್ನು ಕುರಿತು ಹೀಗೆ ಹೇಳಿದನು. ಓ ಮಂಗಳಕರಳೇ, ದುಃಖಿಸಬೇಡ. ನಾನು ಕೊಟ್ಟ ಶಾಪದ ಕೊನೆಯನ್ನು ನಿನಗೆ ಹೇಳುವೆನು.

**ಮತ್ಕ್ರೋಧಶಾಪಯೋಗೇನ ಮತ್ಸ್ಯಯೋನಿಂ ಗತಾ ಶುಭೇ ।**
**ಮಾನುಷೌ ಜನಯಿತ್ವಾ ತ್ವಂ ಶಾಪಮೋಕ್ಷಮವಾಪ್ಸ್ಯಸಿ ॥೪೪॥**

ಓ ಕಲ್ಯಾಣಿಯೇ, ಸಿಟ್ಟಿನಿಂದ ಉಂಟಾದ ನನ್ನ ಶಾಪಸಂಬಂಧದಿಂದ ನೀನು ಹೆಣ್ಣುಮೀನಾಗುವೆ. ಆದರೆ ನೀನು ಇದೇ ಮೀನಿನ ಅವಸ್ಥೆಯಲ್ಲಿಯೇ ಮಾನವ ಕುಮಾರರಿಬ್ಬರನ್ನು ಅವಳಿಯಾಗಿ ಹಡೆದುದೇ ಆದರೆ ನಿನಗೆ ಶಾಪವಿಮೋಚನವಾಗುವುದು.

**ಇತ್ಯುಕ್ತಾ ತೇನ ಸಾ ಪ್ರಾಪ ಮತ್ಸ್ಯದೇಹಂ ನದೀಜಲೇ ।**
**ಬಾಲಕೌ ಜನಯಿತ್ವಾ ಸಾ ಮೃತಾ ಮುಕ್ತಾ ಚ ಶಾಪತಃ ॥೪೫॥**

ಹೀಗೆ ಆ ವಿಪ್ರನು ಹೇಳಿದಮೇಲೆ ಯಮುನಾನದಿಯ ಜಲದಲ್ಲಿ ಅವಳು ಮತ್ಸ್ಯದೇಹವನ್ನು ಪಡೆದಳು. ಮುಂಪೆ ನಿಮಗೆ ತಿಳಿದಂತೆ ಅವಳಿ ಮಕ್ಕಳನ್ನು ಹೆತ್ತು ಮೃತಳಾಗಿ ಬ್ರಾಹ್ಮಣಶಾಪದಿಂದ ಮುಕ್ತಳಾದಳು.

**ಸಂತ್ಯಜ್ಯ ರೂಪಂ ಮತ್ಸ್ಯಸ್ಯ ದಿವ್ಯರೂಪಮವಾಪ್ಯ ಚ ।**
**ಜಗಾಮಾಮರಮಾರ್ಗಂ ಚ ಶಾಪಾಂತೇ ವರವರ್ಣಿನೀ ॥೪೬॥**

ಶಾಪಮುಕ್ತಳಾದ ಮೇಲೆ ಮತ್ಸ್ಯದೇಹವನ್ನು ಬಿಟ್ಟು ತನ್ನ ದೇವಲೋಕದ ಮನೋಹರವಾದ ರೂಪವನ್ನು ಪಡೆದು, ಮೇಲಾದ ಶರೀರಕಾಂತಿಯುಳ್ಳ ಅವಳು ದೇವಮಾರ್ಗವನ್ನು ಪಡೆದು ಹೊರಟುಹೋದಳು.

**ಏವಂ ಜಾತಾ ವರಾ ಪುತ್ರೀ ಮತ್ಸ್ಯಗಂಧಾ ವರಾನನಾ ।**
**ಪುತ್ರೀ ಚ ಪಾಲ್ಯಮಾನಾ ಸಾ ದಾಶಗೇಹೇ ವ್ಯವರ್ಧತ ॥೪೭॥**

ಈ ಪ್ರಕಾರ ಸುಂದರವಾದ ಮುಖವುಳ್ಳ, ಮತ್ಸ್ಯಗಂಧವುಳ್ಳ, ವಸುವಿನ ಮಗಳಾದ, ಮೀನಿನ ಉದರದಲ್ಲಿ ಜನಿಸಿದ ಆ ಪುತ್ರಿಯು ತನ್ನ ಮಗಳಂತೆ ಆ ಬೆಸ್ತರವನಿಂದ ಪಾಲಿಸಲ್ಪಡುತ್ತಾ ಅವನ ಮನೆಯಲ್ಲಿ ಬೆಳೆಯುತ್ತಿದ್ದಳು.

**ಮತ್ಸ್ಯಗಂಧಾ ತದಾ ಜಾತಾ ಕಿಶೋರೀ ಚಾತಿಸುಪ್ರಭಾ ।**
**ತಸ್ಯ ಕಾರ್ಯಾಣಿ ಕುರ್ವಾಣಾ ವಾಸವೀ ಚಾತಿಸುಪ್ರಭಾ ॥೪೮॥**

ಆಮೇಲೆ ಅವಳು ಸುಕುಮಾರಿಯಾಗಿಯೂ, ಹೆಚ್ಚಾದ ಕಾಂತಿಯುಳ್ಳವಳಾಗಿಯೂ, ವಸುರಾಜನ ಮಗಳಾಗಿದ್ದೂ ಮೀನಿನ ವಾಸನೆಯುಳ್ಳವಳಾಗಿರುತ್ತಾ ಆ ಬೆಸ್ತರ ದೋಣಿ, ಹರಿಗೋಲು ಮುಂತಾದುವನ್ನು ಯಮುನೆಯಲ್ಲಿ ದಾಟಿಸುವುದೇ ಮುಂತಾದ ಅವನ ಕೆಲಸಗಳನ್ನು ಮಾಡುತ್ತಾ ಮತ್ಸ್ಯಗಂಧೆ ಎಂದು ಪ್ರಸಿದ್ಧಳಾದಳು.

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಪ್ರಥಮೋಽಧ್ಯಾಯಃ

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯಸ್ಕಂಧದಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ದ್ವಿತೀಯಸ್ಕಂಧೇ

|| ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ಸೂತ ಉವಾಚ ||

**ಏಕದಾ ತೀರ್ಥಯಾತ್ರಾಯಾಂ ವ್ರಜನ್ ಪಾರಾಶರೋ ಮುನಿಃ |**
**ಆಜಗಾಮ ಮಹಾತೇಜಾಃ ಕಾಲಿಂದ್ಯಾಸ್ತಟಮುತ್ತಮಂ ||೧||**

ಸೂತಮಹರ್ಷಿಯು ಶೌನಕಾದಿ ಋಷಿಗಳನ್ನು ಕುರಿತು ಹೀಗೆ ಹೇಳಿದನು– ಒಂದಾನೊಂದು ಸಮಯದಲ್ಲಿ ಮಹಾತೇಜಸ್ವಿಯಾದ ಪರಾಶರಮುನಿಯು ತೀರ್ಥ ಯಾತ್ರೆಯನ್ನು ನೆರವೇರಿಸುವ ಉದ್ದೇಶದಿಂದ ಪ್ರಯಾಣಮಾಡುತ್ತಾ ಶ್ರೇಷ್ಠವಾದ ಆ ಯಮುನಾನದಿಯ ದಡಕ್ಕೆ ಬಂದನು.

**ನಿಷಾದಮಾಹ ಧರ್ಮಾತ್ಮಾ ಕುರ್ವಂತಂ ಭೋಜನಂ ತದಾ |**
**ಪ್ರಾಪಯಸ್ವ ಪರಂ ಪಾರಂ ಕಾಲಿಂದ್ಯಾ ಉಡುಪೇನ ಮಾಂ ||೨||**

ಆಗ ಧರ್ಮಶೀಲನಾದ ಪರಾಶರಮುನಿಯು, ಊಟಮಾಡುತ್ತಿರುವ ದೋಣಿ ನಡೆಸುವ ಬೆಸ್ತರವನನ್ನು ಕುರಿತು, ಎಲೈ ಬೆಸ್ತರವನೇ, ನನ್ನನ್ನು ದೋಣಿಯಿಂದ ಈ ಯಮುನಾನದಿಯ ಆಚೆಯ ದಡವನ್ನು ತಲಪಿಸು ಎಂದು ಹೇಳಿದನು.

**ದಾಶಃ ಶ್ರುತ್ವಾ ಮುನೇರ್ವಾಕ್ಯಂ ಕುರ್ವಾಣೋ ಭೋಜನಂ ತಟೇ |**
**ಉವಾಚ ತಾಂ ಸುತಾಂ ಬಾಲಾಂ ಮತ್ಸ್ಯಗಂಧಾಂ ಮನೋರಮಾಂ ||೩||**

ಬಿಸ್ತರವನು ಪರಾಶರಮುನಿಯ ಮಾತನ್ನು ಕೇಳಿ, ತಾನು ದಡದಲ್ಲಿ ಊಟ ಮಾಡುತ್ತಿದ್ದುದರಿಂದ, ತನ್ನ ಮಗಳಾದ, ಸುಂದರಿಯಾದ ಬಾಲಿಕೆಯಾದ ಆ ಮತ್ಸ್ಯಗಂಧೆಯನ್ನು ಕುರಿತು ಹೀಗೆ ಹೇಳಿದನು.

**ಉಡುಪೇನ ಮುನಿಂ ಬಾಲೇ ಪರಂ ಪಾರಂ ನಯಸ್ವ ಹ ।**
**ಗಂತುಕಾಮೋಽಸ್ತಿ ಧರ್ಮಾತ್ಮಾ ತಾಪಸೋಽಯಂ ಶುಚಿಸ್ಮಿತೇ ॥೪॥**

ಎಲೌ ಶುಭ್ರವಾದ ಮಂದಹಾಸವುಳ್ಳ ಬಾಲಿಕೆಯೇ, ಧರ್ಮಾತ್ಮನಾದ ಈ ಪರಾಶರಮುನಿಯು ಈ ಯಮುನಾನದಿಯ ಆಚೆ ದಡಕ್ಕೆ ಹೋಗಲು ಇಚ್ಛೆಯುಳ್ಳವನಾಗಿದ್ದಾನೆ. ಆದುದರಿಂದ ಇವನನ್ನು ದೋಣಿಯಿಂದ ನದಿಯ ಆಚೆ ದಡಕ್ಕೆ ತಲಪಿಸು.

**ಇತ್ಯುಕ್ತಾ ಸಾ ತದಾ ಪಿತ್ರಾ ಮತ್ಸ್ಯಗಂಧಾಽಥ ವಾಸವೀ ।**
**ಉಡುಪೇ ಮುನಿಮಾಸೀನಂ ಸಂವಾಹಯತಿ ಭಾಮಿನೀ ॥೫॥**

**ವ್ರಜನ್ ಸೂರ್ಯಸುತಾತೋಯೇ ಭಾವಿತ್ವಾದ್ದೈವಯೋಗತಃ ।**
**ಕಾಮಾರ್ತಸ್ತು ಮುನಿರ್ಜಾತೋ ದೃಷ್ಟ್ವಾ ತಾಂ ಚಾರುಲೋಚನಾಂ ॥೬॥**

ತಂದೆಯಿಂದ ಹೀಗೆ ಹೇಳಲ್ಪಟ್ಟ ವಸುರಾಜನ ಪುತ್ರಿಯಾದ ಆ ಮತ್ಸ್ಯಗಂಧೆಯು ದೋಣಿಯಲ್ಲಿ ಕುಳಿತಿರತಕ್ಕ ಆ ಪರಾಶರಮುನಿಯನ್ನು ಸೂರ್ಯನ ಪುತ್ರಿಯೆಂದು ಪ್ರಸಿದ್ಧಿಯಾದ ಯಮುನಾ ನದಿಯ ನೀರಿನಲ್ಲಿ ದಾಟಿಸುತ್ತಿರಲು, ದೈವಯೋಗವನ್ನು ಮೀರಲು ಅಸಾಧ್ಯವಾದುದರಿಂದ ಪರಾಶರಮುನಿಯು, ಸುಂದರವಾದ ಕಣ್ಣುಗಳುಳ್ಳ ಆ ಮತ್ಸ್ಯಗಂಧೆಯನ್ನು ನೋಡಿ ಕಾಮಪೀಡಿತನಾದನು.

**ಗೃಹೀತುಕಾಮಃ ಸ ಮುನಿರ್ದೃಷ್ಟ್ವಾ ವ್ಯಂಜಿತಯೌವನಾಂ ।**
**ದಕ್ಷಿಣೇನ ಕರೇಣೈನಾಮಸ್ಪೃಶದ್ದಕ್ಷಿಣೇ ಕರೇ ॥೭॥**

ಪ್ರಕಟವಾದ ಯೌವನವುಳ್ಳ ಆ ಮತ್ಸ್ಯಗಂಧೆಯನ್ನು ನೋಡಿ ಪರಾಶರಮುನಿಯು ಅವಳನ್ನು ಭೋಗಿಸಲಪೇಕ್ಷೆಯುಳ್ಳವನಾಗಿ, ತನ್ನ ಬಲಗೈಯಿಂದ ಅವಳ ಬಲಗೈಯನ್ನು ಮುಟ್ಟಿದನು.

**ತಮುವಾಚ ಸಿತಾಪಾಂಗೀ ಸ್ಮಿತಪೂರ್ವಮಿದಂ ವಚಃ ।**
**ಕುಲಸ್ಯ ಸದೃಶಂ ವಃ ಕಿಂ ಶ್ರುತಸ್ಯ ತಪಸಶ್ಚ ಕಿಂ ॥೮॥**

ಆಗ ಕಪ್ಪಾದ ಕಡೆಗಣ್ಣಿನ ನೋಟವುಳ್ಳ ಆ ಮತ್ಸ್ಯಗಂಧೆಯು ಮಂದಹಾಸದಿಂದ ಕೂಡಿದವಳಾಗಿ ಆ ಪರಾಶರಮುನಿಯನ್ನು ಕುರಿತು ಈ ಮಾತನ್ನು ಹೇಳಿದಳು. ನಿಮ್ಮ ಋಷಿಗಳ ವಂಶಕ್ಕೆ ನೀನು ಮಾಡುವ ಈ ಕೆಲಸವು ಯೋಗ್ಯವಾದುದೇ ? ಮತ್ತು ಸಮಸ್ತ ವೇದಗಳನ್ನೂ ತಿಳಿದ ತಪಸ್ವಿಯಾದ ನಿನಗೆ ಇದು ಯೋಗ್ಯವೇ ?

**ತ್ವಂ ವೈ ವಸಿಷ್ಠದಾಯಾದಃ ಕುಲಶೀಲಸಮನ್ವಿತಃ ।**
**ಕಿಂ ಚಿಕೀರ್ಷಸಿ ಧರ್ಮಜ್ಞ ಮನ್ಮಥೇನ ಪ್ರಪೀಡಿತಃ ॥೯॥**

ನೀನು ಅತ್ಯಂತಶ್ರೇಷ್ಠನಾದ, ಮಹಾತಪಸ್ವಿಯಾದ ವಸಿಷ್ಠ ಋಷಿಯ ಮೊಮ್ಮಗನಾಗಿರುವೆ. ಮತ್ತು ಉತ್ತಮವಾದ ಬ್ರಾಹ್ಮಣವಂಶದವನೂ ಒಳ್ಳೆಯ ಗುಣವಂತನೂ ಆಗಿರುವೆ. ಇಂಥಾ ಧರ್ಮಜ್ಞನಾದ ನೀನು ಕಾಮನಿಂದ ಪೀಡಿತನಾಗಿ ಎಂಥಾ ಕೆಲಸವನ್ನು ಮಾಡಲಿಚ್ಛಿಸುವೆ ?

**ದುರ್ಲಭಂ ಮಾನುಷಂ ಜನ್ಮ ಭುವಿ ಬ್ರಾಹ್ಮಣಸತ್ತಮ ।**
**ತತ್ರಾಪಿ ದುರ್ಲಭಂ ಮನ್ಯೇ ಬ್ರಾಹ್ಮಣತ್ವಂ ವಿಶೇಷತಃ ॥೧೦॥**

ಓ ಬ್ರಾಹ್ಮಣಶ್ರೇಷ್ಠನೇ, ಭೂಲೋಕದಲ್ಲಿ ಮನುಷ್ಯಜನ್ಮವೇ ದುರ್ಲಭವಾದುದು ; ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣಜನ್ಮವು ಅತ್ಯಂತ ದುರ್ಲಭವಾದುದೆಂದು ನಾನು ತಿಳಿಯುತ್ತೇನೆ.

**ಕುಲೇನ ಶೀಲೇನ ತಥಾ ಶ್ರುತೇನ**
**ದ್ವಿಜೋತ್ತಮಸ್ತ್ವಂ ಕಿಲ ಧರ್ಮವಿಚ್ಚ ।**
**ಅನಾರ್ಯಭಾವಂ ಕಥಮಾಗತೋಽಸಿ**
**ವಿಪ್ರೇಂದ್ರ ಮಾಂ ವೀಕ್ಷ್ಯ ಚ ಮೀನಗಂಧಾಂ ॥೧೧॥**

ಎಲೈ ಬ್ರಾಹ್ಮಣಶ್ರೇಷ್ಠನೇ, ವಂಶದಲ್ಲಿಯೂ, ನಡತೆಯಲ್ಲಿಯೂ, ವಿದ್ಯೆಯಲ್ಲಿಯೂ ನೀನು ಶ್ರೇಷ್ಠನಾಗಿರುವೆ. ಮತ್ತು ಧರ್ಮವನ್ನು ತಿಳಿದವನೂ ಆಗಿರುವೆ. ಆದ್ದರಿಂದ ಎಲೈ ದ್ವಿಜೋತ್ತಮನೇ, ಅಂತಹ ನೀನು ಮೀನಿನ ವಾಸನೆ ಬರುತ್ತಿರುವ ನನ್ನನ್ನು ನೋಡಿ ಅಯೋಗ್ಯರ ಸ್ವಭಾವವನ್ನು ಹೇಗೆ ಹೊಂದಿದೆ ?

**ಮದೀಯೇ ಶರೀರೇ ದ್ವಿಜಾಮೋಘಬುದ್ಧೇ**
**ಶುಭಂ ಕಿಂ ಸಮಾಲೋಕ್ಯ ಪಾಣಿಂ ಗೃಹೀತುಂ ।**

**ಸಮೀಪಂ ಸಮಾಯಾಸಿ ಕಾಮಾತುರಸ್ತ್ವಂ**
**ಕಥಂ ನಾಭಿಜಾನಾಸಿ ಧರ್ಮಂ ಸ್ವಕೀಯಂ ॥೧೨॥**

ಎಲೈ ಬುದ್ಧಿಶಾಲಿಯಾದ ಬ್ರಾಹ್ಮಣನೇ, ಕಾಮಪೀಡಿತನಾದ ನೀನು ನನ್ನ ದೇಹದಲ್ಲಿ ಯಾವ ವಿಶೇಷಗುಣವನ್ನು ನೋಡಿ ನನ್ನ ಕೈಯನ್ನು ಹಿಡಿಯಲೋಸ್ಕರ ನನ್ನ ಸಮೀಪಕ್ಕೆ ಬರುತ್ತಿರುವೆ? ನೀನು ನಿನ್ನ ಋಷಿಗಳ ಧರ್ಮವನ್ನು ಏಕೆ ತಿಳಿಯುವುದಿಲ್ಲ?

**ಅಹೋ ಮಂದಬುದ್ಧಿರ್ದ್ವಿಜೋಽಯಂ ಗ್ರಹೀಷ್ಯನ್**
**ಜಲೇ ಮಗ್ನ ಏವಾದ್ಯ ಮಾಂ ವೈ ಗೃಹೀತ್ವಾ ।**
**ಮನೋವ್ಯಾಕುಲಂ ಪಂಚಬಾಣಾತಿವಿದ್ಧಂ**
**ನ ಕೋಽಪೀಹ ಶಕ್ತಃ ಪ್ರತೀಪಂ ಹಿ ಕರ್ತುಂ ॥೧೩॥**

ಪರಾಶರನು ವಿಮರ್ಶಿಸದೆ ಮುಂದುವರಿಯುತ್ತಿದ್ದುದನ್ನು ನೋಡಿ ಅವಳು "ಈ ಬ್ರಾಹ್ಮಣನು ನನ್ನನ್ನು ಭೋಗಿಸಲಿಚ್ಛೆವುಳ್ಳವನಾಗಿ, ವಿಚಾರಶೂನ್ಯನಾಗಿದ್ದಾನೆ. ಇವನು ನನ್ನನ್ನು ಹಿಡಿದುಕೊಂಡು ಈಗ ಶೃಂಗಾರರಸದಲ್ಲಿ ಮುಳುಗಿಯೇ ಹೋಗಿರುವನು. ಮನ್ಮಥನಿಂದ ಅತ್ಯಂತವಾಗಿ ಪೀಡಿತವಾಗಿರುವ ಇವನ ಮನಸ್ಸು ತುಂಬ ಚಂಚಲವಾಗಿದೆ. ಈಗ ಇವನನ್ನು ವಿರೋಧಿಸಲು ಯಾರೂ ಸಮರ್ಥರಲ್ಲವು."

**ಇತಿ ಸಂಚಿಂತ್ಯ ಸಾ ಬಾಲಾ ತಮುವಾಚ ಮಹಾಮುನಿಂ ।**
**ಧೈರ್ಯಂ ಕುರು ಮಹಾಭಾಗ ಪರಂ ಪಾರಂ ನಯಾಮಿ ವೈ ॥೧೪॥**

ಆ ಬಾಲಿಕೆಯಾದ ಮತ್ಸ್ಯಗಂಧೆಯು ಈ ರೀತಿಯಾಗಿ ಯೋಚಿಸಿ, ಪರಾಶರನನ್ನು ಕುರಿತು ಹೀಗೆ ಹೇಳಿದಳು—ಓ ಭಾಗ್ಯಶಾಲಿಯೇ, ಸ್ವಲ್ಪಕಾಲದವರೆಗೆ ಧೈರ್ಯವನ್ನು ತಾಳು. ನಾನು ನಿನ್ನನ್ನು ನದಿಯ ಆಚೆಯ ದಡಕ್ಕೆ ತಲಪಿಸುತ್ತೇನೆ.

॥ ಸೂತ ಉವಾಚ ॥

**ಪರಾಶರಸ್ತು ತಚ್ಛ್ರುತ್ವಾ ವಚನಂ ಹಿತಪೂರ್ವಕಂ ।**
**ಕರಂ ತ್ಯಕ್ತ್ವಾ ಸ್ಥಿತಸ್ತತ್ರ ಸಿಂಧೋಃ ಪಾರಂ ಗತಃ ಪುನಃ ॥೧೫॥**

ಸೂತಮಹರ್ಷಿಯು ಹೇಳಿದನು—ಪರಾಶರಮುನಿಯು ತನಗೆ ಹಿತವೂ, ಅನುಕೂಲವೂ ಆದ ಆ ಮಾತನ್ನು ಕೇಳಿ ಅವಳ ಕೈಯನ್ನು ಬಿಟ್ಟು ಇದ್ದವನಾಗಿ ಅನಂತರ ನದಿಯ ಆಚೆಯ ದಡಕ್ಕೆ ಹೋದನು.

**ಮತ್ಸ್ಯಗಂಧಾಂ ಪ್ರಜಗ್ರಾಹ ಮುನಿಃ ಕಾಮಾತುರಸ್ತದಾ ।**
**ವೇಪಮಾನಾ ತು ಸಾ ಕನ್ಯಾ ತಮುವಾಚ ಪುರಃ ಸ್ಥಿತಂ ॥೧೬॥**

ಕಾಮಪೀಡಿತನಾದ ಆ ಪರಾಶರಮುನಿಯು ಮತ್ಸ್ಯಗಂಧಿಯನ್ನು ಪುನಃ ಹಿಡಿದುಕೊಂಡನು. ಆಗ ಕನ್ನಿಕೆಯಾದ ಆ ಮತ್ಸ್ಯಗಂಧಿಯು ದುರ್ಗಂಧದಿಂದ ಕೂಡಿದ ನನ್ನನ್ನು ಎಲ್ಲಿ ಮಧ್ಯದಲ್ಲಿ ಬಿಟ್ಟುಬಿಡುತ್ತಾನೋ ಎಂಬ ಭಯದಿಂದ ನಡುಗತಕ್ಕವಳಾಗಿ ತನ್ನ ಮುಂದಿರತಕ್ಕ ಆ ಪರಾಶರಮುನಿಯನ್ನು ಕುರಿತು ಹೀಗೆ ಹೇಳಿದಳು.

**ದುರ್ಗಂಧಾಽಹಂ ಮುನಿಶ್ರೇಷ್ಠ ಕಥಂ ತ್ವಂ ನೋಪಶಂಕಸೇ ।**
**ಸಮಾನರೂಪಯೋಃ ಕಾಮಸಂಯೋಗಸ್ತು ಸುಖಾವಹಃ ॥೧೭॥**

ಓ ಮುನಿಶ್ರೇಷ್ಠನೇ, ನಾನು ದುರ್ವಾಸನೆ ಉಳ್ಳವಳು. ಇಂತಹ ನನ್ನನ್ನು ಭೋಗಿಸಲು ನೀನು ಏಕೆ ಸಂಶಯಪಡುವುದಿಲ್ಲ? ಸಮಾನಗುಣರೂಪವುಳ್ಳವರಿಗೆ ಮಾತ್ರ ಕಾಮಸಂಬಂಧವು ಸುಖವನ್ನುಂಟುಮಾಡುತ್ತದೆ.

**ಇತ್ಯುಕ್ತೇನ ತು ಸಾ ಕನ್ಯಾ ಕ್ಷಣಮಾತ್ರೇಣ ಭಾಮಿನೀ ।**
**ಕೃತಾ ಯೋಜನಗಂಧಾ ತು ಸುರೂಪಾ ಚ ವರಾನನಾ ॥೧೮॥**

ಈ ರೀತಿಯಲ್ಲಿ ಮತ್ಸ್ಯಗಂಧಿಯಿಂದ ಹೇಳಲ್ಪಟ್ಟವನಾದ ಪರಾಶರಮುನಿಯು ಕನ್ನಿಕೆಯಾದ ಆ ಮತ್ಸ್ಯಗಂಧಿಯನ್ನು ಒಂದು ಕ್ಷಣದಲ್ಲಿ ಒಂದು ಗಾವುದ ದೂರದ ವರಿವಿಗೆ ವ್ಯಾಪಿಸುವ ಸುವಾಸನೆಯುಳ್ಳವಳನ್ನಾಗಿಯೂ ಸುಂದರವಾದ ರೂಪು ಮತ್ತು ಮುಖವುಳ್ಳವಳನ್ನಾಗಿಯೂ ಮಾಡಿದನು.

**ಮೃಗನಾಭಿಸುಗಂಧಾಂ ತಾಂ ಕೃತ್ವಾ ಕಾಂತಾಂ ಮನೋಹರಾಂ ।**
**ಜಗ್ರಾಹ ದಕ್ಷಿಣೇ ಪಾಣೌ ಮುನಿರ್ಮನ್ಮಥಪೀಡಿತಃ ॥೧೯॥**

ಅವಳನ್ನು ಕಸ್ತೂರಿಯಂತೆ ಸುವಾಸನೆಯುಳ್ಳವಳನ್ನಾಗಿಯೂ, ಸುಂದರಿಯನ್ನಾಗಿಯೂ, ನೋಡಿದವರ ಮನಸ್ಸನ್ನು ಆಕರ್ಷಿಸತಕ್ಕವಳನ್ನಾಗಿಯೂ ಮಾಡಿ, ಕಾಮಪೀಡಿತನಾದ ಆ ಪರಾಶರಮುನಿಯು ಅವಳನ್ನು ಬಲಗೈಯಲ್ಲಿ ಹಿಡಿದುಕೊಂಡನು.

**ಗ್ರಹೀತುಕಾಮಂ ತಂ ಪ್ರಾಹ ನಾಮ್ನಾ ಸತ್ಯವತೀ ಶುಭಾ ।**
**ಮುನೇ ಪಶ್ಯತಿ ಲೋಕೋಽಯಂ ಪಿತಾ ಚೈವ ತಟಸ್ಥಿತಃ ॥೨೦॥**

ಸತ್ಯವತೀ ಎಂದು ಹೆಸರುಳ್ಳ, ಮಂಗಳಕರಳಾದ ಮತ್ಸ್ಯಗಂಧೆಯು ತನ್ನನ್ನು ಹಿಡಿದುಕೊಳ್ಳಲು ಇಚ್ಛಿಸುತ್ತಿರುವ ಆ ಪರಾಶರಮುನಿಯನ್ನು ಕುರಿತು ಹೀಗೆ ಹೇಳಿದಳು. ಓ ಪರಾಶರಮುನಿಯೇ, ರತಿಸಂಭೋಗದಲ್ಲಿ ಉದ್ಯುಕ್ತರಾಗುವ ನಮ್ಮನ್ನು ಈ ಎಲ್ಲ ಜನರೂ ನೋಡುತ್ತಾರೆ ಮತ್ತು ಆ ದಡದಲ್ಲಿರತಕ್ಕ ನನ್ನ ತಂದೆಯು ಸಹ ನಮ್ಮನ್ನು ನೋಡುತ್ತಿದ್ದಾನೆ.

**ಪಶುಧರ್ಮೋ ನ ಮೇ ಪ್ರೀತಿಂ ಜನಯತ್ಯತಿದಾರುಣಃ ।**
**ಪ್ರತೀಕ್ಷಸ್ವ ಮುನಿಶ್ರೇಷ್ಠ ಯಾವದ್ಭವತಿ ಯಾಮಿನೀ ॥೨೧॥**

ಮೃಗಗಳು ಆಚರಿಸುವ ರೀತಿಯಲ್ಲಿ ಸಂಭೋಗಮಾಡುವುದು ನನಗೆ ಭಯಂಕರವಾಗಿ ತೋರುತ್ತದೆ ಮತ್ತು ಅದರಿಂದ ನನಗೆ ಸಂತೋಷವಾಗಲೀ ಪ್ರೀತಿಯಾಗಲೀ ಆಗುವುದಿಲ್ಲ. ಆದುದರಿಂದ ಎಲೈ ಮುನಿಶ್ರೇಷ್ಠನೇ, ರಾತ್ರಿಕಾಲವು ಪ್ರಾಪ್ತವಾಗಿ ಕತ್ತಲೆಯಾಗುವತನಕ ನಿರೀಕ್ಷಿಸು.

**ರಾತ್ರೌ ವ್ಯವಾಯ ಉದ್ದಿಷ್ಟೋ ದಿವಾ ನ ಮನುಜಸ್ಯ ಹಿ ।**
**ದಿವಾ ಸಂಗೇ ಮಹಾನ್ ದೋಷಃ ಪಶ್ಯಂತಿ ಕಿಲ ಮಾನವಾಃ ॥೨೨॥**

ಮನುಷ್ಯನು ಮೈಥುನವನ್ನು ರಾತ್ರಿಯಲ್ಲಿ ಆಚರಿಸಬೇಕೆಂದೂ, ಹಗಲಿನಲ್ಲಿ ಆಚರಿಸಕೂಡದೆಂದೂ ಹೇಳಲ್ಪಟ್ಟಿದೆ. ಅಲ್ಲದೆ ಹಗಲಿನಲ್ಲಿ ಸ್ತ್ರೀಪುರುಷರು ಸಂಭೋಗ ಮಾಡಿದರೆ ಮಹಾದೋಷವು ಉಂಟಾಗುವುದಲ್ಲದೆ, ಇತರ ಜನರು ಇದನ್ನು ನೋಡುವುದರಿಂದ ಲೋಕನಿಂದೆಗೂ ಗುರಿಯಾಗಬೇಕಾಗುತ್ತದೆ.

**ಕಾಮಂ ಯಚ್ಛ ಮಹಾಬುದ್ಧೇ ಲೋಕನಿಂದಾ ದುರಾಸದಾ ।**
**ತಚ್ಛ್ರುತ್ವಾ ವಚನಂ ತಸ್ಯಾ ಯುಕ್ತಮುಕ್ತಮುದಾರಧೀಃ ॥೨೩॥**

ಓ ತುಂಬಾ ಬುದ್ಧಿಶಾಲಿಯಾದ ಪರಾಶರಮುನಿಯೇ, ನಿನ್ನ ಕಾಮಾಭಿಲಾಷೆಯನ್ನು ತ್ಯಜಿಸು. ಏಕೆಂದರೆ ಜನರು ಮಾಡುವ ದೂಷಣೆಯನ್ನು ಸಹಿಸುವುದು ಬಹುಕಷ್ಟವು. ನಿಂದಾಸ್ಪದವಾದ ನಮ್ಮ ಕೆಲಸವನ್ನು ಜನಗಳು ನೋಡಿ ಮಾಡುವ ನಿಂದೆಯನ್ನು ಹೋಗಲಾಡಿಸುವುದು ಅಸಾಧ್ಯವು, ಎಂದು ಹೇಳಿದ ಆ ಕನ್ಯೆಯ

ಮಾತನ್ನು ಕೇಳಿ ಅದನ್ನು ಯುಕ್ತವೆಂದು ಗಮನಿಸಿ ಉದಾರಬುದ್ಧಿಯುಳ್ಳ ಆ ಪರಾಶರಮುನಿಯು,

**ನೀಹಾರಂ ಕಲ್ಪಯಾಮಾಸ ಶೀಘ್ರಂ ಪುಣ್ಯಬಲೇನ ವೈ ।**
**ನೀಹಾರೇ ಚ ಸಮುತ್ಪನ್ನೇ ತಟೇಽತಿತಮಸಾ ಯುತೇ ॥೨೪॥**

ಕೂಡಲೇ ತನ್ನ ತಪೋಬಲದಿಂದ ಹಿಮವನ್ನು ಕಲ್ಪಿಸಿದನು. ಹಿಮವು ಆವರಿಸಿದ ಕೂಡಲೇ ದಡವೆಲ್ಲ ಕತ್ತಲೆಯಾಯಿತು.

**ಕಾಮಿನೀ ತಂ ಮುನಿಂ ಪ್ರಾಹ ಮೃದುಪೂರ್ವಮಿದಂ ವಚಃ ।**
**ಕನ್ಯಾಹಂ ದ್ವಿಜಶಾರ್ದೂಲ ಭುಕ್ತ್ವಾ ಗಂತಾಸಿ ಕಾಮತಃ ॥೨೫॥**

ಆಗ ಆ ಯುವತಿಯು ಪರಾಶರಮುನಿಯನ್ನು ಕುರಿತು ವಿನಯಪೂರ್ವಕವಾಗಿ ಈ ಮಾತನ್ನು ಹೇಳಿದಳು—ಓ ಬ್ರಾಹ್ಮಣಶ್ರೇಷ್ಠನೇ, ನಾನು ಅವಿವಾಹಿತಳಾದ ಕನ್ನಿಕೆಯು. ನೀನು ನನ್ನನ್ನು ಭೋಗಿಸಿ ಅನಂತರ ನಿನ್ನ ಮನಸ್ಸುಬಂದಂತೆ ಹೊರಟು ಹೋಗುವವನಾಗಿರುವೆ.

**ಅಮೋಘವೀರ್ಯಸ್ತ್ವಂ ಬ್ರಹ್ಮನ್ ಕಾ ಗತಿರ್ಮೇ ಭವೇದಿತಿ ।**
**ಪಿತರಂ ಕಿಂ ಬ್ರವೀಮ್ಯದ್ಯ ಸಗರ್ಭಾ ಚೇದ್ಭವಾಮ್ಯಹಂ ॥೨೬॥**

ಓ ಬ್ರಾಹ್ಮಣನೇ, ನೀನು ವ್ಯರ್ಥವಾಗದ ವೀರ್ಯವುಳ್ಳವನು. ಆದುದರಿಂದ ನಿನ್ನಿಂದ ನಾನು ಗರ್ಭಿಣಿಯಾದರೆ ನನ್ನ ಗತಿ-ಏನು? ಅಲ್ಲದೆ ನಾನು ನನ್ನ ತಂದೆಗೆ ಏನನ್ನು ಹೇಳಲಿ?

**ತ್ವಂ ಗಮಿಷ್ಯಸಿ ಭುಕ್ತ್ವಾ ಮಾಂ ಕಿಂ ಕರೋಮಿ ವದಸ್ವ ತತ್ ॥**

ನೀನೇನೋ ನನ್ನನ್ನು ಭೋಗಿಸಿ ಹೊರಟುಹೋಗುವೆ. ನನ್ನ ಕನ್ಯಾವಸ್ಥೆಯು ನಾಶವಾಗುವುದರಿಂದ ನನ್ನನ್ನು ಆಮೇಲೆ ಯಾರು ಮದುವೆಯಾಗಿ ಕಡೆಯವರೆಗೂ ಕಾಪಾಡುವರು? ಅನಾಥಳಾಗುವ ನಾನು ಮುಂದೆ ಏನನ್ನು ಮಾಡಲಿ? ಅದನ್ನು ಹೇಳು.

॥ ಪರಾಶರ ಉವಾಚ ॥

**ಕಾಂತೇಽದ್ಯ ಮತ್ಪ್ರಿಯಂ ಕೃತ್ವಾ ಕನ್ಯೈವ ತ್ವಂ ಭವಿಷ್ಯಸಿ ॥೨೭॥**

**ವೃಣೀಷ್ವ ಚ ವರಂ ಭೀರು ಯಂ ತ್ವಮಿಚ್ಛಸಿ ಭಾಮಿನಿ ।**

ಪರಾಶರಮುನಿಯು ಹೇಳಿದನು—ಎಲೆ ಪ್ರಿಯಳೇ, ನೀನು ನನ್ನ ಇಷ್ಟವನ್ನು ಪೂರ್ತಿಗೊಳಿಸಿದ ಅನಂತರವೂ ಸಹ ಪುನಃ ಮುಂಚಿನಂತೆಯೇ ಕನ್ನಿಕೆಯೇ ಆಗಿರುವೆ. ನಿನ್ನ ಕನ್ಯಾವಸ್ಥೆಯು ನಾಶವಾಗಲಾರದು. ಅಲ್ಲದೆ ಎಲೆ ಭಯದಿಂದ ಕೂಡಿದ ಸ್ತ್ರೀಯೇ, ನೀನು ನಿನಗೆ ಬೇಕಾದ ವರವನ್ನು ಕೇಳು. ನಾನು ಕೊಡುತ್ತೇನೆ.

|| ಸತ್ಯವತ್ಯುವಾಚ ||

**ಯಥಾ ಮೇ ಪಿತರೌ ಲೋಕೇ ನ ಜಾನೀತೋ ಹಿ ಮಾನದ ॥೨೮॥**

**ಕನ್ಯಾವ್ರತಂ ನ ಮೇ ಹನ್ಯಾತ್ತಥಾ ಕುರು ದ್ವಿಜೋತ್ತಮ ।**
**ಪುತ್ರಶ್ಚ ತ್ವತ್ಸಮಃ ಕಾಮಂ ಭವೇದದ್ಭುತವೀರ್ಯವಾನ್ ॥೨೯॥**

**ಗಂಧೋಽಯಂ ಸರ್ವದಾ ಮೇ ಸ್ಯಾದ್ಯೌವನಂ ಚ ನವಂ ನವಂ ।**

ಸತ್ಯವತಿಯು ಪರಾಶರಮುನಿಯನ್ನು ಕುರಿತು ಹೀಗೆ ಹೇಳಿದಳು. ಓ ಮಾನವನ್ನು ಕೊಟ್ಟು ಕಾಪಾಡತಕ್ಕ ಪರಾಶರಮುನಿಯೇ, ಜಗತ್ತಿನಲ್ಲಿ ನನ್ನ ತಂದೆತಾಯಿಗಳು ಈ ವಿಷಯವನ್ನು ತಿಳಿಯದಂತೆಯೂ ಮತ್ತು ನನ್ನ ಕನ್ಯಾವಸ್ಥೆಯು ನಾಶಹಾಗದಂತೆಯೂ ಮಾಡು. ಅಲ್ಲದೆ ಓ ಬ್ರಾಹ್ಮಣಶ್ರೇಷ್ಠನೇ, ನನ್ನಲ್ಲಿ ಹುಟ್ಟತಕ್ಕ ಪುತ್ರನು ನಿನಗೆ ಸಮಾನನೂ ಆಶ್ಚರ್ಯಕರವಾದ ಪರಾಕ್ರಮವುಳ್ಳವನೂ ಆಗಲಿ. ನನ್ನ ದೇಹದ ಈ ಸುವಾಸನೆಯು ಹೀಗೆಯೇ ಯಾವಾಗಲೂ ಇರಲಿ. ಮತ್ತು ನನಗೆ ಯಾವಾಗಲೂ ಹೊಸ ಹೊಸ ಯೌವನವೇ ಉಂಟಾಗುತ್ತಿರಲಿ.

|| ಪರಾಶರ ಉವಾಚ ||

**ಶೃಣು ಸುಂದರಿ ಪುತ್ರಸ್ತೇ ವಿಷ್ಣ್ವಂಶಸಂಭವಃ ಶುಚಿಃ ॥೩೦॥**

**ಭವಿಷ್ಯತಿ ಚ ವಿಖ್ಯಾತಸ್ತ್ರೈಲೋಕ್ಯೇ ವರವರ್ಣಿನಿ ।**
**ಕೇನ ಚಿತ್ಕಾರಣೇನಾಹಂ ಜಾತಃ ಕಾಮಾತುರಸ್ತ್ವಯಿ ॥೩೧॥**

ಪರಾಶರಮುನಿಯು ಈ ರೀತಿಯಾಗಿ ಹೇಳಿದನು—ಎಲೆ ಸುಂದರಿಯೇ, ನಾನು ಹೇಳುವುದನ್ನು ಕೇಳು. ನಿನ್ನ ಪುತ್ರನು ವಿಷ್ಣುವಿನ ಅಂಶದಿಂದ ಹುಟ್ಟಿದವನಾಗಿಯೂ, ಪಾಪರಹಿತನಾಗಿಯೂ, ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದವನಾಗಿಯೂ

ಆಗುವನು. ಎಲೆ ಉತ್ತಮ ಸ್ತ್ರೀಯೇ, ನಾನು ಯಾವುದೋ ಒಂದು ಕಾರಣವಿಶೇಷ ದಿಂದ ನಿನ್ನನ್ನು ನೋಡಿ ಕಾಮಪೀಡಿತನಾದೆನು ; ಸ್ವಾಭಾವಿಕವಾಗಿ ಅಲ್ಲವು.

**ಕದಾಪಿ ಚ ನ ಸಂಮೋಹೋ ಭೂತಪೂರ್ವೋ ವರಾನನೇ ।**
**ದೃಷ್ಟ್ವಾ ಚಾಪ್ಸರಸಾಂ ರೂಪಂ ಸದಾಹಂ ಧೈರ್ಯಮಾವಹಂ ॥೩೨॥**

ಎಲೆ ಸುಂದರವಾದ ಮುಖವುಳ್ಳ ಸತ್ಯವತಿಯೇ, ಇದಕ್ಕಿಂತ ಮೊದಲು ಎಂದೂ ನನಗೆ ಈ ರೀತಿಯ ಮೋಹವು ಉಂಟಾಗಿರಲಿಲ್ಲವು. ಅಪ್ಸರಸ್ತ್ರೀಯರ ಸೌಂದರ್ಯವನ್ನು ನೋಡಿಯೂ ಸಹ ನಾನು ಯಾವಾಗಲೂ ಮೋಹವಿಕಾರಕ್ಕೆ ಒಳಗಾಗದೆ ಧೈರ್ಯದಿಂದಿದ್ದನು. ಅಂತಹ ಸುಂದರಿಯರನ್ನು ನೋಡಿಯೂ ಸಹ ನನ್ನ ಮನಸ್ಸು ಚಂಚಲವಾಗಲಿಲ್ಲ.

**ದೈವಯೋಗೇನ ವೀಕ್ಷ್ಯ ತ್ವಾಂ ಕಾಮಸ್ಯ ವಶಗೋಽಭವಂ ।**
**ತತ್ಕಿಂಚಿತ್ಕಾರಣಂ ವಿದ್ಧಿ ದೈವಂ ಹಿ ದುರತಿಕ್ರಮಂ ॥೩೩॥**

ದೈವಸಂಕಲ್ಪದಿಂದ ಅಕಸ್ಮಾತ್ತಾಗಿ ನಾನು ನಿನ್ನನ್ನು ನೋಡಿ ಕಾಮಪೀಡಿತ ನಾದೆನು. ಆದುದರಿಂದ ಈ ವಿಷಯದಲ್ಲಿ ಏನೋ ಒಂದು ಕಾರಣವಿದೆ ಎಂದು ತಿಳಿ. ಏಕೆಂದರೆ ದೈವಸಂಕಲ್ಪವನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲವು.

**ದೃಷ್ಟ್ವಾಹಂ ಚಾತಿದುರ್ಗಂಧಾಂ ತ್ವಾಂ ಕಥಂ ಮೋಹಮಾಪ್ನುಯಾಂ ।**
**ಪುರಾಣಕರ್ತಾ ಪುತ್ರಸ್ತೇ ಭವಿಷ್ಯತಿ ವರಾನನೇ ॥೩೪॥**

**ವೇದವಿಭಾಗಕರ್ತಾ ಚ ಖ್ಯಾತಶ್ಚ ಭುವನತ್ರಯೇ ।**

ಅಲ್ಲದೆ ಅತ್ಯಂತ ದುರ್ವಾಸನೆಯುಳ್ಳ ನಿನ್ನನ್ನು ನೋಡಿ ನಾನು ಹೇಗೋ ಮೋಹಗೊಂಡೆನು. ಆದುದರಿಂದ ಎಲೆ ಸುಂದರವಾದ ಮುಖವುಳ್ಳ ಸ್ತ್ರೀಯೇ, ನಿನ್ನ ಪುತ್ರನು ಪುರಾಣಗಳನ್ನು ರಚಿಸಿ ಉಪದೇಶಮಾಡತಕ್ಕವನೂ, ಬೆರೆದು ಒಟ್ಟಾ ಗಿರುವ ವೇದಗಳನ್ನು ಮತ್ತು ಅವುಗಳ ಅರ್ಥವನ್ನು ತಿಳಿದವನೂ, ಮತ್ತು ಅವು ಗಳನ್ನು ಋಗ್ಯಜುಸ್ಸಾಮಾಥರ್ವಣಗಳೆಂದು ವಿಭಾಗವನ್ನು ಮಾಡತಕ್ಕವನೂ ಮೂರು ಲೋಕದಲ್ಲಿಯೂ ಪ್ರಸಿದ್ಧನಾದವನೂ ಆಗುವನು.

|| ಸೂತ ಉವಾಚ ||

**ಇತ್ಯುಕ್ತ್ವಾ ತಾಂ ವಶಂ ಯಾತಾಂ ಭುಕ್ತ್ವಾ ಸ ಮುನಿಸತ್ತಮಃ ॥೩೫॥**

**ಜಗಾಮ ತರಸಾ ಸ್ನಾತ್ವಾ ಕಾಲಿಂದೀಸಲಿಲೇ ಮುನಿಃ ।**

ಸೂತಮುನಿಯು ಮುಂದೆ ಹೇಳಿದನು—ಮುನಿಶ್ರೇಷ್ಠನಾದ ಆ ಪರಾಶರ ಮುನಿಯು ಹೀಗೆ ಅವಳಿಗೆ ಸಮಾಧಾನವನ್ನು ಒಪ್ಪುವಂತೆ ಹೇಳಿ ಸಂತೋಷದಿಂದ ತನ್ನ ಅಧೀನಳಾದ ಆ ಸತ್ಯವತಿಯನ್ನು ಭೋಗಿಸಿ ಆಮೇಲೆ ಆ ಯಮುನಾನದಿಯ ನೀರಿನಲ್ಲಿ ಸ್ನಾನಮಾಡಿ ಶೀಘ್ರವಾಗಿ ಹೊರಟುಹೋದನು.

**ಸಾಪಿ ಸತ್ಯವತೀ ಜಾತಾ ಸದ್ಯೋಽಗರ್ಭವತೀ ಸತೀ ॥೩೬॥**
**ಸುಷುವೇ ಯಮುನಾದ್ವೀಪೇ ಪುತ್ರಂ ಕಾಮಮಿವಾಪರಂ ।**

ಆ ಸತ್ಯವತಿಯೂ ಕೂಡ ಕೂಡಲೇ ಗರ್ಭಿಣಿಯಾದಳು. ಮತ್ತು ಯಮುನಾ ನದಿಯ ದ್ವೀಪದಲ್ಲಿ ಮತ್ತೊಬ್ಬ ಮನ್ಮಥನೋ ಎಂಬಂತೆ ಇದ್ದ ಅತ್ಯಂತ ಸುಂದರನಾ ಗಿರತಕ್ಕ ಒಬ್ಬ ಪುತ್ರನನ್ನು ಪ್ರಸವಿಸಿದಳು.

**ಜಾತಮಾತ್ರಸ್ತು ತೇಜಸ್ವೀ ತಾಮುವಾಚ ಸ್ವಮಾತರಂ ॥೩೭॥**
**ತಪಸ್ಯೇವ ಮನಃಕೃತ್ವಾ ವಿವಿಶೇ ಚಾತಿವೀರ್ಯವಾನ್ ।**

ಅತ್ಯಂತ ತೇಜಸ್ವಿಯೂ, ವೀರ್ಯವಂತನೂ ಆದ ಆ ಪುತ್ರನು ಹುಟ್ಟಿದ ಕೂಡಲೇ ತಪಸ್ಸನ್ನು ಮಾಡುವುದರಲ್ಲಿಯೇ ಮನಸ್ಸನ್ನು ನಿಲಿಸಿ ತನ್ನ ತಾಯಿಯಾದ ಸತ್ಯವತಿಯನ್ನು ಕುರಿತು ಹೀಗೆ ಹೇಳಿದನು.

**ಗಚ್ಛ ಮಾತರ್ಯಥಾಕಾಮಂ ಗಚ್ಛಾಮ್ಯಹಮತಃ ಪರಂ ॥೩೮॥**
**ತಪಃ ಕರ್ತುಂ ಮಹಾಭಾಗೇ ದರ್ಶಯಿಷ್ಯಾಮಿ ವೈ ಸ್ಮೃತಃ ।**

ಎಲೌ ತಾಯಿಯೇ, ನೀನು ನಿನ್ನ ಇಷ್ಟಬಂದೆಡೆಗೆ ಹೋಗು. ನಾನೂ ಕೂಡ ಇನ್ನುಮೇಲೆ ತಪಸ್ಸನ್ನು ಮಾಡುವುದಕ್ಕೋಸ್ಕರ ಹೊರಟುಹೋಗುತ್ತೇನೆ. ಎಲೌ ಭಾಗ್ಯಶಾಲಿನಿಯಾದ ತಾಯಿಯೇ, ನೀನು ಯಾವಾಗ ನನ್ನನ್ನು ಸ್ಮರಿಸುತ್ತೀಯೋ ಆಗ ನಾನು ನನ್ನ ಸ್ವರೂಪವನ್ನು ನಿನಗೆ ತೋರಿಸುತ್ತೇನೆ.

**ಮಾತರ್ಯದಾ ಭವೇತ್ಕಾರ್ಯಂ ತವ ಕಿಂಚಿದನುತ್ತಮಂ ॥೩೯॥**
**ಸ್ಮರ್ತವ್ಯೋಽಹಂ ತದಾ ಶೀಘ್ರಮಾಗಮಿಷ್ಯಾಮಿ ಭಾಮಿನಿ ।**
**ಸ್ವಸ್ತಿ ತೇಽಸ್ತು ಗಮಿಷ್ಯಾಮಿ ತ್ಯಕ್ತ್ವಾ ಚಿಂತಾಂ ಸುಖಂ ವಸ ॥೪೦॥**

ಓ ತಾಯಿಯೇ, ನಿನಗೆ ಯಾವಾಗ, ಯಾವುದಾದರೂ ಶ್ರೇಷ್ಠವೂ ಅವಶ್ಯಕವೂ ಆದ ಕೆಲಸವು ಅನುಕೂಲವಾಗಿ ನೆರವೇರಬೇಕಾಗಿರುವುದೋ ಆಗ ನನ್ನನ್ನು ನೀನು ಸ್ಮರಿಸು. ಕೂಡಲೇ ನಾನು ಬಂದು ನಿನ್ನ ಕೆಲಸವನ್ನು ಮಾಡಿಕೊಡುತ್ತೇನೆ. ಓ ಸುಂದರವಾದ ರೂಪವುಳ್ಳ ತಾಯಿಯೇ, ನಿನಗೆ ಮಂಗಳವಾಗಲಿ. ನೀನು ಚಿಂತೆಯನ್ನು ಬಿಟ್ಟು ಸುಖವಾಗಿರು.

**ಇತ್ಯುಕ್ತ್ವಾ ನಿರ್ಯಯೌ ವ್ಯಾಸಃ ಸಾಪಿ ಪಿತ್ರಂತಿಕಂ ಗತಾ ।**
**ದ್ವೀಪೇ ನ್ಯಸ್ತಸ್ತಯಾ ಬಾಲಸ್ತಸ್ಮಾದ್ದ್ವೈಪಾಯನೋಽಭವತ್ ॥೪೧॥**

ಹೀಗೆ ಹೇಳಿ ವ್ಯಾಸಮಹರ್ಷಿಯು ಹೊರಟುಹೋದನು. ಆ ಸತ್ಯವತಿಯೂ ಕೂಡ ತಂದೆಯ ಸಮೀಪಕ್ಕೆ ಹೋದಳು. ಅವಳು ಬಾಲಕನಾದ ವ್ಯಾಸಮಹರ್ಷಿಯನ್ನು ಯಮುನಾ ನದಿಯ ದ್ವೀಪದಲ್ಲಿ ಪ್ರಸವಿಸಿ ಬಿಟ್ಟುಬಂದುದರಿಂದ ವ್ಯಾಸಮಹರ್ಷಿಯು ದ್ವೈಪಾಯನನೆಂದು ಪ್ರಸಿದ್ಧನಾದನು.

**ಜಾತಮಾತ್ರೋ ಜಗಾಮಾಶು ವೃದ್ಧಿಂ ವಿಷ್ಣ್ವಂಶಯೋಗತಃ ।**
**ತೀರ್ಥೇ ತೀರ್ಥೇ ಕೃತಸ್ನಾನಶ್ಚಚಾರ ತಪ ಉತ್ತಮಂ ॥೪೨॥**

ಆ ವ್ಯಾಸಮಹರ್ಷಿಯು ವಿಷ್ಣುವಿನ ಅಂಶದಿಂದ ಹುಟ್ಟಿದವನಾದುದರಿಂದ ಜನಿಸಿದ ಕೂಡಲೇ ವೃದ್ಧಿಯನ್ನು ಪಡೆದನು ; ಎಂದರೆ ದೊಡ್ಡವನಾದನು. ಅನಂತರದಲ್ಲಿ ಅವನು ಪ್ರತಿಯೊಂದು ಪುಣ್ಯತೀರ್ಥದಲ್ಲಿಯೂ ಸ್ನಾನಮಾಡುವವನಾಗಿ ದೊಡ್ಡ ತಪಸ್ಸನ್ನಾಚರಿಸಿದನು.

**ಏವಂ ದ್ವೈಪಾಯನೋ ಜಜ್ಞೇ ಸತ್ಯವತ್ಯಾಂ ಪರಾಶರಾತ್ ।**
**ಚಕಾರ ವೇದಶಾಖಾಶ್ಚ ಪ್ರಾಪ್ತಂ ಜ್ಞಾತ್ವಾ ಕಲೇರ್ಯುಗಂ ॥೪೩॥**

ಈ ರೀತಿಯಾಗಿ ವ್ಯಾಸಮಹರ್ಷಿಯು ಪರಾಶರನಿಂದ ಸತ್ಯವತಿಯಲ್ಲಿ ಹುಟ್ಟಿದನು. ಆ ವ್ಯಾಸಮಹರ್ಷಿಯು ಕಲಿಯುಗವು ಬಂದುದನ್ನು ತಿಳಿದು ಕಲಿಯುಗಕ್ಕೆ ಅನುಕೂಲವಾಗಿ ವೇದಗಳನ್ನು ವಿಭಾಗಿಸಿ ಬೇರೆ ಬೇರೆ ಶಾಖೆಗಳನ್ನು ವಿಂಗಡಿಸಿದನು.

**ವೇದವಿಸ್ತಾರಕರಣಾದ್ವ್ಯಾಸನಾಮಾಽಭವನ್ಮುನಿಃ ।**
**ಪುರಾಣಸಂಹಿತಾಶ್ಚಕ್ರೇ ಮಹಾಭಾರತಮುತ್ತಮಂ ॥೪೪॥**

ವೇದಗಳನ್ನು ವಿಭಾಗಿಸಿ ವಿಸ್ತಾರಮಾಡಿದುದರಿಂದ ಈ ದ್ವೈಪಾಯನ ಮುನಿಯು ವ್ಯಾಸ ಎಂದು ಹೆಸರುಳ್ಳವನಾದನು. ಆ ವ್ಯಾಸಮುನಿಯು ಧರ್ಮವನ್ನು

ತಿಳಿಸತಕ್ಕ ಹದಿನೆಂಟು ಪುರಾಣಗಳನ್ನೂ, ಶ್ರೇಷ್ಠವಾದ ಮಹಾಭಾರತವನ್ನೂ ರಚಿಸಿದನು.

**ಶಿಷ್ಯಾನಧ್ಯಾಪಯಾಮಾಸ ವೇದಾನ್ ಕೃತ್ವಾ ವಿಭಾಗಶಃ ।**
**ಸುಮಂತುಂ ಜೈಮಿನಿಂ ಪೈಲಂ ವೈಶಂಪಾಯನಮೇವ ಚ ॥೪೫॥**

**ಅಸಿತಂ ದೇವಲಂ ಚೈವ ಶುಕಂ ಚೈವ ಸ್ವಮಾತ್ಮಜಂ ।**

ಆ ವ್ಯಾಸಮುನಿಯು ವೇದಗಳನ್ನು ಬೇರೆ ಶಾಖೆಗಳಾಗಿ ವಿಭಾಗಿಸಿ ತನ್ನ ಮುಖ್ಯಶಿಷ್ಯರಾದ ಸುಮಂತು, ಜೈಮಿನಿ, ಪೈಲ, ವೈಶಂಪಾಯನ, ಅಸಿತ, ದೇವಲ ಮತ್ತು ತನ್ನ ಪುತ್ರನಾದ ಶುಕ ಇವರಿಗೆ ವೇದ ಮತ್ತು ಶಾಖೆಗಳನ್ನು ಕಲಿಸಿದನು.

॥ ಸೂತ ಉವಾಚ ॥

**ಏತಚ್ಚ ಕಥಿತಂ ಸರ್ವಂ ಕಾರಣಂ ಮುನಿಸತ್ತಮಾಃ ॥೪೬॥**
**ಸತ್ಯವತ್ಯಾಃ ಸುತಸ್ಯಾಪಿ ಸಮುತ್ಪತ್ತಿಸ್ತಥಾ ಶುಭಾ ।**
**ಸಂಶಯೋಽತ್ರ ನ ಕರ್ತವ್ಯಃ ಸಂಭವೇ ಮುನಿಸತ್ತಮಾಃ ॥೪೭॥**

ಸೂತಮುನಿಯು ಹೇಳಿದನು—ಓ ಶೌನಕಾದಿಮುನಿಶ್ರೇಷ್ಠರೇ, ನೀವು ಕೇಳಿದುದೆಲ್ಲಕ್ಕೂ ಸರಿಯಾದ ಕಾರಣವನ್ನು ನಾನು ಹೇಳಿದೆನು. ಮತ್ತು ಮಂಗಳಕರವಾದ ಸತ್ಯವತಿಯ ಮಗನಾದ ವ್ಯಾಸನ ಉತ್ಪತ್ತಿಯನ್ನು ನಿಮಗೆ ಹೇಳಿದೆನು. ಓ ಮುನಿಶ್ರೇಷ್ಠರಿರಾ, ಈ ವ್ಯಾಸಮುನಿಯ ಉತ್ಪತ್ತಿವಿಷಯದಲ್ಲಿ ನೀವು ಯಾವ ಸಂದೇಹವನ್ನೂ ಮಾಡಕೂಡದು.

**ಮಹತಾಂ ಚರಿತೇ ಚೈವ ಗುಣಾ ಗ್ರಾಹ್ಯಾ ಮುನೇರಿತಿ ।**
**ಕಾರಣಾಚ್ಚ ಸಮುತ್ಪತ್ತಿಃ ಸತ್ಯವತ್ಯಾ ಝುಷೋದರೇ ॥೪೮॥**

ಮಹಾತ್ಮರ ಚರಿತ್ರೆಯಲ್ಲಿ ನಾವು ಯಾವಾಗಲೂ ಗುಣವನ್ನೇ ಸ್ವೀಕರಿಸಬೇಕು. ಆದುದರಿಂದ, ಪರಾಶರ ಮತ್ತು ವ್ಯಾಸನೂ ಕೂಡ ಮುನಿಗಳಾದುದರಿಂದ ಅವರು ಮಹಾತ್ಮರು. ಅವರ ವಿಷಯದಲ್ಲಿ ಯಾವ ಸಂದೇಹವನ್ನೂ ಮಾಡದೆ ಗುಣವನ್ನು ಸ್ವೀಕರಿಸಿರಿ. ಮತ್ತು ಈ ಸತ್ಯವತಿಯು ಮೀನಿನ ಹೊಟ್ಟೆಯಲ್ಲಿ ಹುಟ್ಟಿದುದೂ ಕೂಡ ಕಾರಣಾಂತರದಿಂದಲೇ, ಎಂದರೆ ವಸುರಾಜನ ವೀರ್ಯವನ್ನು ಮೀನು ನುಂಗಿದುದರಿಂದ ಆಗಿರುವುದು. ಹೀಗೆ ಇವರೆಲ್ಲರೂ ಮಹಾಮಹಿಮರು.

**ಪರಾಶರೇಣ ಸಂಯೋಗಃ ಪುನಃ ಶಂತನುನಾ ತಥಾ ।**
**ಅನ್ಯಥಾ ತು ಮುನೇಶ್ಚಿತ್ತಂ ಕಥಂ ಕಾಮಾಕುಲಂ ಭವೇತ್ ॥೪೯॥**

ಪತಿವ್ರತೆಯಾದ ಸತ್ಯವತಿಯು ಪರಾಶರಮುನಿಯೊಡನೆ ಬೆರೆದು ಅನಂತರದಲ್ಲಿ ಶಂತನುರಾಜನನ್ನು ಮದುವೆಯಾದಳು. ಇವುಗಳಿಗೂ ದೈವಸಂಕಲ್ಪವೇ ಕಾರಣವು. ಹಾಗಲ್ಲದೇ ಇದ್ದರೆ ಜಿತೇಂದ್ರಿಯನಾದ ಪರಾಶರಮುನಿಯ ಮನಸ್ಸು ಕಾಮಬಾಧೆಗೆ ಸೋತುಹೋದುದು ಹೇಗೆ ಆದೀತು? ಅಲ್ಲದೆ,

**ಅನಾರ್ಯಜುಷ್ಟಂ ಧರ್ಮಜ್ಞಃ ಕೃತವಾನ್ ಸ ಕಥಂ ಮುನಿಃ ।**
**ಸಕಾರಣೇಯಮುತ್ಪತ್ತಿಃ ಕಥಿತಾಶ್ಚರ್ಯಕಾರಿಣೀ ॥೫೦॥**

ಅಯೋಗ್ಯರು ಮಾಡತಕ್ಕ ಆ ಕೆಲಸವನ್ನು ಧರ್ಮವನ್ನರಿತ, ಮಹಾತ್ಮನಾದ ಪರಾಶರಮುನಿಯು ಹೇಗೆ ಮಾಡಿಯಾನು? ಆದುದರಿಂದ ಆಶ್ಚರ್ಯಕರವಾದ ಈ ವ್ಯಾಸಮುನಿಯ ಉತ್ಪತ್ತಿಯು ಏನೋ ಕಾರಣಾಂತರದಿಂದಾಗಿದೆ. ಅವನು ಮಹಿಮಾ ಶಾಲಿಯಾದ ಮಹಾಪುರುಷನು. ಇದೆಲ್ಲವನ್ನೂ ನಾನು ನಿಮಗೆ ಹೇಳಿದೆನು.

**ಶ್ರುತ್ವಾ ಪಾಪಾಚ್ಚ ನಿರ್ಮುಕ್ತೋ ನರೋ ಭವತಿ ಸರ್ವಥಾ ।**
**ಯ ಏತಚ್ಛುಭಮಾಖ್ಯಾನಂ ಶೃಣೋತಿ ಶ್ರುತಿಮಾನ್ನರಃ ॥೫೧॥**

**ನ ದುರ್ಗತಿಮವಾಪ್ನೋತಿ ಸುಖೀ ಭವತಿ ಸರ್ವದಾ ॥೫೨॥**

ಅಲ್ಲದೆ ಈ ಮಂಗಳಕರವಾದ ಕಥೆಯನ್ನು ಯಾರು ಕೇಳುತ್ತಾರೆಯೋ ಅವರು ಯಾವಾಗಲೂ ಎಲ್ಲ ಪಾಪಗಳಿಂದ ಬಿಡಲ್ಪಟ್ಟವರಾಗುತ್ತಾರೆ. ಮತ್ತು ದುಃಖವನ್ನು ಅನುಭವಿಸದೆ ಯಾವಾಗಲೂ ಸುಖಿಗಳಾಗುತ್ತಾರೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇಽಷ್ಟಾದಶಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ದ್ವಿತೀಯೋಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಹದಿನೆಂಟುಸಹಸ್ರಶ್ಲೋಕಗಳಿಂದ ಕೂಡಿರುವ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

### || ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ಋಷಯ ಊಚುಃ ||

**ಉತ್ಪತ್ತಿಸ್ತು ತ್ವಯಾ ಪ್ರೋಕ್ತಾ ವ್ಯಾಸಸ್ಯಾಮಿತತೇಜಸಃ ।**
**ಸತ್ಯವತ್ಯಾಸ್ತಥಾ ಸೂತ ವಿಸ್ತರೇಣ ತ್ವಯಾನಘ ||೧||**

ಋಷಿಗಳು ಸೂತನನ್ನು ಕೇಳಿದರು—ಪಾಪರಹಿತನಾದ ಓ ಸೂತಮಹರ್ಷಿಯೇ, ಅತ್ಯಂತ ತೇಜಸ್ವಿಯಾದ ವ್ಯಾಸಮುನಿಯ ಜನನವನ್ನು ನೀನು ಹೇಳಿದೆ. ಹಾಗೆಯೇ ಸತ್ಯವತಿಯ ಉತ್ಪತ್ತಿಯನ್ನೂ ನೀನು ವಿಸ್ತಾರವಾಗಿ ಹೇಳಿದೆ.

**ತಥಾಪ್ಯೇಕಸ್ತು ಸಂದೇಹಶ್ಚಿತ್ತೇಽಸ್ಮಾಕಂ ಸುಸಂಸ್ಥಿತಃ ।**
**ನ ನಿವರ್ತತಿ ಧರ್ಮಜ್ಞ ಕಥಿತೇನ ತ್ವಯಾನಘ ||೨||**

ಓ ಧರ್ಮವನ್ನು ತಿಳಿದುಕೊಂಡಿರುವ ಸೂತನೇ, ನೀನು ಎಲ್ಲ ವಿಷಯವನ್ನು ಹೇಳಿದಾಗ್ಯೂ ನಮ್ಮ ಮನಸ್ಸಿನಲ್ಲಿ ಒಂದು ಸಂಶಯವು ಉಳಿದಿದೆ. ಆ ಸಂಶಯವು ನೀನು ಹೇಳಿದ ಮಾತಿನಿಂದ ಹೋಗುವುದಿಲ್ಲ. ಅದಾವುದೆಂದರೆ —

**ಮಾತಾ ವ್ಯಾಸಸ್ಯ ಯಾ ಪ್ರೋಕ್ತಾ ನಾಮ್ನಾ ಸತ್ಯವತೀ ಶುಭಾ ।**
**ಸಾ ಕಥಂ ನೃಪತಿಂ ಪ್ರಾಪ್ತಾ ಶಂತನುಂ ಧರ್ಮವಿತ್ತಮಂ ||೩||**

ಮಂಗಳಕರಳಾದ ಯಾವ ಸತ್ಯವತಿಯನ್ನು ನೀನು ವ್ಯಾಸನ ತಾಯಿಯೆಂದು ಹೇಳಿದೆಯೋ ಅವಳು ಧರ್ಮವನ್ನರಿತ, ರಾಜನಾದ ಶಂತನುವನ್ನು ಹೇಗೆ ಪಡೆದಳು?

ಅವಳು ಪರಾಶರನನ್ನು ಮದುವೆಯಾಗದೆ ಪುನಃ ಕನ್ಯೆಯೇ ಆಗಿದ್ದುದರಿಂದ, ಎಂದರೆ,

**ನಿಷಾದಪುತ್ರೀಂ ಸ ಕಥಂ ವೃತವಾನ್ನೃಪತಿಃ ಸ್ವಯಂ ।**
**ಧರ್ಮಿಷ್ಠಃ ಪೌರವೋ ರಾಜಾ ಕುಲಹೀನಾಮಸಂವೃತಾಂ ॥೪॥**

ಪುರುವಂಶದ ರಾಜನಾದ, ಧರ್ಮಶೀಲನಾದ ಶಂತನುರಾಜನು, ತಾನಾಗಿ, ಒಳ್ಳೆಯ ಮೇಲಾದ ಕುಲದಲ್ಲಿ ಹುಟ್ಟಿದವಳಲ್ಲದ ಬೆಸ್ತರವನ ಮಗಳಾದ ಆ ಸತ್ಯವತಿ ಯನ್ನು ಹೇಗೆ ಮದುವೆಯಾದನು ?

**ಶಂತನೋಃ ಪ್ರಥಮಾ ಪತ್ನೀ ಕಾ ಹ್ಯಭೂತ್ಕಥಯಾಧುನಾ ।**
**ಭೀಷ್ಮಃ ಪುತ್ರೋಽಥ ಮೇಧಾವೀ ವಸೋರಂಶಃ ಕಥಂ ಪುನಃ ॥೫॥**

ಓ ಸೂತಮಹರ್ಷಿಯೇ, ಶಂತನುರಾಜನಿಗೆ ಮೊದಲನೆಯ ಹೆಂಡತಿಯು ಯಾರಾಗಿದ್ದಳೆಂಬುದನ್ನು ಈಗ ನಮಗೆ ಹೇಳು. ಮತ್ತು ಅವಳಲ್ಲಿ ಜನಿಸಿದ ಬುದ್ಧಿ ಶಾಲಿಯಾದ, ಭೀಷ್ಮನೆಂಬ ಶಂತನುರಾಜನ ಮಗನು ವಸುಗಳ ಅಂಶದವನು ಹೇಗಾ ದನು ಎಂಬುವುದನ್ನೂ ನಮಗೆ ಹೇಳು.

**ತ್ವಯಾ ಪ್ರೋಕ್ತಂ ಪುರಾ ಸೂತ ರಾಜಾ ಚಿತ್ರಾಂಗದಃ ಕೃತಃ ।**
**ಸತ್ಯವತ್ಯಾಃ ಸುತೋ ವೀರೋ ಭೀಷ್ಮೇಣಾಮಿತತೇಜಸಾ ॥೬॥**

ಓ ಸೂತಮಹರ್ಷಿಯೇ, ಸತ್ಯವತಿಯ ಮಗನಾದ, ಶೂರನಾದ ಚಿತ್ರಾಂಗದ ನನ್ನು ಅತ್ಯಂತ ತೇಜಸ್ವಿಯಾನ ಭೀಷ್ಮನು ರಾಜನನ್ನಾಗಿ ಮಾಡಿದನೆಂದು ನೀನು ಹಿಂದೆ ಹೇಳಿದೆ.

**ಚಿತ್ರಾಂಗದೇ ಹತೇ ವೀರೇ ಕೃತಸ್ತದನುಜಸ್ತಥಾ ।**
**ವಿಚಿತ್ರವೀರ್ಯನಾಮಾಸೌ ಸತ್ಯವತ್ಯಾಃ ಸುತೋ ನೃಪಃ ॥೭॥**

ಶೂರನಾದ ಚಿತ್ರಾಂಗದನು ಸತ್ತಮೇಲೆ, ಭೀಷ್ಮನು ಚಿತ್ರಾಂಗದನ ತಮ್ಮ ನಾದ, ಸತ್ಯವತಿಯ ಮಗನಾದ ವಿಚಿತ್ರವೀರ್ಯನನ್ನು ಹಾಗೆಯೇ ರಾಜನನ್ನಾಗಿ ಮಾಡಿದನು ಎಂದು ನೀನು ನಮಗೆ ಹೇಳಿದೆ.

**ಜ್ಯೇಷ್ಠೇ ಭೀಷ್ಮೇ ಸ್ಥಿತೇ ಪೂರ್ವಂ ಧರ್ಮಿಷ್ಠೇ ರೂಪವತ್ಯಪಿ ।**
**ಕೃತವಾನ್ ಸ ಕಥಂ ರಾಜ್ಯಂ ಸ್ಥಾಪಿತಸ್ತೇನ ಜಾನತಾ ॥೮॥**

ಧಾರ್ಮಿಕನೂ, ಸುಂದರನೂ, ಹಿರಿಯವನೂ ಆದ ಭೀಷ್ಮನು ಮೊದಲು ಇದ್ದರೂ, ಈ ವಿಷಯವನ್ನು ವಿಚಿತ್ರವೀರ್ಯನು ತಿಳಿದಿದ್ದರೂ ಕೂಡ, ಕಿರಿಯವನಾದ ಆ ವಿಚಿತ್ರವೀರ್ಯನು ಹೇಗೆ ರಾಜ್ಯವನ್ನು ಪಡೆದನು ಮತ್ತು ಆಳಿದನು? ಅಲ್ಲದೆ ಆ ಭೀಷ್ಮನು ರಾಜಧರ್ಮವನ್ನು ತಿಳಿದವನಾದರೂ ತನ್ನ ತಮ್ಮನನ್ನು ಏಕೆ ರಾಜ್ಯಭಾರದಲ್ಲಿ ಪಟ್ಟಾಭಿಷೇಕಮಾಡಿ ನಿಲ್ಲಿಸಿದನು?

**ಮೃತೇ ವಿಚಿತ್ರವೀರ್ಯೇ ತು ಸತ್ಯವತ್ಯತಿದುಃಖಿತಾ ।**
**ವಧೂಭ್ಯಾಂ ಗೋಲಕೌ ಪುತ್ರೌ ಜನಯಾಮಾಸ ಸಾ ಕಥಂ ॥೯॥**

ಆ ಸತ್ಯವತಿಯು, ತನ್ನ ಮಗನಾದ ವಿಚಿತ್ರವೀರ್ಯನು ಸತ್ತಮೇಲೆ ಅತ್ಯಂತ ವ್ಯಸನವುಳ್ಳವಳಾಗಿ ತನ್ನ ಪುತ್ರರ ಹೆಂಡತಿಯರಾದ ಅಂಬಿಕೆ ಮತ್ತು ಅಂಬಾಲಿಕೆ ಎಂಬ ಇಬ್ಬರು ಸೊಸೆಯರಲ್ಲಿ ಪರಪುರುಷನಾದ ವ್ಯಾಸನಿಂದ ಹೇಗೆ ಇಬ್ಬರು ಗೋಲಕ ಪುತ್ರರನ್ನು ಹುಟ್ಟುವಂತೆ ಮಾಡಿಸಿದಳು? (ಅಮೃತೇ ಜಾರಜಃ ಕುಂಡಃ ಮೃತೇ ಭರ್ತರಿ ಗೋಳಕಃ ॥ ಗಂಡನು ಬದುಕಿರುವಾಗಲೇ ಅವನು ಒಪ್ಪಿದರೆ ಅನ್ಯನಿಂದ ಹುಟ್ಟಿದ ಮಗನಿಗೆ ಕುಂಡನೆಂದೂ, ಗಂಡನು ಸತ್ತಮೇಲೆ ಹೆಂಡತಿಯಲ್ಲಿ ಅನ್ಯನಿಂದ ಹುಟ್ಟಿದ ಮಗನಿಗೆ ಗೋಳಕನೆಂದೂ ಹೆಸರು.)

**ಕಥಂ ರಾಜ್ಯಂ ನ ಭೀಷ್ಮಾಯ ದದೌ ಸಾ ವರವರ್ಣಿನೀ ।**
**ನ ಕೃತಸ್ತು ಕಥಂ ತೇನ ವೀರೇಣ ದಾರಸಂಗ್ರಹಃ ॥೧೦॥**

ಉತ್ತಮಸ್ತ್ರೀಯಾದ ಆ ಸತ್ಯವತಿಯು ಜ್ಯೇಷ್ಠಪುತ್ರನಾದ ಭೀಷ್ಮನಿಗೆ ಏಕೆ ರಾಜ್ಯವನ್ನು ಕೊಡಲಿಲ್ಲ? ಮತ್ತು ವೀರ್ಯವಂತನಾದ ಆ ಭೀಷ್ಮನು ಏಕೆ ಪತ್ನಿಯನ್ನು ಸ್ವೀಕರಿಸಲಿಲ್ಲ?

**ಅಧರ್ಮಸ್ತು ಕೃತಃ ಕಸ್ಮಾದ್ವ್ಯಾಸೇನಾಮಿತತೇಜಸಾ ।**
**ಜ್ಯೇಷ್ಠೇನ ಭ್ರಾತೃಭಾರ್ಯಾಯಾಂ ಪುತ್ರಾವುತ್ಪಾದಿತಾವಿತಿ ॥೧೧॥**

ಧರ್ಮಾತ್ಮನಾದ, ಅತ್ಯಂತತೇಜಸ್ವಿಯಾದ ಮತ್ತು ಅಣ್ಣನಾದ ವ್ಯಾಸನು ತನ್ನ ಸಹೋದರನಾದ ವಿಚಿತ್ರವೀರ್ಯನ ಹೆಂಡತಿಯಲ್ಲಿ ಪುತ್ರರನ್ನು ಹುಟ್ಟಿಸುವಿಕೆ ಎಂಬ ಅಧರ್ಮದ ಕೆಲಸವನ್ನು ಯಾವ ಕಾರಣದಿಂದ ಮಾಡಿದನು?

**ಪುರಾಣಕರ್ತಾ ಧರ್ಮಾತ್ಮಾ ಸ ಕಥಂ ಕೃತವಾನ್ಮುನಿಃ ।**
**ಸೇವನಂ ಪರದಾರಾಣಾಂ ಭ್ರಾತುಶ್ಚೈವ ವಿಶೇಷತಃ ॥೧೨॥**

ಪುರಾಣಗಳನ್ನು ಮಾಡಿದ, ಕೆಟ್ಟಕೆಲಸವನ್ನು ಮಾಡಬೆ ವೇದಸಮ್ಮತವಾದ ಧರ್ಮಕಾರ್ಯಗಳನ್ನೇ ಮಾಡತಕ್ಕ ಮತ್ತು ಮುನಿಯಾದ ವ್ಯಾಸನು, ಪರಸ್ತ್ರೀಯಲ್ಲಿ, ಅದರಲ್ಲೂ ವಿಶೇಷವಾಗಿ ತನ್ನ ಸಹೋದರನ ಪತ್ನಿಯಲ್ಲಿ, ಸಂಬಂಧವನ್ನು ಹೇಗೆ ಮಾಡಿದನು?

**ಜುಗುಪ್ಸಿತಮಿದಂ ಕರ್ಮ ಸ ಕಥಂ ಕೃತವಾನ್ಮುನಿಃ ।**
**ಶಿಷ್ಟಾಚಾರಃ ಕಥಂ ಸೂತ ವೇದಾನುಮಿತಿಕಾರಕಃ ॥೧೩॥**

ಆ ವ್ಯಾಸಮುನಿಯು ಇಂತಹ ನಿಂದಾಸ್ಪದವಾದ ಕೆಲಸವನ್ನು ಹೇಗೆ ಮಾಡಿದನು? ಎಲೈ ಸೂತಮಹರ್ಷಿಯೇ, ಲೋಕದಲ್ಲಿ ಶಿಷ್ಟಾಚಾರದಿಂದ ಎಂದರೆ ಸತ್ಪುರುಷರ ನಡತೆಯಿಂದ ವೇದಾರ್ಥವನ್ನು ಊಹಿಸತಕ್ಕ ಸತ್ಪುರುಷರ ಕೆಲಸವು ಈ ರೀತಿ ಅಯೋಗ್ಯವಾಗಿದ್ದರೆ ಅದು ಹೇಗೆ ವೇದಾರ್ಥವನ್ನು ಊಹಿಸಲು ತಕ್ಕದ್ದಾಗಿರುವುದು?

**ವ್ಯಾಸಶಿಷ್ಯೋಽಸಿ ಮೇಧಾವಿನ್ ಸಂದೇಹಂ ಛೇತ್ತುಮರ್ಹಸಿ ।**
**ಶ್ರೋತುಕಾಮಾ ವಯಂ ಸರ್ವೇ ಧರ್ಮಕ್ಷೇತ್ರೇ ಕೃತಕ್ಷಣಾಃ ॥೧೪॥**

ಜ್ಞಾನಿಯಾದ ಓ ಸೂತಮಹರ್ಷಿಯೇ, ನೀನು ವ್ಯಾಸನ ಶಿಷ್ಯನಾಗಿರುವೆ. ಆದುದರಿಂದ ನಮ್ಮ ಈ ಸಂಶಯವನ್ನು ಹೋಗಲಾಡಿಸಲು ನೀನು ಯೋಗ್ಯನಾಗಿದ್ದೀಯೆ. ನಿನ್ನ ಮಾತನ್ನು ಕೇಳಲು ನಾವೆಲ್ಲರೂ ಇಚ್ಛೆಯುಳ್ಳವರಾಗಿ ಧರ್ಮಬುದ್ಧಿಯನ್ನೇ ಉಂಟುಮಾಡುವ ಈ ಕ್ಷೇತ್ರದಲ್ಲಿ ಸಾವಧಾನರಾಗಿದ್ದೇವೆ.

॥ ಸೂತ ಉವಾಚ ॥

**ಇಕ್ಷ್ವಾಕುವಂಶಪ್ರಭವೋ ಮಹಾಭಿಷ ಇತಿ ಸ್ಮೃತಃ ।**
**ಸತ್ಯವಾನ್ ಧರ್ಮಶೀಲಶ್ಚ ಚಕ್ರವರ್ತೀ ನೃಪೋತ್ತಮಃ ॥೧೫॥**

ಇಕ್ಷ್ವಾಕುವಂಶದಲ್ಲಿ ಹುಟ್ಟಿದ, ಮಹಾಭಿಷನೆಂದು ಹೆಸರುಳ್ಳ ಸತ್ಯವಂತನೂ ಧರ್ಮಾತ್ಮನೂ ಆದ ರಾಜರಲ್ಲಿ ಶ್ರೇಷ್ಠನಾದ ಚಕ್ರವರ್ತಿಯು ಇದ್ದನು.

**ಅಶ್ವಮೇಧಸಹಸ್ರೇಣ ವಾಜಪೇಯಶತೇನ ಚ ।**
**ತೋಷಯಾಮಾಸ ದೇವೇಂದ್ರಂ ಸ್ವರ್ಗಂ ಪ್ರಾಪ ಮಹಾಮತಿಃ ॥೧೬॥**

ಆ ಮಹಾಭಿಷನೆಂಬ ರಾಜನು, ಸಾವಿರ ಅಶ್ವಮೇಧಯಾಗಗಳನ್ನೂ ನೂರು ವಾಜಪೇಯಯಾಗಗಳನ್ನೂ ಮಾಡಿ ಇಂದ್ರನನ್ನು ಸಂತೋಷಪಡಿಸಿದನು. ಅದರ ಫಲದಿಂದ ಅವನು ಸ್ವರ್ಗವನ್ನು ಪಡೆದನು.

**ಏಕದಾ ಬ್ರಹ್ಮಸದನಂ ಗತೋ ರಾಜಾ ಮಹಾಭಿಷಃ ।**
**ಸುರಾಃ ಸರ್ವೇ ಸಮಾಜಗ್ಮುಃ ಸೇವನಾರ್ಥಂ ಪ್ರಜಾಪತಿಂ ॥೧೭॥**

ಒಂದಾನೊಂದು ದಿವಸ, ಮಹಾಭಿಷರಾಜನು ಸತ್ಯಲೋಕದಲ್ಲಿರುವ ಬ್ರಹ್ಮನ ಮನೆಗೆ ಹೋದನು. ಎಲ್ಲಾ ದೇವತೆಗಳೂ ಕೂಡ ಬ್ರಹ್ಮನ ಸೇವೆಯನ್ನು ಮಾಡುವುದಕ್ಕೋಸ್ಕರ ಅಲ್ಲಿಗೆ ಬಂದು ಸೇರಿದರು.

**ಗಂಗಾ ಮಹಾನದೀ ತತ್ರ ಸಂಸ್ಥಿತಾ ಸೇವಿತುಂ ವಿಭುಂ ।**
**ತಸ್ಯಾ ವಾಸಃ ಸಮುದ್ಧೂತಂ ಮಾರುತೇನ ತರಸ್ವಿನಾ ॥೧೮॥**

ಅಲ್ಲದೆ ಶ್ರೇಷ್ಠನದಿಯಾದ ಗಂಗೆಯೂ ಸಹ ಬ್ರಹ್ಮನನ್ನು ಸೇವೆಮಾಡುವುದಕ್ಕೋಸ್ಕರ ಅಲ್ಲಿಗೆ ಬಂದಿದ್ದಳು. ಅಕಸ್ಮಾತ್ತಾಗಿ ವೇಗವಾದ ಗಾಳಿಯಿಂದ ಅವಳ ಸೀರೆಯು ಹಾರಿಹೋಯಿತು.

**ಅಧೋಮುಖಾಃ ಸುರಾಃ ಸರ್ವೇ ನ ವಿಲೋಕ್ಯೈವ ತಾಂ ಸ್ಥಿತಾಃ ।**
**ರಾಜಾ ಮಹಾಭಿಷಸ್ತಾಂ ತು ನಿಃಶಂಕಃ ಸಮುಪಶ್ಯತ ॥೧೯॥**

ಆಗ ಎಲ್ಲ ದೇವತೆಗಳೂ ಕೂಡ ಮುಖವನ್ನು ಕೆಳಗೆ ಬಾಗಿಸಿದವರಾಗಿ ಅವಳನ್ನು ನೋಡದೆ ಇದ್ದರು. ಆದರೆ ಮಹಾಭಿಷನು ಮಾತ್ರ ನಗ್ನಳಾದ ಪರಸ್ತ್ರೀಯನ್ನು ನೋಡುವುದರಿಂದ ಪಾಪವುಂಟಾಗುವುದೆಂಬ ವಿಚಾರವನ್ನು ಗಣನೆಗೆ ತಾರದೆ ಅವಳನ್ನು ನೋಡಿದನು.

**ಸಾಪಿ ತಂ ಪ್ರೇಮಸಂಯುಕ್ತಂ ನೃಪಂ ಜ್ಞಾತವತೀ ನದೀ ।**
**ದೃಷ್ಟ್ವಾ ತೌ ಪ್ರೇಮಸಂಯುಕ್ತೌ ನಿರ್ಲಜ್ಜೌ ಕಾಮಮೋಹಿತೌ॥೨೦॥**

ಆ ಗಂಗೆಯೂ ಕೂಡ ಪ್ರೇಮದಿಂದ ಕೂಡಿದ ಆ ಮಹಾಭಿಷರಾಜನ ಮನೋಭಾವವನ್ನು ತಿಳಿದವಳಾಗಿ ಅವನನ್ನು ನೋಡಿದಳು. ಆಗ ಬ್ರಹ್ಮನು ಪರಸ್ಪರ ಅನುರಾಗದಿಂದ ಕೂಡಿದ, ಕಾಮಪೀಡಿತರಾದ ಮತ್ತು ನಾಚಿಕೆಯಿಲ್ಲದ ಎಂದರೆ ಆ ಸಭೆಯಲ್ಲಿ ನಾಚಿಕೆಯಿಲ್ಲದೆ ಪರಸ್ಪರ ನೋಡುತ್ತಿರುವ ಆ ಗಂಗೆಯನ್ನೂ, ಮಹಾಭಿಷನನ್ನೂ ನೋಡಿದನು.

ಬ್ರಹ್ಮಾ ಚಕೋಪ ತೌ ತೂರ್ಣಂ ಶಶಾಪ ಚ ರುಷಾನ್ವಿತಃ ।
ಮರ್ತ್ಯಲೋಕೇಷು ಭೂಪಾಲ ಜನ್ಮ ಪ್ರಾಪ್ಯ ಪುನರ್ದಿವಂ ॥೨೦॥

ಪುಣ್ಯೇನ ಮಹತಾವಿಷ್ಟಸ್ತ್ವಮವಾಪ್ಸ್ಯಸಿ ಸರ್ವಥಾ ।
ಗಂಗಾಂ ತಥೋಕ್ತವಾನ್ ಬ್ರಹ್ಮಾ ವೀಕ್ಷ್ಯ ಪ್ರೇಮವತೀಂ ನೃಪೇ ॥೨೧॥

ಬ್ರಹ್ಮನು ಅವರನ್ನು ನೋಡಿ ಅತ್ಯಂತ ಕೋಪದಿಂದ ಕೂಡಿದವನಾಗಿ ಕೂಡಲೇ ಅವರನ್ನು ಈರೀತಿಯಲ್ಲಿ ಶಪಿಸಿದನು. ಎಲೈ ರಾಜನೇ, ನೀನು ಭೂಲೋಕದಲ್ಲಿ ಹುಟ್ಟಿ, ಅನೇಕ ಒಳ್ಳೆಯ ಕಾರ್ಯಗಳನ್ನು ಮಾಡಿ ಹೆಚ್ಚು ಪುಣ್ಯವನ್ನು ಸಂಪಾದಿಸಿ ತಿರುಗಿ ಸ್ವರ್ಗವನ್ನು ಪಡೆಯುವೆ. ರಾಜನಲ್ಲಿ ಅನುರಾಗವುಳ್ಳವಳಾದ ಗಂಗೆಯನ್ನು ನೋಡಿ ಬ್ರಹ್ಮನು ಅವಳಿಗೂ ಹಾಗೆಯೇ ಭೂಲೋಕದಲ್ಲಿ ಜನ್ಮವೆತ್ತಲು ಶಾಪವನ್ನು ಕೊಟ್ಟನು.

ವಿಮನಸ್ಕೌ ತು ತೌ ತೂರ್ಣಂ ನಿಃಸೃತೌ ಬ್ರಹ್ಮಣೋಽನ್ತಿಕಾತ್ ।
ಸ ನೃಪಾನ್ ಚಿಂತಯಿತ್ವಾಥ ಭೂಲೋಕೇ ಧರ್ಮತತ್ಪರಾನ್ ॥೨೩॥

ಅತಿ ದುಃಖಿತರಾದ ಆ ಗಂಗೆ ಮತ್ತು ಮಹಾಭಿಷರಾಜ ಇವರಿಬ್ಬರೂ ಕೂಡಲೇ ಬ್ರಹ್ಮನ ಸಮೀಪದಿಂದ ಹೊರಟರು. ಅನಂತರದಲ್ಲಿ ಮಹಾಭಿಷರಾಜನು ಭೂಲೋಕದಲ್ಲಿ ಹುಟ್ಟುವುದಕ್ಕೋಸ್ಕರ ಯಾರಲ್ಲಿ ಹುಟ್ಟುವುದು ಉತ್ತಮವೆಂದು ಭೂಲೋಕದಲ್ಲಿರತಕ್ಕ ಧರ್ಮಾತ್ಮರಾದ ಎಲ್ಲ ರಾಜರನ್ನೂ ಮನಸ್ಸಿನಲ್ಲಿ ಯೋಚಿಸಿದನು.

ಪ್ರತೀಪಂ ಚಿಂತಯಾಮಾಸ ಪಿತರಂ ಪುರುವಂಶಜಂ ।
ಏತಸ್ಮಿನ್ ಸಮಯೇ ಚಾಷ್ಟೌ ವಸವಃ ಸ್ತ್ರೀಸಮನ್ವಿತಾಃ ॥೨೪॥

ವಸಿಷ್ಠಸ್ಯಾಶ್ರಮಂ ಪ್ರಾಪ್ತಾ ರಮಮಾಣಾ ಯದೃಚ್ಛಯಾ ।

ಈರೀತಿ ಮಹಾಭಿಷರಾಜನು, ಪುರುವಂಶದಲ್ಲಿ ಹುಟ್ಟಿದ ಪ್ರತೀಪರಾಜನ ಉದರದಲ್ಲಿ ಜನಿಸುವುದು ಯೋಗ್ಯವೆಂದು ಯೋಚಿಸಿ, ಅವನನ್ನು ತನ್ನ ತಂದೆಯನ್ನಾಗಿ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು. ಈ ಸಮಯದಲ್ಲಿ ಪೃಥ್ವಾದಿ ಅಷ್ಟ ವಸುಗಳು ಸ್ತ್ರೀಸಮೇತರಾಗಿ ಕ್ರೀಡಿಸುತ್ತಾ ಅಕಸ್ಮಾತ್ತಾಗಿ ವಸಿಷ್ಠಮಹರ್ಷಿಯ ಆಶ್ರಮಕ್ಕೆ ಬಂದರು.

**ಪೃಥ್ವಾದೀನಾಂ ವಸೂನಾಂ ಚ ಮಧ್ಯೇ ಕೋಽಪಿ ವಸೂತ್ತಮಃ ॥೨೫॥**
**ದ್ಯೌರ್ನಾಮಾ ತಸ್ಯ ಭಾರ್ಯಾಽಥ ನಂದಿನೀಂ ಗಾಂ ದದರ್ಶ ಹ ।**
**ದೃಷ್ಟ್ವಾ ಪತಿಂ ಸಾ ಪಪ್ರಚ್ಛ ಕಸ್ಯೇಯಂ ಧೇನುರುತ್ತಮಾ ॥೨೬॥**

ಪೃಥುವೇ ಮೊದಲಾದ ವಸುಗಳಲ್ಲಿ ಶ್ರೇಷ್ಠನಾದ ದ್ಯೌ ಎಂಬ ಹೆಸರುಳ್ಳ ಒಬ್ಬ ವಸುವು ಇದ್ದನು. ಅವನ ಹೆಂಡತಿಯು ವಸಿಷ್ಠಾಶ್ರಮದಲ್ಲಿದ್ದ ನಂದಿನೀಧೇನುವನ್ನು ನೋಡಿದಳು. ಮತ್ತು ತನ್ನ ಗಂಡನನ್ನು ಕುರಿತು, ಈ ಶ್ರೇಷ್ಠವಾದ ಗೋವು ಯಾರದೆಂದು ಕೇಳಿದಳು.

**ದ್ಯೌಸ್ತಾಮಾಹ ವಸಿಷ್ಠಸ್ಯ ಗೌರಿಯಂ ಶೃಣು ಸುಂದರಿ ।**
**ದುಗ್ಧಮಸ್ಯಾಃ ಪಿಬೇದ್ಯಸ್ತು ನಾರೀ ವಾ ಪುರುಷೋಽಥವಾ ॥೨೭॥**
**ಅಯುತಾಯುರ್ಭವೇನ್ನೂನಂ ಸದೈವಾಽಽಗತಯೌವನಃ ।**

ಆಗ ದ್ಯೌ ಎಂಬ ವಸುವು ತನ್ನ ಪತ್ನಿಯನ್ನು ಕುರಿತು ಈರೀತಿಯಲ್ಲಿ ಹೇಳಿದನು—ಓ, ಸುಂದರಿಯೇ ಕೇಳು, ಈ ಗೋವು ವಸಿಷ್ಠಮಹರ್ಷಿಯದು. ಈ ಗೋವಿನ ಹಾಲನ್ನು ಪುರುಷರಾಗಲೀ ಸ್ತ್ರೀಯರಾಗಲೀ ಯಾರು ಕುಡಿಯುತ್ತಾರೋ ಅವರು ಯಾವಾಗಲೂ ಯೌವನವನ್ನು ಕಳೆದುಕೊಳ್ಳದವರಾಗಿ ಹತ್ತುಸಾವಿರ ವರ್ಷಗಳ ತನಕ ಆಯುಸ್ಸುಳ್ಳವರಾಗುತ್ತಾರೆ.

**ತಚ್ಛ್ರುತ್ವಾ ಸುಂದರೀ ಪ್ರಾಹ ಮರ್ತ್ಯಲೋಕೇಽಸ್ತಿ ಮೇ ಸಖೀ ॥೨೮॥**
**ಉಶೀನರಸ್ಯ ರಾಜರ್ಷೇಃ ಪುತ್ರೀ ಪರಮಶೋಭನಾ ।**

ಆ ಮಾತನ್ನು ಕೇಳಿ, ಸುಂದರಿಯಾದ ವಸುವಿನ ಹೆಂಡತಿಯು ಹೇಳಿದಳು—ಭೂಲೋಕದಲ್ಲಿ ಉಶೀನರನೆಂಬ ಶ್ರೇಷ್ಠರಾಜನ ಮಗಳಾದ ಅತ್ಯಂತ ಸುಂದರಿಯಾದ ನನ್ನ ಗೆಳತಿಯೊಬ್ಬಳು ಇದ್ದಾಳೆ.

ತಸ್ಯ ಹೇತೋರ್ಮಹಾಭಾಗ ಸವತ್ಸಾಂ ಗಾಂ ಪಯಸ್ವಿನೀಂ ॥೨೯॥
ಆನಯಸ್ವಾಶ್ರಮಶ್ರೇಷ್ಠಂ ನಂದಿನೀಂ ಕಾಮದಾಂ ಶುಭಾಂ ।

ಎಲೈ ಭಾಗ್ಯಶಾಲಿಯೇ, ಆ ನನ್ನ ಸಖಿಗೋಸ್ಕರ ಮಂಗಳಕರವಾಗಿಯೂ, ಇಷ್ಟಾರ್ಥವನ್ನು ಸಲ್ಲಿಸುವ ಹಾಲನ್ನು ಕೊಡತಕ್ಕದ್ದಾಗಿಯೂ ಇರುವ, ಕರುವಿನಿಂದ ಕೂಡಿರುವ ಈ ನಂದಿನೀಧೇನುವನ್ನು ಶ್ರೇಷ್ಠವಾದ ಆಶ್ರಮಕ್ಕೆ ತೆಗೆದುಕೊಂಡು ಬಾ.

ಯಾವದಸ್ಯಾಃ ಪಯಃ ಪೀತ್ವಾ ಸಖೀ ಮಮ ಸದೈವ ಹಿ ॥೩೦॥
ಮಾನುಷೇಷು ಭವೇದೇಕಾ ಜರಾರೋಗವಿವರ್ಜಿತಾ ।

ನನ್ನ ಸಖಿಯು ಈ ನಂದಿನೀಧೇನುವಿನ ಹಾಲನ್ನು ಕುಡಿದು, ಮನುಷ್ಯರಲ್ಲಿ ಅವಳೊಬ್ಬಳಾದರೂ ಯಾವಾಗಲೂ ಮುಪ್ಪು ಮತ್ತು ರೋಗಗಳಿಲ್ಲದವಳು ಆಗಲಿ.

ತಚ್ಛ್ರುತ್ವಾ ವಚನಂ ತಸ್ಯಾ ದ್ಯೌರ್ಜಹಾರ ಚ ನಂದಿನೀಂ ॥೩೧॥
ಅವಮನ್ಯ ಮುನಿಂ ದಾಂತಂ ಪೃಥ್ವಾದ್ಯೈಃ ಸಹಿತೋಽನಘಃ ।

ನಿಷ್ಕಲ್ಮಷನಾಗಿದ್ದ ದ್ಯೌ ಎಂಬ ವಸುವು ತನ್ನ ಪತ್ನಿಯ ಮಾತನ್ನು ಕೇಳಿ ಪೃಥುವೇ ಮೊದಲಾದ ಎಲ್ಲ ವಸುಗಳಿಂದ ಕೂಡಿಕೊಂಡು ಇಂದ್ರಿಯನಿಗ್ರಹಶೀಲರಾದ ವಸಿಷ್ಠಮಹರ್ಷಿಗಳನ್ನು ತಿರಸ್ಕರಿಸಿ ಎಂದರೆ ಅವರನ್ನು ಕೇಳದೆ ನಂದಿನೀಧೇನುವನ್ನು ಅಪಹರಿಸಿದನು.

ಹೃತಾಯಾಮಥ ನಂದಿನ್ಯಾಂ ವಸಿಷ್ಠಸ್ತು ಮಹಾತಪಾಃ ॥೩೨॥
ಆಜಗಾಮಾಶ್ರಮಪದಂ ಫಲಾನ್ಯಾದಾಯ ಸತ್ವರಃ ।

ಹೀಗೆ ಅವರು ನಂದಿನೀಗೋವನ್ನು ಅಪಹರಿಸಿಕೊಂಡುಹೋದಮೇಲೆ ಹಣ್ಣುಗಳನ್ನು ತರುವುದಕ್ಕೋಸ್ಕರ ವನಕ್ಕೆ ಹೋಗಿದ್ದ, ದೊಡ್ಡತಪಸ್ವಿಯಾದ ವಸಿಷ್ಠ ಮಹರ್ಷಿಯು ಬೇಗನೆ ಹಣ್ಣುಗಳನ್ನು ತೆಗೆದುಕೊಂಡು ಆಶ್ರಮಕ್ಕೆ ಬಂದನು.

ನಾಪಶ್ಯತ ಯದಾ ಧೇನುಂ ಸವತ್ಸಾಂ ಸ್ವಾಶ್ರಮೇ ಮುನಿಃ ॥೩೩॥
ಮೃಗಯಾಮಾಸ ತೇಜಸ್ವೀ ಗಹ್ವರೇಷು ವನೇಷ್ವಪಿ ।
ನಾಸಾದಿತಾ ಯದಾ ಧೇನುಶ್ಚುಕೋಪಾತಿಶಯಂ ಮುನಿಃ ॥೩೪॥

ಹೀಗೆ ಆಶ್ರಮಕ್ಕೆ ಬಂದು ಅಲ್ಲಿ ಕರುವಿನಿಂದ ಕೂಡಿರುವ ನಂದಿನೀಗೋವನ್ನು ಎಲ್ಲಿಯೂ ಕಾಣದೆ, ತೇಜಸ್ವಿಯಾದ ವಸಿಷ್ಠನು, ಎಲ್ಲ ಗುಹೆಗಳಲ್ಲಿಯೂ, ಕಾಡುಗಳಲ್ಲಿಯೂ ಹುಡುಕಿದನು. ಹೀಗೆ ಎಲ್ಲ ಕಡೆಯಲ್ಲಿ ಹುಡುಕಿದಾಗ್ಯೂ ನಂದಿನೀಗೋವು ಸಿಕ್ಕದಿರಲು ಆ ವಸಿಷ್ಠಮುನಿಯು ಅತ್ಯಂತವಾಗಿ ಕೋಪಗೊಂಡನು.

**ವಾರುಣಿಶ್ಚಾಪಿ ವಿಜ್ಞಾಯ ಧ್ಯಾನೇನ ವಸುಭಿರ್ಹೃತಾಂ ।**
**ವಸುಭಿರ್ಮೇ ಹೃತಾ ಧೇನುರ್ಯಸ್ಮಾನ್ಮಾಮವಮನ್ಯ ವೈ ॥೩೫॥**

**ತಸ್ಮಾತ್ಸರ್ವೇ ಜನಿಷ್ಯಂತಿ ಮಾನುಷೇಷು ನ ಸಂಶಯಃ ।**
**ಏವಂ ಶಶಾಪ ಧರ್ಮಾತ್ಮಾ ವಸೂಂಸ್ತಾನ್ವಾರುಣಿಃ ಸ್ವಯಂ ॥೩೬॥**

ಅನಂತರದಲ್ಲಿ ವಸಿಷ್ಠಮಹರ್ಷಿಯು ಧ್ಯಾನದಿಂದ.ಅಂದರೆ ಜ್ಞಾನದೃಷ್ಟಿಯಿಂದ ಗೋವನ್ನು ವಸುಗಳು ಅಪಹರಿಸಿದುದನ್ನು ತಿಳಿದು, ಯಾವ ಕಾರಣದಿಂದ ವಸುಗಳು ನನ್ನನ್ನು ತಿರಸ್ಕರಿಸಿ ನಂದಿನೀಗೋವನ್ನು ಅಪಹರಿಸಿದರೋ ಆ ಕಾರಣದಿಂದ ಅವರೆಲ್ಲರೂ ಮನುಷ್ಯಶರೀರದಲ್ಲಿ ಹುಟ್ಟುವರು. ಇದರಲ್ಲಿ ಸಂದೇಹವಿಲ್ಲ. ಈ ರೀತಿಯಾಗಿ ಧರ್ಮಾತ್ಮನಾದ ವಸಿಷ್ಠಮಹರ್ಷಿಯು ಆ ಅಷ್ಟವಸುಗಳಿಗೆ ಶಾಪವನ್ನು ಕೊಟ್ಟನು.

**ಶ್ರುತ್ವಾ ವಿಮನಸಃ ಸರ್ವೇ ಪ್ರಯಯುರ್ದುಃಖಿತಾಶ್ಚ ತೇ ।**
**ಶಪ್ತಾಃ ಸ್ಮ ಇತಿ ಜಾನಂತ ಋಷಿಂ ತಮುಪಚಕ್ರಮುಃ ॥೩೭॥**

ಈ ವಿಷಯವನ್ನು ತಿಳಿದು ಆ ಎಲ್ಲ ವಸುಗಳೂ ಕೂಡ ಖಿನ್ನಮನಸ್ಕರಾಗಿ ಅತ್ಯಂತವ್ಯಸನಗೊಂಡರು. ಮತ್ತು ವಸಿಷ್ಠಮಹರ್ಷಿಯು ತಮ್ಮನ್ನು ಶಪಿಸಿರುವನೆಂದು ತಿಳಿದವರಾಗಿ ಅವನ ಅನುಗ್ರಹಕ್ಕೋಸ್ಕರ ಆ ವಸಿಷ್ಠಮಹರ್ಷಿಯ ಸಮೀಪಕ್ಕೆ ಹೋದರು.

**ಪ್ರಸಾದಯಂತಸ್ತಮೃಷಿಂ ವಸವಃ ಶರಣಂ ಗತಾಃ ।**
**ಮುನಿಸ್ತಾನಾಹ ಧರ್ಮಾತ್ಮಾ ವಸೂನ್ ದೀನಾನ್ ಪುರಃಸ್ಥಿತಾನ್ ॥೩೮॥**

ವಸುಗಳು ಆ ವಸಿಷ್ಠಮಹರ್ಷಿಯನ್ನು ಪ್ರಾರ್ಥಿಸಿ ಅವನನ್ನೇ ಶರಣುಹೊಂದಿದರು. ಆಗ ಧರ್ಮಾತ್ಮನಾದ ವಸಿಷ್ಠಮಹರ್ಷಿಯು ತನ್ನ ಮುಂದಿರತಕ್ಕ, ಅತ್ಯಂತ ದೈನ್ಯದಿಂದ ಕೂಡಿದ ಆ ವಸುಗಳನ್ನು ಕುರಿತು ದಯೆಯಿಂದ ಹೀಗೆ ಹೇಳಿದನು.

**ಅನುಸಂವತ್ಸರಂ ಸರ್ವೇ ಶಾಪಮೋಕ್ಷಮವಾಪ್ಸ್ಯಥ ।**
**ಯೇನೇಯಂ ವಿಹೃತಾ ಧೇನುರ್ನಂದಿನೀ ಮಮ ವತ್ಸಲಾ ॥೩೯॥**

ಎಲೈ ವಸುಗಳಿರಾ, ನೀವೆಲ್ಲರೂ ಮನುಷ್ಯರಾಗಿ ಹುಟ್ಟಿ ಒಂದು ವರ್ಷದ ನಂತರ ಶಾಪವಿಮೋಚನೆಯನ್ನು ಹೊಂದುವಿರಿ. ಆದರೆ ಯಾವ ಕಾರಣದಿಂದ ನನ್ನ ಪ್ರೀತಿಪಾತ್ರವಾದ ಆ ನಂದಿನೀಗೋವನ್ನು ದ್ಯೌ ಎಂಬ ವಸುವು ಅಪಹರಿಸಿ ದನೋ,

**ತಸ್ಮಾದ್ದ್ಯೌರ್ಮಾನುಷೇ ದೇಹೇ ದೀರ್ಘಕಾಲಂ ವಸಿಷ್ಯತಿ ।**
**ತೇ ಶಪ್ತಾಃ ಪಥಿ ಗಚ್ಛಂತೀಂ ಗಂಗಾಂ ದೃಷ್ಟ್ವಾ ಸರಿದ್ವರಾಂ ॥೪೦॥**

ಆ ಕಾರಣದಿಂದ ದ್ಯೌ ಎಂಬ ವಸುವು ಮನುಷ್ಯಶರೀರದಲ್ಲಿ ಹೆಚ್ಚುಕಾಲ ವಾಸಮಾಡುವನು. ಈ ರೀತಿಯಾಗಿ ಶಾಪವನ್ನು ಹೊಂದಿದ ಆ ವಸುಗಳು ವಿಶಾಪದ ಗಡುವನ್ನು ತಿಳಿದು ಹೊರಟು, ದಾರಿಯಲ್ಲಿ ಹೋಗುತ್ತಾ, ನದಿಗಳಲ್ಲಿ ಶ್ರೇಷ್ಠವಾದ ಗಂಗಾನದಿಯನ್ನು ನೋಡಿದರು.

**ಊಚುಸ್ತಾಂ ಪ್ರಣತಾಃ ಸರ್ವೇ ಶಪ್ತಾಂ ಚಿಂತಾತುರಾಂ ನದೀಂ ।**
**ಭವಿಷ್ಯಾಮೋ ವಯಂ ದೇವಿ ಕಥಂ ದೇವಾಃ ಸುಧಾಶನಾಃ ॥೪೧॥**

**ಮಾನುಷಾಣಾಂ ಚ ಜಠರೇ ಚಿಂತೇಯಂ ಮಹತೀ ಹಿ ನಃ ।**
**ತಸ್ಮಾತ್ತ್ವಂ ಮಾನುಷೀ ಭೂತ್ವಾ ಜನಯಾಸ್ಮಾನ್ ಸರಿದ್ವರೇ ॥೪೨॥**

ಆ ಎಲ್ಲಾ ವಸುಗಳು ಶಾಪವನ್ನು ಪಡೆದಿದ್ದು ಅತ್ಯಂತ ವ್ಯಸನದಿಂದ ಕೂಡಿ ಗಂಗಾನದಿಯನ್ನು ನಮಸ್ಕರಿಸಿ ಈ ರೀತಿ ಪ್ರಾರ್ಥಿಸಿದರು. ಎಲೌ ತಾಯಿಯೇ, ಅಮೃತವನ್ನು ಪಾನಮಾಡತಕ್ಕ ದೇವತೆಗಳಾದ ನಾವು ಹೇಗೆ ಮನುಷ್ಯರಾಗುವೆವು ? ಅದರಲ್ಲೂ ಮನುಷ್ಯರ ಉದರದಲ್ಲಿ ಹೇಗೆ ತಾನೇ ಜನಿಸುವೆವು ? ಈ ದೊಡ್ಡ ಚಿಂತೆಯು ನಮಗೆ ಬಹಳ ವ್ಯಸನಕ್ಕೆ ಕಾರಣವಾಗಿದೆ. ಆದುದರಿಂದ ನದಿಗಳಲ್ಲಿ ಶ್ರೇಷ್ಠವಾದ ಓ ಗಂಗಾದೇವಿಯೇ, ನೀನು ಮನುಷ್ಯಳಾಗಿ ನಮ್ಮನ್ನು ಪ್ರಸವಿಸು.

**ಶಂತನುರ್ನಾಮ ರಾಜರ್ಷಿಸ್ತಸ್ಯ ಭಾರ್ಯಾ ಭವಾನಘೇ ।**
**ಜಾತಾನ್ ಜಾತಾನ್ ಜಲೇ ಚಾಸ್ಮಾನ್ ನಿಕ್ಷಿಪಸ್ವ ಸುರಾಪಗೇ ॥೪೩॥**

ಎಲೌ ಪಾಪರಹಿತಳಾದ ದೇವಗಂಗೆಯೇ, ನೀನು ಶಂತನು ಎಂಬ ಶ್ರೇಷ್ಠ ರಾಜನ ಪತ್ನಿಯಾಗು. ಅವನಿಂದ ನಿನ್ನಲ್ಲಿ ಹುಟ್ಟುವ ನಮ್ಮೆಲ್ಲರನ್ನೂ ಕ್ರಮವಾಗಿ ಹುಟ್ಟಿದ ಕೂಡಲೇ ನೀನು ನೀರಿನಲ್ಲಿ ಬಿಸಾಡುವವಳಾಗು.

**ಏವಂ ಶಾಪವಿನಿರ್ಮೋಕ್ಷೋ ಭವಿತಾ ನಾತ್ರ ಸಂಶಯಃ ।**
**ತಥೇತ್ಯುಕ್ತ್ವಾಶ್ಚ ತೇ ಸರ್ವೇ ಜಗ್ಮುರ್ಲೋಕಂ ಸ್ವಕಂ ಪುನಃ ॥೪೪॥**

ಈ ರೀತಿಯಾಗಿ ನಮಗೆ ಶಾಪದ ಬಿಡುಗಡೆಯು ಆಗುವುದು. ಇದರಲ್ಲಿ ಯಾವ ಸಂದೇಹವೂ ಇಲ್ಲ. ಈ ಮಾತನ್ನು ಕೇಳಿ ಗಂಗಾದೇವಿಯು ಹಾಗೇ ಆಗಲಿ ಎಂದು ಹೇಳಿದಳು. ಅನಂತರದಲ್ಲಿ ಅವರೆಲ್ಲರೂ ತಮ್ಮ ತಮ್ಮ ಲೋಕಕ್ಕೆ ಹೊರಟು ಹೋದರು.

**ಗಂಗಾಪಿ ನಿರ್ಗತಾ ದೇವೀ ಚಿಂತ್ಯಮಾನಾ ಪುನಃಪುನಃ ।**
**ಮಹಾಭಿಷೋ ನೃಪೋ ಜಾತಃ ಪ್ರತೀಪಸ್ಯ ಸುತಸ್ತದಾ ॥೪೫॥**

ದೇವಿಯಾದ ಗಂಗೆಯೂ ಕೂಡ ಬಹಳವಾಗಿ ಯೋಚಿಸುತ್ತಾ ಹೊರಟು ಹೋದಳು. ಆಗ ಮಹಾಭಿಷನೆಂಬ ಇಕ್ಷ್ವಾಕು ವಂಶದ ರಾಜನು ಪುರುವಂಶದ ಪ್ರತೀಪನೆಂಬ ರಾಜನ ಮಗನಾಗಿ, ಅವನ ಪತ್ನಿಯ ಗರ್ಭದಲ್ಲಿ ಜನಿಸಿದನು.

**ಶಂತನುರ್ನಾಮ ರಾಜರ್ಷಿರ್ಧರ್ಮಾತ್ಮಾ ಸತ್ಯಸಂಗರಃ ।**
**ಪ್ರತೀಪಸ್ತು ಸ್ತುತಿಂ ಚಕ್ರೇ ಸೂರ್ಯಸ್ಯಾಮಿತತೇಜಸಃ ॥೪೬॥**

ಆ ಪುತ್ರನು ಶಂತನು ಎಂದು ಹೆಸರುಳ್ಳವನೂ, ರಾಜರಲ್ಲಿ ಶ್ರೇಷ್ಠನೂ, ಧರ್ಮಶೀಲನೂ, ಸತ್ಯವಾದ ಪ್ರತಿಜ್ಞೆ ಅಥವಾ ವಾಗ್ದಾನವುಳ್ಳವನೂ, ಎಂದರೆ ಸತ್ಯವಂತನೂ ಆಗಿದ್ದನು. ಆ ಪ್ರತೀಪರಾಜನು ಅತ್ಯಂತ ತೇಜಸ್ವಿಯಾದ ಸೂರ್ಯನನ್ನು ಸ್ತುತಿಸಿದನು.

**ತದಾ ಚ ಸಲಿಲಾತ್ತಸ್ಮಾನ್ನಿಃಸೃತಾ ವರವರ್ಣಿನೀ ।**
**ದಕ್ಷಿಣಂ ಶಾಲಸಂಕಾಶಮೂರುಂ ಭೇಜೇ ಶುಭಾನನಾ ॥೪೭॥**

ಆಗ ಆ ಗಂಗಾಜಲದ ದೆಸೆಯಿಂದ, ಸುಂದರವಾದ ಮುಖವುಳ್ಳ ಮತ್ತು ಗಂಡನನ್ನು ಇಚ್ಛಿಸುತ್ತಿರುವ ಒಬ್ಬ ಸ್ತ್ರೀಯು ಹೊರಹೊರಟು ಬಂದು ಪ್ರತೀಪ ಮಹಾರಾಜನ ಮಾನಿನಂತಿರತಕ್ಕ ಬಲಭಾಗದ ತೊಡೆಯಲ್ಲಿ ಕುಳಿತಳು.

**ಅಂಕೇ ಸ್ಥಿತಾಂ ಸ್ತ್ರಿಯಂ ಚಾಹ ಮಾಽಪೃಷ್ಟ್ವಾ ಕಿಂ ವರಾನನೇ ।**
**ಮಮೋರಾವಾಸ್ಥಿತಾಸಿ ತ್ವಂ ಕಿಮರ್ಥಂ ದಕ್ಷಿಣೇ ಶುಭೇ ॥೪೮॥**

ಪ್ರತೀಪ ಮಹಾರಾಜನು ತನ್ನ ತೊಡೆಯಲ್ಲಿ ಕುಳಿತುಕೊಂಡಿರತಕ್ಕ ಸ್ತ್ರೀಯನ್ನು ಕುರಿತು ಈ ರೀತಿ ಹೇಳಿದನು. ಎಲೆ ಸುಂದರವಾದ ಮುಖವುಳ್ಳ ಸ್ತ್ರೀಯೇ, (ಚಿಕ್ಕ ಕನ್ನಿಕೆಗೆ ಕುಳಿತುಕೊಳ್ಳಲು ಯೋಗ್ಯವಾದ) ಈ ನನ್ನ ಬಲ ತೊಡೆಯಲ್ಲಿ ನನ್ನನ್ನು ಕೇಳದೆ ನೀನು ಏಕೆ ಕುಳಿತಿರುವೆ ?

**ಸಾ ತಮಾಹ ವರಾರೋಹಾ ಯದರ್ಥಂ ರಾಜಸತ್ತಮ ।**
**ಸ್ಥಿತಾಽಸ್ಮ್ಯಂಕೇ ಕುರುಶ್ರೇಷ್ಠ ಕಾಮಯಾನಾಂ ಭಜಸ್ವ ಮಾಂ ॥೪೯॥**

ಆಗ ಆ ಸ್ತ್ರೀಯು ರಾಜನನ್ನು ಕುರಿತು ಹೇಳಿದಳು—ಎಲ್ಲ ರಾಜರುಗಳಲ್ಲಿಯೂ, ಕುರುವಂಶೀಯರಲ್ಲೂ ಶ್ರೇಷ್ಠನಾಗಿ ಇರತಕ್ಕ ಓ ಪ್ರತೀಪಮಹಾರಾಜನೇ, ನಿನ್ನನ್ನು ಹೊಂದುವ ಉದ್ದೇಶದಿಂದ ನಿನ್ನ ತೊಡೆಯಲ್ಲಿ ಕುಳಿತಿರುತ್ತೇನೆ. ಆದುದರಿಂದ ನಿನ್ನನ್ನು ಇಚ್ಛಿಸುತ್ತಿರುವ ನನ್ನನ್ನು ನೀನು ಸ್ವೀಕರಿಸು.

**ತಾಮುವೋಚದಥೋ ರಾಜಾ ರೂಪಯೌವನಶಾಲಿನೀಂ ।**
**ನಾಹಂ ಪರಸ್ತ್ರಿಯಂ ಕಾಮಾದ್ಗಚ್ಛೇಯಂ ವರವರ್ಣಿನೀಂ ॥೫೦॥**

ಅವಳ ಮಾತನ್ನು ಕೇಳಿದಮೇಲೆ, ಅತ್ಯಂತಸುಂದರಿಯೂ, ಯುವತಿಯೂ ಆದ ಆ ಸ್ತ್ರೀಯನ್ನು ಕುರಿತು ರಾಜನು ಈರೀತಿ ಹೇಳಿದನು. ಎಲೆ ಸ್ತ್ರೀಯೇ, ನಾನು ಕಾಮದ ದೆಸೆಯಿಂದ ವರವನ್ನು ಅಪೇಕ್ಷಿಸತಕ್ಕ ಪರಸ್ತ್ರೀಯನ್ನು ಎಂದೂ ಸ್ವೀಕರಿಸಲಾರೆನು.

**ಸ್ಥಿತಾ ದಕ್ಷಿಣಮೂರುಂ ಮೇ ತ್ವಮಾಶ್ಲಿಷ್ಯ ಚ ಭಾಮಿನಿ ।**
**ಅಪತ್ಯಾನಾಂ ಸ್ನುಷಾಣಾಂ ಚ ಸ್ಥಾನಂ ವಿದ್ಧಿ ಶುಚಿಸ್ಮಿತೇ ॥೫೧॥**

ಎಲೆ ಸುಂದರಸ್ತ್ರೀಯೇ, ನೀನು ನನ್ನ ಬಲತೊಡೆಯಲ್ಲಿ ಆಲಿಂಗಿಸಿ ಕುಳಿತಿರುವೆ. ಆದರೆ ಬಿಳಿಯ ಬೆಳಕನ್ನು ಬೀರುವ ಮಂದಹಾಸವುಳ್ಳ ಎಲೆ ಸ್ತ್ರೀಯೇ, ಈ ನನ್ನ ಬಲತೊಡೆಯು ನನ್ನ ಮಕ್ಕಳಿಗೂ, ಸೊಸೆಯರಿಗೂ ಕುಳಿತುಕೊಳ್ಳುವ ಸ್ಥಾನವೆಂದು ತಿಳಿ.

**ಸ್ನುಷಾ ಮೇ ಭವ ಕಲ್ಯಾಣಿ ಜಾತೇ ಪುತ್ರೇಽತಿವಾಂಛಿತೇ ।**
**ಭವಿಷ್ಯತಿ ಚ ಮೇ ಪುತ್ರಸ್ತವ ಪುಣ್ಯಾನ್ನ ಸಂಶಯಃ ॥೫೨॥**

ಆದುದರಿಂದ, ನನ್ನ ತೊಡೆಯಲ್ಲಿ ಕುಳಿತುಕೊಳ್ಳಲು ಇಚ್ಛಿಸತಕ್ಕ ಮಂಗಳಕರಳಾದ ಸ್ತ್ರೀಯೇ, ನನಗೆ ಪುತ್ರನು ಜನಿಸಿದಮೇಲೆ ನೀನು ನನ್ನ ಪುತ್ರನ ಹೆಂಡತಿಯಾಗು. ನಿನ್ನ ಪುಣ್ಯದ ದೆಶೆಯಿಂದ ನನಗೆ ನಿಶ್ಚಯವಾಗಿಯೂ ಮಗನು ಹುಟ್ಟುವನು.

**ತಥೇತ್ಯುಕ್ತ್ವಾ ಗತಾ ಸಾ ವೈ ಕಾಮಿನೀ ದಿವ್ಯದರ್ಶನಾ ।**
**ರಾಜಾ ಚಾಪಿ ಗೃಹಂ ಪ್ರಾಪ್ತಶ್ಚಿಂತಯಂಸ್ತಾಂ ಸ್ತ್ರಿಯಂ ಪುನಃ ॥**

ಹಾಗೆಯೇ ಆಗಲೆಂದು ಅತ್ಯಂತ ಸುಂದರಿಯಾದ ಆ ಸ್ತ್ರೀಯು ಹೇಳಿ ಹೊರಟುಹೋದಳು. ರಾಜನೂ ಕೂಡ ಆ ಸ್ತ್ರೀಯನ್ನು ಮನಸ್ಸಿನಲ್ಲಿ ಯೋಚಿಸುತ್ತಾ ಮನೆಗೆ ಬಂದನು.

**ತತಃ ಕಾಲೇನ ಕಿಯತಾ ಜಾತೇ ಪುತ್ರೇ ವಯಸ್ವಿನಿ ।**
**ವನಂ ಜಿಗಮಿಷೂ ರಾಜಾ ಪುತ್ರಂ ವೃತ್ತಾಂತಮೂಚಿವಾನ್ ॥೫೪॥**

ಅನಂತರ ಸ್ವಲ್ಪಕಾಲದಲ್ಲಿ ಆ ರಾಜನಿಗೆ ಒಬ್ಬ ಮಗನು ಹುಟ್ಟಿದನು. ಅವನು ಯುವಕನಾದ ಮೇಲೆ ರಾಜನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಕಾಡಿಗೆ ಹೋಗಲು ಇಚ್ಛೆಯುಳ್ಳವನಾಗಿ ತನ್ನ ಮಗನಿಗೆ ಈ ಹಿಂದಿನ ಸಮಾಚಾರವನ್ನು ಹೇಳಿದನು.

**ವೃತ್ತಾಂತಂ ಕಥಯಿತ್ವಾ ತು ಪುನರೂಚೇ ನಿಜಂ ಸುತಂ ।**
**ಯದಿ ಪ್ರಯಾತಿ ಸಾ ಬಾಲಾ ತ್ವಾಂ ವನೇ ಚಾರುಹಾಸಿನೀ ॥೫೫॥**

**ಕಾಮಯಾನಾ ವರಾರೋಹಾ ತಾಂ ಭಜೇಥಾ ಮನೋರಮಾಂ ।**
**ನ ಪ್ರಷ್ಟವ್ಯಾ ತ್ವಯಾ ಕಾಸಿ ಮನ್ನಿಯೋಗಾನ್ನರಾಧಿಪ ॥೫೬॥**

**ಧರ್ಮಪತ್ನೀಂ ಚ ತಾಂ ಕೃತ್ವಾ ಭವಿತಾ ತ್ವಂ ಸುಖೀ ಕಿಲ ।**

ಪ್ರತೀಪರಾಜನು ತನ್ನ ಮಗನಿಗೆ ಹಿಂದಿನ ಆ ಎಲ್ಲ ಸಮಾಚಾರವನ್ನೂ ಹೇಳಿ ಪುನಃ ಮಗನನ್ನು ಕುರಿತು ಈರೀತಿ ಹೇಳಿದನು. ನೀನು ಕಾಡಿಗೆ ಹೋದಾಗ ಕಾಡಿನಲ್ಲಿ ಒಂದುವೇಳೆ ಬಾಲಿಕೆಯಾಗಿಯೂ, ಸುಂದರವಾದ ಮಂದಹಾಸವುಳ್ಳವಳಾಗಿಯೂ, ಇಚ್ಛಾನುಸಾರವಾದ ಗಮನವುಳ್ಳವಳಾಗಿಯೂ, ವರನನ್ನು ಅಪೇಕ್ಷಿಸುವವ

ಳಾಗಿಯೂ ಇರತಕ್ಕ ಆ ಸ್ತ್ರೀಯು ತನ್ನ ಆ ಉದ್ದೇಶದಿಂದ ನಿನ್ನ ಸಮಿಪಕ್ಕೆ ಬಂದರೆ ಆ ಸುಂದರಿಯನ್ನು ನೀನು ಸ್ವೀಕರಿಸು. ಆದರೆ ಎಲೈ ರಾಜನೇ, ನೀನು ಅವಳನ್ನು ಕುರಿತು ನೀನು ಯಾರು ? ಎಂದು ಮುಂತಾಗಿ ಕೇಳಬೇಡ. ನನ್ನ ಆಜ್ಞೆಯಂತೆ ನೀನು ಅವಳನ್ನು ಧರ್ಮಪತ್ನಿಯನ್ನಾಗಿ ಮಾಡಿಕೋ. ಅದರಿಂದ ನೀನು ಸುಖಿಯಾಗಿರುವೆ.

|| ಸೂತ ಉವಾಚ ||

**ಏವಂ ಸಂದಿಶ್ಯ ತಂ ಪುತ್ರಂ ಭೂಪತಿಃ ಪ್ರೀತಿಮಾನಸಃ** ||೫೭||
**ದತ್ವಾ ರಾಜ್ಯಶ್ರಿಯಂ ಸರ್ವಾಂ ವನಂ ರಾಜಾ ವಿವೇಶ ಹ ।**

ಸೂತಮುನಿಯು ಹೇಳಿದನು—ಪ್ರತೀಪರಾಜನು ತನ್ನ ಪುತ್ರನಿಗೆ ಈರೀತಿ ತಿಳಿಸಿ, ಅತ್ಯಂತಸಂತುಷ್ಟವಾದ ಮನಸ್ಸುಳ್ಳವನಾಗಿ ಎಲ್ಲಾ ರಾಜ್ಯಸಂಪತ್ತನ್ನೂ ತನ್ನ ಮಗನಿಗೆ ಕೊಟ್ಟು ತಾನು ವನವನ್ನು ಪ್ರವೇಶಿಸಿದನು.

**ತತ್ರಾಪಿ ಚ ತಪಸ್ತಪ್ತ್ವಾ ಸಮಾರಾಧ್ಯ ಪರಾಂಬಿಕಾಂ** ||೫೮||
**ಜಗಾಮ ಸ್ವರ್ಗಂ ರಾಜಾಸೌ ದೇಹಂ ತ್ಯಕ್ತ್ವಾ ಸ್ವತೇಜಸಾ ।**

ಕಾಡಿನಲ್ಲಿಯೂ ಕೂಡ ಈ ಪ್ರತೀಪರಾಜನು ತಪಸ್ಸನ್ನು ಮಾಡಿ ಬ್ರಹ್ಮ ರೂಪಿಣಿಯಾದ, ಎಲ್ಲರಿಗೂ ಮಿಗಿಲಾದ ಜಗನ್ಮಾತೆಯಾದ ದೇವಿಯನ್ನು ಪೂಜಿಸಿ, ಶರೀರವನ್ನು ತೊರೆದು ತನ್ನ ತೇಜಸ್ಸಿನ ಬಲದಿಂದ ಸ್ವರ್ಗವನ್ನು ಹೊಂದಿದನು.

**ರಾಜ್ಯಂ ಪ್ರಾಪ ಮಹಾತೇಜಾಃ ಶಂತನುಃ ಸಾರ್ವಭೌಮಿಕಂ** ||೫೯||
**ಪ್ರಜಾಂ ವೈ ಪಾಲಯಾಮಾಸ ಧರ್ಮದಂಡೋ ಮಹೀಪತಿಃ** ||೬೦||

ಅತ್ಯಂತ ತೇಜಸ್ವಿಯಾದ ಶಂತನುಮಹಾರಾಜನು ಸಮಸ್ತಭೂಮಿಯ ರಾಜ್ಯ ವನ್ನು ಪಡೆದನು. ಎಲ್ಲಕ್ಕೂ ಚಕ್ರವರ್ತಿಯಾದನು. ಶಾಸ್ತ್ರಕ್ಕನುಸಾರವಾಗಿ ಅಪರಾಧಿ ಗಳನ್ನು ಶಿಕ್ಷಿಸತಕ್ಕ ಆ ಶಂತನುರಾಜನು ತನ್ನ ಪ್ರಜೆಗಳನ್ನು ಅತ್ಯಂತ ಪ್ರೀತಿಯಿಂದ ಪಾಲಿಸುತ್ತಿದ್ದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ**
**ತೃತೀಯೋಽಧ್ಯಾಯಃ ಸಮಾಪ್ತಃ**

ಇಲ್ಲಿಗೆ ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

|| ಚತುರ್ಥೋಽಧ್ಯಾಯಃ ||

### ನಾಲ್ಕನೆಯ ಅಧ್ಯಾಯವು

|| ಸೂತ ಉವಾಚ ||

**ಪ್ರತೀಪೇಽಥ ದಿವಂ ಯಾತೇ ಶಂತನುಃ ಸತ್ಯವಿಕ್ರಮಃ ।**
**ಬಭೂವ ಮೃಗಯಾಶೀಲೋ ನಿಘ್ನನ್ ವ್ಯಾಘ್ರಾನ್ ಮೃಗಾನ್ನೃಪಃ ॥೧॥**

**ಸ ಕದಾಚಿದ್ವನೇ ಘೋರೇ ಗಂಗಾತೀರೇ ಚರನ್ನೃಪಃ ।**
**ದದರ್ಶ ಮೃಗಶಾವಾಕ್ಷೀಂ ಸುಂದರೀಂ ಚಾರುಭೂಷಣಾಂ ॥೨॥**

ಸೂತಮಹರ್ಷಿಯು ಹೀಗೆ ಹೇಳಿದನು—ಆ ಪ್ರತೀಪಮಹಾರಾಜನು ಸ್ವರ್ಗಕ್ಕೆ ಹೋದಮೇಲೆ ಸತ್ಯವಾದ ರೀತಿಯಲ್ಲಿ ಪ್ರವರ್ತಿಸುವ ಪರಾಕ್ರಮವುಳ್ಳ ಆ ಶಂತನು ಮಹಾರಾಜನು, ಬೇಟೆಯಾಡುವುದರಲ್ಲಿ ಆಸಕ್ತವಾದ ಸ್ವಭಾವವುಳ್ಳವನಾಗಿ ಕಾಡಿನಲ್ಲಿ ಹುಲಿಗಳನ್ನೂ, ಜಿಂಕೆಗಳನ್ನೂ ಕೊಲ್ಲುತ್ತಾ ಒಂದಾನೊಂದು ಸಮಯದಲ್ಲಿ ಗಂಗಾ ನದಿಯ ದಡದಲ್ಲಿರುವ ಭಯಂಕರವಾದ ಅರಣ್ಯದಲ್ಲಿ ಸಂಚರಿಸುತ್ತಿದ್ದನು. ಆಗ ಅವನು ಜಿಂಕೆಯ ಮರಿಯ ಕಣ್ಣುಗಳಂತೆ ಸುಂದರವಾದ ಕಣ್ಣುಗಳುಳ್ಳವಳಾಗಿಯೂ, ಹೃದಯ ವನ್ನು ಮೋಹಿಸಿ ಒಲಿಸಿಕೊಳ್ಳಬಲ್ಲ ಸುಂದರಿಯಾಗಿಯೂ, ಮನೋಹರವಾದ ಅಲಂಕಾರವುಳ್ಳವಳಾಗಿಯೂ ಇರತಕ್ಕ ಒಬ್ಬಳು ಸ್ತ್ರೀಯನ್ನು ನೋಡಿದನು.

**ದೃಷ್ಟ್ವಾ ತಾಂ ನೃಪತಿರ್ಮಗ್ನಃ ಪಿತ್ರೋಕ್ತೇಯಂ ವರಾನನಾ ।**
**ರೂಪಯೌವನಸಂಪನ್ನಾ ಸಾಕ್ಷಾಲ್ಲಕ್ಷ್ಮೀರಿವಾಪರಾ ॥೩॥**

ಶಂತನುಮಹಾರಾಜನು ಅವಳನ್ನು ನೋಡಿ ತನ್ನ ಮನಸ್ಸಿನಲ್ಲಿ ಈ ರೀತಿ ಯಾಗಿ ಯೋಚಿಸಿದನು. ಸುಂದರಿಯಾಗಿಯೂ, ಯೌವನದಿಂದ ಕೂಡಿದವಳಾ

ಗಿಯೂ ಮತ್ತು ಪ್ರತ್ಯಕ್ಷಳಾದ ಮತ್ತೊಬ್ಬ ಲಕ್ಷ್ಮಿಯೋ ಎಂಬಂತೆಯೂ ಇರತಕ್ಕ ಈ ಸ್ತ್ರೀಯು ನನ್ನ ತಂದೆಯು ಹಿಂದೆ ನನಗೆ ಹೇಳಿದವಳೇ ಆಗಿರಬೇಕು.

**ಪಿಬನ್ಮುಖಾಂಬುಜಂ ತಸ್ಯಾ ನ ತೃಪ್ತಿಮುಗಮನ್ನೃಪಃ ।**
**ಹೃಷ್ಟರೋಮಾಭವತ್ತತ್ರ ವ್ಯಾಪ್ತಚಿತ್ತ ಇವಾನಘಃ ॥೪॥**

ರಾಜನಿಗೆ ಅವಳ ಕಮಲದಂತಿರುವ ಮುಖವನ್ನು ನೋಡಿದಷ್ಟೂ ಅದು ಸಾಕೆನ್ನಿಸಲಿಲ್ಲ. ಪಾಪರಹಿತನಾದ ಆ ಶಂತನುವು ರೋಮಾಂಚಿತನಾಗಿ ಅವಳಲ್ಲೇ ನಟ್ಟಮನಸ್ಸುಳ್ಳವನಾದನು.

**ಮಹಾಭಿಷಂ ಸಾಪಿ ಮತ್ವಾ ಪ್ರೇಮಯುಕ್ತಾ ಬಭೂವ ಹ ।**
**ಕಿಂಚಿನ್ಮಂದಸ್ಮಿತಂ ಕೃತ್ವಾ ತಸ್ಥಾವಗ್ರೇ ನೃಪಸ್ಯ ಚ ॥೫॥**

ಆ ಮನುಷ್ಯಸ್ತ್ರೀರೂಪದಲ್ಲಿ ಬಂದ ಗಂಗೆಯೂ ಕೂಡ ಶಂತನುರಾಜನನ್ನು ಬ್ರಹ್ಮಸಭೆಯಲ್ಲಿ ನೋಡಿದ ಮಹಾಭಿಷನೆಂದು ತಿಳಿದು, ಪ್ರೇಮದಿಂದ ಕೂಡಿದವಳಾದಳು. ಮತ್ತು ಅವಳು ಸ್ವಲ್ಪ ಮಂದಹಾಸವನ್ನು ಪ್ರಕಟಿಸಿ ಆ ಶಂತನು ರಾಜನ ಮುಂದುಗಡೆಯಲ್ಲಿ ಬಂದು ನಿಂತಳು.

**ವೀಕ್ಷ್ಯ ತಾಮಸಿತಾಪಾಂಗೀಂ ರಾಜಾ ಪ್ರೀತಮನಾ ಭೃಶಂ ।**
**ಉವಾಚ ಮಧುರಂ ವಾಕ್ಯಂ ಸಾಂತ್ವಯನ್ ಶ್ಲಕ್ಷ್ಣಯಾ ಗಿರಾ ॥೬॥**

ಶಂತನುರಾಜನು, ಕಪ್ಪಾದ ಕಡೆಗಣ್ಣಿನ ನೋಟವುಳ್ಳ ಅವಳನ್ನು ನೋಡಿ, ಅತ್ಯಂತಸಂತುಷ್ಟವಾದ ಮನಸ್ಸುಳ್ಳವನಾಗಿ, ಮೃದುವಾದ ಮಾತುಗಳಿಂದ ಅವಳನ್ನು ಸಮಾಧಾನಪಡಿಸುತ್ತಾ ಈ ಮನೋಹರವಾದ ಮಾತನ್ನು ಹೇಳಿದನು.

**ದೇವೀ ವಾ ತ್ವಂ ಚ ವಾಮೋರು ಮಾನುಷೀ ವಾ ವರಾನನೇ ।**
**ಗಂಧರ್ವೀ ವಾಥ ಯಕ್ಷೀ ವಾ ನಾಗಕನ್ಯಾಪ್ಸರಾಪಿ ವಾ ॥೭॥**

ಸುಂದರವಾದ ತೊಡೆಗಳುಳ್ಳವಳಾಗಿಯೂ ಮತ್ತು ಉತ್ತಮವಾದ ಮುಖವುಳ್ಳವಳಾಗಿಯೂ ಇರುವ ಎಲೆ ಸ್ತ್ರೀಯೇ, ನೀನು ದೇವತಾಸ್ತ್ರೀಯಾಗಿರುವೆಯೋ, ಅಥವಾ ಮನುಷ್ಯಸ್ತ್ರೀಯಾಗಿರುವೆಯೋ, ಅಥವಾ ಗಂಧರ್ವಸ್ತ್ರೀಯಾಗಿರುವೆಯೋ, ಅಥವಾ ಯಕ್ಷಸ್ತ್ರೀಯೋ, ನಾಗಕನ್ನಿಕೆಯೋ ಅಥವಾ ಅಪ್ಸರಸ್ತ್ರೀಯಾಗಿರುವೆಯೋ ?

**ಯಾಸಿ ಕಾಸಿ ವರಾರೋಹೇ ಭಾರ್ಯಾ ಮೇ ಭವ ಸುಂದರಿ ।**
**ಪ್ರೇಮಯುಕ್ತಸ್ಮಿತೈವ ತ್ವಂ ಧರ್ಮಪತ್ನೀ ಭವಾದ್ಯ ಮೇ ॥೮॥**

ಎಲೆ ಸುಂದರಸ್ತ್ರೀಯೇ, ನೀನು ಯಾರಾದರೂ ಆಗಿರು. ನೀನು ನನ್ನ ಪತ್ನಿಯಾಗು. ಪ್ರೇಮದಿಂದ ಕೂಡಿದ, ಮಂದಹಾಸವುಳ್ಳವಳಾದ ನೀನು ಈಗ ನನ್ನ ಸಾಮಾನ್ಯಪತ್ನಿಯಲ್ಲದೆ ನನ್ನ ಧರ್ಮಪತ್ನಿಯಾಗಿರು.

॥ ಸೂತ ಉವಾಚ ॥

**ರಾಜಾ ತಾಂ ನಾಭಿಜಾನಾತಿ ಗಂಗೇಯಮಿತಿ ನಿಶ್ಚಿತಂ ।**
**ಮಹಾಭಿಷಂ ಸಮುತ್ಪನ್ನಂ ನೃಪಂ ಜಾನಾತಿ ಜಾಹ್ನವೀ ॥೯॥**

ಸೂತಮಹರ್ಷಿಯು ಹೀಗೆ ಹೇಳಿದನು—ಶಂತನುರಾಜನಿಗೆ ಈ ಸ್ತ್ರೀಯು ಗಂಗಾದೇವಿಯು ಎಂಬ ವಿಷಯವು ತಿಳಿಯದು. ಆದರೆ ಜಹ್ನುಮಹರ್ಷಿಯ ಕಿವಿಯಿಂದ ಹುಟ್ಟಿದವಳಾದ ಗಂಗೆಯು ಮಾತ್ರ ತನ್ನ ದಿವ್ಯಜ್ಞಾನದಿಂದ ಮಹಾಭಿಷರಾಜನೇ ಶಂತನುರಾಜನಾಗಿ ಜನಿಸಿರುವನು ಎಂಬ ವಿಷಯವನ್ನು ತಿಳಿದಿರುತ್ತಾಳೆ.

**ಪೂರ್ವಪ್ರೇಮಸಮಾಯೋಗಾಚ್ಛ್ರುತ್ವಾ ವಾಚಂ ನೃಪಸ್ಯ ತಾಂ ।**
**ಉವಾಚ ನಾರೀ ರಾಜಾನಂ ಸ್ಮಿತಪೂರ್ವಮಿದಂ ವಚಃ ॥೧೦॥**

ರಾಜನ ಆ ಮಾತನ್ನು ಕೇಳಿ, ಪೂರ್ವದಲ್ಲಿ ಬ್ರಹ್ಮನ ಸಭೆಯಲ್ಲಿ ಪರಸ್ಪರವಾಗಿ ಉಂಟಾದ ಪ್ರೀತಿಯ ಸಂಬಂಧದಿಂದ ಆ ಸ್ತ್ರೀರೂಪದಲ್ಲಿದ್ದ ಗಂಗಾದೇವಿಯು ಮಂದಹಾಸದಿಂದ ಕೂಡಿದವಳಾಗಿ ಶಂತನು ರಾಜನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು.

॥ ಸ್ತ್ರ್ಯುವಾಚ ॥

**ಜಾನಾಮಿ ತ್ವಾಂ ನೃಪಶ್ರೇಷ್ಠ ಪ್ರತೀಪತನಯಂ ಶುಭಂ ।**
**ಕಾ ನ ವಾಂಛತಿ ಚಾರ್ವಂಗೀ ಭಾವಿತ್ವಾತ್ಸದೃಶಂ ಪತಿಂ ॥೧೧॥**

ಆ ಸ್ತ್ರೀಯು ಹೀಗೆ ಹೇಳಿದಳು—ಎಲೈ ರಾಜಶ್ರೇಷ್ಠನೇ, ನಾನು ನಿನ್ನನ್ನು ಭಾಗ್ಯಶಾಲಿಯಾದ ಪ್ರತೀಪರಾಜನ ಮಗನೆಂದು ತಿಳಿದಿರುತ್ತೇನೆ. ಸ್ತ್ರೀಜಾತಿಯು ಅವಶ್ಯವಾಗಿ ಯಾವನಾದರೊಬ್ಬ ಗಂಡನನ್ನು ಹೊಂದಬೇಕಾದುದೇ ಆಗಿದೆ. ಒಂದು

ವೇಳೆ ತನಗೆ ಯೋಗ್ಯನಾದ ಗಂಡನು ಸಿಕ್ಕಿದರೆ ಯಾವ ಸುಂದರ ಸ್ತ್ರೀಯು ತಾನೇ ಅವನನ್ನು ಇಚ್ಛಿಸುವುದಿಲ್ಲ ?

**ವಾಗ್ಬಂಧೇನ ನೃಪಶ್ರೇಷ್ಠ ಚರಿಷ್ಯಾಮಿ ಪತಿಂ ಕಿಲ ।**
**ಶೃಣು ಮೇ ಸಮಯಂ ರಾಜನ್ ವೃಣೋಮಿ ತ್ವಾಂ ನೃಪೋತ್ತಮ ॥**

ಎಲೈ ರಾಜಶ್ರೇಷ್ಠನೇ, ನೀನು ನನ್ನ ಈ ಮಾತಿನ ಕಟ್ಟುಪಾಡಿಗೆ ಒಳಪಟ್ಟಿರುವೆಯಾದರೆ ನಾನು ನಿನ್ನನ್ನು ಪಡೆಯುವೆನು. ಎಲೈ ರಾಜಶ್ರೇಷ್ಠನೇ, ನನ್ನ ಈ ನಿಯಮವನ್ನು ಕೇಳು. ನಾನು ನಿನ್ನನ್ನು ವರಿಸುವೆನು.

**ಯಚ್ಚ ಕುರ್ಯಾಮಹಂ ಕಾರ್ಯಂ ಶುಭಂ ವಾ ಯದಿ ವಾಽಶುಭಂ ।**
**ನ ನಿಷೇಧ್ಯಾ ತ್ವಯಾ ರಾಜನ್ನ ವಕ್ತವ್ಯಂ ತಥಾಽಪ್ರಿಯಂ ॥೧೩॥**

ಆದರೆ ನಾನು ಒಳ್ಳೆಯದೇ ಆಗಲಿ, ಕೆಟ್ಟದೇ ಆಗಲಿ, ಯಾವ ಕೆಲಸವನ್ನು ಮಾಡಿದರೂ ಕೂಡ, ಎಲೈ ರಾಜನೇ, ನೀನು ನನ್ನನ್ನು ತಡೆಯಬಾರದು. ಮತ್ತು ನನಗೆ ಇಷ್ಟವಲ್ಲದ ಮಾತನ್ನು ಸಹ ಹೇಳಕೂಡದು.

**ಯದಾ ಚ ತ್ವಂ ನೃಪಶ್ರೇಷ್ಠ ನ ಕರಿಷ್ಯಸಿ ಮೇ ವಚಃ ।**
**ತದಾ ಮುಕ್ತ್ವಾ ಗಮಿಷ್ಯಾಮಿ ಯಥೇಷ್ಟಂ ದೇಶ ಮಾರಿಷ ॥೧೪॥**

ಎಲೈ ಪೂಜ್ಯನಾದ ರಾಜಶ್ರೇಷ್ಠನೇ, ಯಾವಾಗ ನೀನು ನನ್ನ ಮಾತನ್ನು ನಡೆಯಿಸುವುದಿಲ್ಲವೋ ಅಥವಾ ಅತಿಕ್ರಮಿಸುವೆಯೋ ಆಗ ನಾನು ನಿನ್ನನ್ನು ಬಿಟ್ಟು ನನಗೆ ಇಚ್ಛೆ ಬಂದ ಕಡೆಗೆ ಹೊರಟುಹೋಗುವೆನು.

**ಸ್ಮೃತ್ವಾ ಜನ್ಮ ವಸೂನಾಂ ಸಾ ಪ್ರಾರ್ಥನಾಪೂರ್ವಕಂ ಹೃದಿ ।**
**ಮಹಾಭಿಷಸ್ಯ ಪ್ರೇಮಾಥ ವಿಚಿಂತ್ಯೈವ ಚ ಜಾಹ್ನವೀ ॥೧೫॥**

ಜಹ್ನುಮಹರ್ಷಿಯಿಂದ ಹುಟ್ಟಿದ ಆ ಗಂಗಾದೇವಿಯು, ವಸುಗಳು ತನ್ನಲ್ಲಿ ಪ್ರಾರ್ಥಿಸಿದ್ದಂತೆ ಅವರು ತನ್ನಲ್ಲಿ ಜನ್ಮವನ್ನು ಪಡೆಯಬೇಕಾಗಿರುವುದನ್ನೂ ಮತ್ತು ಈ ಮಹಾಭಿಷರಾಜನ ಪ್ರೇಮವನ್ನೂ ಯೋಚಿಸಿ ಈ ನಿಯಮಕ್ಕೆ ಒಳಪಟ್ಟು ಆ ಶಂತನುರಾಜನ ಹೆಂಡತಿಯಾಗಿರಲು ಸಮ್ಮತಿಸುವೆನೆಂದಳು.

**ತಥೇತ್ಯುಕ್ತ್ವಾಽಥ ಸಾ ದೇವೀ ಚಕಾರ ನೃಪತಿಂ ಪತಿಂ ।**
**ಏವಂ ವೃತಾ ನೃಪೇಣಾಥ ಗಂಗಾ ಮಾನುಷರೂಪಿಣೀ   ॥೧೬॥**

ಹಾಗೆಯೇ ಆಗಲೆಂದು ದೊರೆಯೂ ಒಪ್ಪಿಕೊಂಡನು. ಗಂಗಾದೇವಿಯೂ ಶಂತನುರಾಜನನ್ನು ವರಿಸಿದಳು. ಈ ರೀತಿಯಾಗಿ ಶಂತನುರಾಜನು ಮನುಷ್ಯ ಸ್ತ್ರೀ ರೂಪವನ್ನು ಧರಿಸಿರತಕ್ಕ ಆ ಗಂಗೆಯನ್ನು ಹೆಂಡತಿಯನ್ನಾಗಿ ಪಡೆದನು.

**ನೃಪಸ್ಯ ಮಂದಿರಂ ಪ್ರಾಪ್ತಾ ಸುಭಗಾ ವರವರ್ಣಿನೀ ।**
**ನೃಪತಿಸ್ತಾಂ ಸಮಾಸಾದ್ಯ ಚಿಕ್ರೀಡೋಪವನೇ ಶುಭೇ   ॥೧೭॥**

ಅತ್ಯಂತ ಸುಂದರವಾದ ಮೈಬಣ್ಣವುಳ್ಳ ಆ ಸ್ತ್ರೀಯು ಶಂತನುರಾಜನ ಅರಮನೆಗೆ ಬಂದಳು. ರಾಜನು ಅವಳನ್ನು ಪಡೆದು ಮನೋಹರವಾದ ಉದ್ಯಾನದಲ್ಲಿ ಅವಳೊಡನೆ ವಿಹರಿಸುತ್ತಿದ್ದನು.

**ಸಾಪಿ ತಂ ರಮಯಾಮಾಸ ಭಾವಜ್ಞಾ ವೈ ವರಾಂಗನಾ ।**
**ನ ಬುಬೋಧ ನೃಪಃ ಕ್ರೀಡನ್ ಗತಾನ್ ವರ್ಷಗಣಾನಥ   ॥೧೮॥**

ಶೃಂಗಾರಭಾವಗಳನ್ನೂ ಗಂಡನ ಮನೋವೃತ್ತಿಗಳನ್ನೂ ತಿಳಿದುಕೊಳ್ಳುವ ಆ ಸುಂದರಿಯಾದ ಮತ್ತು ಉತ್ತಮಳಾದ ಸ್ತ್ರೀಯೂ ಕೂಡ ಆ ಶಂತನುರಾಜನನ್ನು ಸಂತೋಷಪಡಿಸಿದಳು. ಈ ರೀತಿಯಲ್ಲಿ ಆ ಶಂತನುರಾಜನು ಅವಳೊಡನೆ ಕ್ರೀಡಿಸುತ್ತಾ ಇದ್ದುದರಿಂದ ಅನೇಕ ವರ್ಷಗಳು ಕಳೆದುಹೋದುದನ್ನು ತಿಳಿಯಲಿಲ್ಲವು.

**ಸ ತಯಾ ಮೃಗಶಾವಾಕ್ಷ್ಯಾ ಶಚ್ಯಾ ಶತಕ್ರತುರ್ಯಥಾ ।**
**ಸಾ ಸರ್ವಗುಣಸಂಪನ್ನಾ ಸೋಽಪಿ ಕಾಮವಿಚಕ್ಷಣಃ   ॥೧೯॥**
**ರೇಮಾತೇ ಮಂದಿರೇ ದಿವ್ಯೇ ರಮಾನಾರಾಯಣಾವಿವ ।**

ಆ ಶಂತನುರಾಜನು ಜಿಂಕೆಮರಿಯ ಕಣ್ಣುಗಳಂತೆ ಚಟುವಟಿಕೆಯಿಂದ ಕೂಡಿರತಕ್ಕ ಕಣ್ಣುಗಳುಳ್ಳ ಆ ಸ್ತ್ರೀಯೊಡನೆ, ಇಂದ್ರನು ಶಚಿಯೊಡನೆ ಹೇಗೋ ಹಾಗೆ ಕ್ರೀಡಿಸುತ್ತಿದ್ದನು. ಸಮಸ್ತಗುಣಗಳಿಂದಲೂ ಕೂಡಿದವಳಾದ ಆ ಸ್ತ್ರೀಯೂ, ಕಾಮಶಾಸ್ತ್ರವಿಚಾರವನ್ನು ಚೆನ್ನಾಗಿ ತಿಳಿದಿರತಕ್ಕ ಆ ಶಂತನುರಾಜನೂ, ಅತ್ಯಂತ ಸುಂದರವಾದ ಅರಮನೆಯಲ್ಲಿ ಲಕ್ಷ್ಮೀದೇವಿಯೂ, ವಿಷ್ಣುವೂ ಹೇಗೋ ಹಾಗೆ ವಿಹರಿಸುತ್ತಿದ್ದರು.

ಏವಂ ಗಚ್ಛತಿ ಕಾಲೇ ಸಾ ದಧಾರ ನೃಪತೇಸ್ತದಾ ॥೨೦॥

ಗರ್ಭಂ ಗಂಗಾ ವಸುಂ ಪುತ್ರಂ ಸುಷುವೇ ಚಾರುಲೋಚನಾ ।
ಜಾತಮಾತ್ರಂ ಸುತಂ ವಾರಿ ಚಿಕ್ಷೇಪೈವಂ ದ್ವಿತೀಯಕೇ ॥೨೧॥

ಈರೀತಿಯಾಗಿ ಕೆಲವು ಕಾಲವು ಕಳೆದಮೇಲೆ ಆ ಸ್ತ್ರೀಯು ಶಂತನುರಾಜನ ದೆಶೆಯಿಂದ ಗರ್ಭಧಾರಣೆಯನ್ನು ಮಾಡಿದಳು. ಸುಂದರವಾದ ಕಣ್ಣುಗಳುಳ್ಳ ಗಂಗೆಯು ವಸುಗಳಲ್ಲಿ ಒಬ್ಬನನ್ನು ತನ್ನ ಮಗನನ್ನಾಗಿ ಪ್ರಸವಿಸಿದಳು. ಹುಟ್ಟಿದ ಕೂಡಲೇ ಆ ಮಗುವನ್ನು ನೀರಿನಲ್ಲಿ ಎಸೆದುಬಿಟ್ಟಳು. ಇದೇರೀತಿಯಲ್ಲಿ ಎರಡನೆಯ ಪುತ್ರನನ್ನೂ ನೀರಿನಲ್ಲಿ ಬಿಟ್ಟಳು.

ತೃತೀಯೇಽಥ ಚತುರ್ಥೇಽಥ ಪಂಚಮೇ ಷಷ್ಠ ಏವ ಚ ।
ಸಪ್ತಮೇ ವಾ ಹತೇ ಪುತ್ರೇ ರಾಜಾ ಚಿಂತಾಪರೋಽಭವತ್ ॥೨೨॥

ಇದೇ ರೀತಿಯಾಗಿ ಮೂರನೆಯ ಪುತ್ರನೂ, ನಾಲ್ಕನೆಯವನೂ, ಐದನೆಯವನೂ, ಆರನೆಯವನೂ, ಏಳನೆಯವನೂ ಆದ ಮಕ್ಕಳನ್ನು ಅವಳು ಸಾಯಿಸುತ್ತಿರಲು ಶಂತನುರಾಜನು ಅತ್ಯಂತ ವ್ಯಸನದಿಂದ ಕೂಡಿದವನಾದನು.

ಕಿಂ ಕರೋಮ್ಯದ್ಯ ವಂಶೋ ಮೇ ಕಥಂ ಸ್ಯಾತ್ಸುಸ್ಥಿರೋ ಭುವಿ ।
ಸಪ್ತ ಪುತ್ರಾ ಹತಾ ನೂನಮನಯಾ ಪಾಪರೂಪಯಾ ॥೨೩॥

ಈಗ ನಾನು ಏನನ್ನು ಮಾಡಲಿ? ನನ್ನ ಎಲ್ಲಾ ಮಕ್ಕಳೂ ಹೀಗೆ ಸಾಯುತ್ತಿದ್ದರೆ ನನ್ನ ವಂಶವು ಲೋಕದಲ್ಲಿ ಹೇಗೆ ಸ್ಥಿರವಾಗಿ ಉಳಿದೀತು? ನಿಜವಾಗಿಯೂ ಪಾಪಿಷ್ಠೆಯಾದ ಇವಳು ನನ್ನ ಏಳು ಪುತ್ರರನ್ನೂ ಕೊಂದಳು.

ನಿವಾರಯಾಮಿ ಯದಿ ಮಾಂ ತ್ಯಕ್ತ್ವಾ ಯಾಸ್ಯತಿ ಸರ್ವಥಾ ।
ಅಷ್ಟಮೋಽಯಂ ಸುಸಂಪ್ರಾಪ್ತೋ ಗರ್ಭೋ ಮೇ ಮನಸೀಪ್ಸಿತಃ ॥

ಒಂದುವೇಳೆ ನಾನು ಇವಳನ್ನು ತಡೆದರೆ ನಿಶ್ಚಯವಾಗಿಯೂ ಇವಳು ನನ್ನನ್ನು ಬಿಟ್ಟು ಹೋಗುವಳು. ಆದರೆ ನನ್ನ ಮನಸ್ಸಿಗೆ ಇಷ್ಟವಾದ ಈ ಎಂಟನೇ ಗರ್ಭವು ಈಗ ಪ್ರಾಪ್ತವಾಗಿದೆ.

**ನ ವಾರಯಾಮಿ ಚೇದದ್ಯ ಸರ್ವಥೇಯಂ ಜಲೇ ಕ್ಷಿಪೇತ್ ।**
**ಭವಿತಾ ವಾ ನ ವಾ ಚಾಗ್ರೇ ಸಂಶಯೋಽಯಂ ಮಮಾದ್ಭುತಃ ॥೨೫॥**

ಒಂದುವೇಳೆ ನಾನು ಈಗಲೂ ಇವಳನ್ನು ತಡೆಯದಿದ್ದರೆ ಈ ಎಂಟನೆಯ ಮಗನನ್ನೂ ಇವಳು ನಿಶ್ಚಯವಾಗಿಯೂ ನೀರಿನಲ್ಲಿ ಬಿಸಾಡುತ್ತಾಳೆ. ಇನ್ನುಮುಂದೆ ಪುತ್ರನು ಜನಿಸುವನೋ ಅಥವಾ ಇಲ್ಲವೋ ಎಂಬ ವಿಷಯದಲ್ಲಿ ನನಗೆ ಬಹಳ ಸಂದೇಹವು ಆಶ್ಚರ್ಯಕರವಾಗಿ ಉಂಟಾಗಿದೆ.

**ಸಂಭವೇಽಪಿ ಚ ದುಷ್ಟೇಯಂ ರಕ್ಷಯೇದ್ವಾ ನ ರಕ್ಷಯೇತ್ ।**
**ಏವಂ ಸಂಶಯಿತೇ ಕಾರ್ಯೇ ಕಿಂ ಕರ್ತವ್ಯಂ ಮಯಾಧುನಾ ॥೨೬॥**

ಒಂದುಪಕ್ಷ ಪುತ್ರನು ಹುಟ್ಟುವುದಾದರೂ ಈ ಕೆಟ್ಟಹೆಂಗಸು ಆ ಮಗುವನ್ನು ಉಳಿಸುವಳೋ ಇಲ್ಲವೋ ? ಈ ರೀತಿಯಾಗಿ ನಾನು ಮಾಡಬೇಕಾದ ಕೆಲಸವು ಬಹಳ ಸಂದೇಹದಿಂದ ಕೂಡಿರುವುದರಿಂದ ಈಗ ನಾನು ಏನನ್ನು ಮಾಡಬೇಕು ?

**ವಂಶಸ್ಯ ರಕ್ಷಣಾರ್ಥಂ ಹಿ ಯತ್ನಃ ಕಾರ್ಯಃ ಪರೋ ಮಯಾ ।**
**ತತಃ ಕಾಲೇ ಯದಾ ಜಾತಃ ಪುತ್ರೋಽಯಮಷ್ಟಮೋ ವಸುಃ ॥೨೭॥**

**ಮುನೇರ್ಯೇನ ಹೃತಾ ಧೇನುರ್ನಂದಿನೀ ಸ್ತ್ರೀಜಿತೇನ ಹಿ ।**
**ತಂ ದೃಷ್ಟ್ವಾ ನೃಪತಿಃ ಪುತ್ರಂ ತಾಮುವಾಚ ಪತನ್ ಪದೇ ॥೨೮॥**

ಹೇಗಾದರೂ ನನ್ನ ವಂಶವು ನಾಶವಾಗದಂತೆ ಕಾಪಾಡುವುದಕ್ಕೋಸ್ಕರ ನಾನು ಮೇಲಾದ ಪ್ರಯತ್ನವನ್ನು ಮಾಡಲೇಬೇಕು, ಎಂದು ಈ ರೀತಿಯಲ್ಲಿ ಯೋಚಿಸಿದ ಮೇಲೆ ಕಾಲಕ್ರಮದಲ್ಲಿ ಆ ಸ್ತ್ರೀಯಲ್ಲಿ ಎಂಟನೆಯ ಪುತ್ರನು ಹುಟ್ಟಿದನು. ಆ ಮಗನು ಹಿಂದೆ ತನ್ನ ಹೆಂಡತಿಯ ಮಾತಿಗೆ ಅಧೀನನಾಗಿ ವಸಿಷ್ಠಮಹರ್ಷಿಯ ನಂದಿನೀಗೋವನ್ನು ಅಪಹರಿಸಿ ಶಾಪವನ್ನು ಪಡೆದ ದ್ಯೌ ಎಂಬ ಎಂಟನೇ ವಸುವಾಗಿದ್ದನು. ಆ ಮಗನನ್ನು ನೋಡಿ ಶಂತನುರಾಜನು ಅವಳ ಕಾಲಿಗೆ ಬಿದ್ದು ನಮಸ್ಕರಿಸಿ ಅವಳನ್ನು ಕುರಿತು ಹೀಗೆ ಹೇಳಿದನು.

**ದಾಸೋಽಸ್ಮಿ ತವ ತನ್ವಂಗಿ ಪ್ರಾರ್ಥಯಾಮಿ ಶುಚಿಸ್ಮಿತೇ ।**
**ಪುತ್ರಮೇಕಂ ಪುಷಾಮ್ಯದ್ಯ ದೇಹಿ ಜೀವಂತಮದ್ಯ ಮೇ ॥೨೯॥**

ಎಲೆ ಕೃಶವಾದ ಅಂಗವುಳ್ಳವಳಾಗಿಯೂ, ಮಂದಹಾಸವುಳ್ಳವಳಾಗಿಯೂ ಇರುವ ಸ್ತ್ರೀಯೇ, ನಾನು ನಿನ್ನ ಸೇವಕನಾಗಿದ್ದೇನೆ. ನಾನು ಈ ಒಬ್ಬ ಮಗನನ್ನಾದರೂ ಪೋಷಿಸಿ ಕಾಪಾಡಬೇಕೆಂಬ ಉದ್ದೇಶವುಳ್ಳವನಾಗಿದ್ದೇನೆ. ಆದುದರಿಂದ ಈಗ ಈ ಪುತ್ರನನ್ನು ಬದುಕಿರುವ ಹಾಗೆಯೇ ನನಗೆ ಕೊಡು ಎಂದು ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ.

**ಹಿಂಸಿತಾಃ ಸಪ್ತ ಪುತ್ರಾ ಮೇ ಕರಭೋರು ತ್ವಯಾ ಶುಭಾಃ ।**
**ಅಷ್ಟಮಂ ರಕ್ಷ ಸುಶ್ರೋಣಿ ಪತಾಮಿ ತವ ಪಾದಯೋಃ ॥೩೦॥**

ಎಲೆ ಮಣಿಕಟ್ಟಿನಂತೆ ಸುಂದರವಾದ ತೊಡೆಯುಳ್ಳ ಸ್ತ್ರೀಯೇ, ಲಕ್ಷಣವಂತರಾದ ನನ್ನ ಏಳು ಜನ ಮಕ್ಕಳನ್ನೂ ನೀನು ಕೊಂದಿರುವೆ. ಆದುದರಿಂದ ಈಗ ಈ ಎಂಟನೆಯ ಪುತ್ರನನ್ನಾದರೂ ರಕ್ಷಿಸು. ನಾನು ನಿನ್ನ ಕಾಲುಗಳಿಗೆ ನಮಸ್ಕರಿಸುತ್ತೇನೆ.

**ಅನ್ಯದ್ವೈ ಪ್ರಾರ್ಥಿತಂ ತೇಽದ್ಯ ದದಾಮ್ಯಥ ಚ ದುರ್ಲಭಂ ।**
**ವಂಶೋ ಮೇ ರಕ್ಷಣೀಯೋಽದ್ಯ ತ್ವಯಾ ಪರಮಶೋಭನೇ ॥೩೧॥**

ನೀನು ಬೇರೆ ಯಾವುದನ್ನು ಕೇಳಿದರೂ, ಅದನ್ನು ಪಡೆಯಲು ತುಂಬ ದುಃಖಸಾಧ್ಯವಾದಾಗ್ಯೂ ನಾನು ಅದನ್ನು ಕೊಡುತ್ತೇನೆ. ಎಲೆ ಅತ್ಯಂತ ಮಂಗಳಕರಳೇ, ನೀನು ಈಗ ನನ್ನ ವಂಶವನ್ನು ಉಳಿಸಬೇಕು.

**ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೇ ವೇದವಿದೋ ವಿದುಃ ।**
**ತಸ್ಮಾದದ್ಯ ವರಾರೋಹೇ ಪ್ರಾರ್ಥಯಾಮ್ಯಷ್ಟಮಂ ಸುತಂ ॥೩೨॥**

ಪುತ್ರರಿಲ್ಲದವನಿಗೆ ಸ್ವರ್ಗದಲ್ಲಿ ಸ್ಥಾನವಿಲ್ಲವೆಂದು ವೇದಾರ್ಥವನ್ನು ತಿಳಿದಿರತಕ್ಕ ಜ್ಞಾನಿಗಳು ಹೇಳುತ್ತಾರೆ. ಆದುದರಿಂದ ಎಲೆ ಸುಂದರ ಸ್ತ್ರೀಯೇ, ಎಂಟನೆಯ ಈ ಪುತ್ರನನ್ನು ಉಳಿಸಿಕೊಡು ಎಂದು ನಾನು ನಿನ್ನಲ್ಲಿ ಬೇಡಿಕೊಳ್ಳುತ್ತೇನೆ.

**ಇತ್ಯುಕ್ತಾಪಿ ಗೃಹೀತ್ವಾ ತಂ ಯದಾ ಗಂತುಂ ಸಮುತ್ಸುಕಾ ।**
**ತದಾಽತಿಕುಪಿತೋ ರಾಜಾ ತಾಮುವಾಚಾತಿದುಃಖಿತಃ ॥೩೩॥**

ಈ ರೀತಿ ಹೇಳಿದಾಗ್ಯೂ ಕೂಡ ಆ ಸ್ತ್ರೀಯು ಯಾವಾಗ ಆ ಮಗನನ್ನು ತೆಗೆದುಕೊಂಡು ಹೋಗುವ ಇಚ್ಛೆಯುಳ್ಳವಳಾದಳೋ, ಆಗ ಆ ರಾಜನು ಕೋಪದಿಂದಲೂ ದುಃಖದಿಂದಲೂ ಕೂಡಿದವನಾಗಿ ಅವಳನ್ನು ಕುರಿತು ಹೀಗೆ ಹೇಳಿದನು.

**ಪಾಪಿಷ್ಠೇ ಕಿಂ ಕರೋಮ್ಯದ್ಯ ನಿರಯಾನ್ನ ಬಿಭೇಷಿ ಕಿಂ ।**
**ಕಾಽಸಿ ಪಾಪಕರಾಣಾಂ ತ್ವಂ ಪುತ್ರೀ ಪಾಪರತಾ ಸದಾ ॥೩೪॥**

ಎಲೆ ಪಾಪಚಾರಿಣಿಯೇ, ಈಗ ನಾನು ಏನನ್ನು ಮಾಡಲಿ ? ನೀನು ಈ ಕೆಟ್ಟ ಕೆಲಸದಿಂದ ಉಂಟಾಗುವ ನರಕಕ್ಕೂ ಅಂಜುವುದಿಲ್ಲವೇ ? ಯಾವಾಗಲೂ ಪಾಪವನ್ನಾಚರಿಸುತ್ತಿರುವ ನೀನು ಎಂತಹ ಪಾಪಿಷ್ಠರಾದ ತಾಯಿತಂದೆಯರ ಮಗಳಾಗಿರುವೆ ?

**ಯಥೇಚ್ಛಂ ಗಚ್ಛ ವಾ ತಿಷ್ಠ ಪುತ್ರೋ ಮೇ ಸ್ಥೀಯತಾಮಿಹ ।**
**ಕಿಂ ಕರೋಮಿ ತ್ವಯಾ ಪಾಪೇ ವಂಶಾಂತಕರಯಾಽನಯಾ ॥೩೫॥**

ನೀನು ನಿನಗೆ ಇಷ್ಟಬಂದೆಡೆಗೆ ಹೋಗು ಅಥವಾ ಇಲ್ಲಿಯೇ ಬೇಕಾದರೂ ಇರು. ಆದರೆ ನನ್ನ ಪುತ್ರನು ಮಾತ್ರ ಇಲ್ಲಿಯೇ ಇರಲಿ. ಎಲೆ ಪಾಪಿಷ್ಠಳೇ, ನನ್ನ ವಂಶದ ನಾಶವನ್ನು ಮಾಡುತ್ತಿರುವ ಈ ನಿನ್ನಿಂದ ನಾನು ಏನು ಪ್ರಯೋಜನವನ್ನು ತಾನೇ ಪಡೆದೇನು ?

**ಏವಂ ವದತಿ ಭೂಪಾಲೇ ಸಾ ಗೃಹೀತ್ವಾ ಸುತಂ ಶಿಶುಂ ।**
**ಗಚ್ಛಂತೀ ವಚನಂ ಕೋಪಸಂಯುತಾ ಸಮುವಾಚ ಹ ॥೩೬॥**

ರಾಜನು ಈ ರೀತಿಯಲ್ಲಿ ಹೇಳಲು, ಆ ಸ್ತ್ರೀಯು ಶಿಶುವಾದ ತನ್ನ ಮಗನನ್ನು ತೆಗೆದುಕೊಂಡು ಹೋಗುತ್ತಾ ಸಿಟ್ಟಿನಿಂದ ಕೂಡಿದವಳಾಗಿ ಆ ಶಂತನುರಾಜನನ್ನು ಕುರಿತು ಈ ಮಾತನ್ನು ಹೇಳಿದಳು.

**ಪುತ್ರಕಾಮಾ ಸುತಂ ತ್ವೇನಂ ಪಾಲಯಾಮಿ ವನೇ ಗತಃ ।**
**ಸಮಯೋ ಮೇ ಗಮಿಷ್ಯಾಮಿ ವಚನಂ ಹ್ಯನ್ಯಥಾಕೃತಂ ॥೩೭॥**

ಓ ಶಂತನುರಾಜನೇ, ಮಗನನ್ನು ಇಚ್ಛಿಸುತ್ತಿರುವ ನಾನು ಈ ಪುತ್ರನನ್ನು ತೆಗೆದುಕೊಂಡು ಹೋಗಿ ಕಾಡಿನಲ್ಲಿ ಸಾಕುತ್ತೇನೆ. ಇಲ್ಲೇ ಏಕೆ ಸಾಕುವುದಿಲ್ಲವೆಂದರೆ, ನೀನು ಕೊಟ್ಟ ಮಾತನ್ನು ಮೀರಿರುವಿ. ಆದುದರಿಂದ ನನ್ನ ಕಟ್ಟು ಒಡೆದು ಹೋಗಿದೆ. ನಾನು ಇನ್ನು ಮುಂದೆ ಇಲ್ಲಿರಲು ಆಗುವುದಿಲ್ಲ. ಆದಕಾರಣದಿಂದ ನಾನು ಹೇಳಿದ್ದಂತೆ ಈಗ ನಿನ್ನನ್ನು ನಾನು ಬಿಟ್ಟುಹೋಗುವೆನು.

**ಗಂಗಾಂ ಮಾಂ ವೈ ವಿಜಾನೀಹಿ ದೇವಕಾರ್ಯಾರ್ಥಮಾಗತಾಂ ।**
**ವಸವಸ್ತು ಪುರಾ ಶಪ್ತಾ ವಸಿಷ್ಠೇನ ಮಹಾತ್ಮನಾ ॥೩೮॥**

ಎಲೈ ರಾಜನೇ, ನೀನು ನನ್ನನ್ನು ದೇವತೆಗಳ ಕೆಲಸಕ್ಕೋಸ್ಕರ ಬಂದಿದ್ದಂಥ ಗಂಗಾದೇವಿಯನ್ನಾಗಿ ತಿಳಿ. ಹಿಂದೆ ಮಹಾಮಹಿಮನಾದ ವಸಿಷ್ಠಋಷಿಯಿಂದ ವಸುಗಳು ಶಾಪವನ್ನು ಹೊಂದಿದರು.

**ವ್ರಜಂತು ಮಾನುಷೀಂ ಯೋನಿಂ ಸ್ಥಿತಾಂ ಚಿಂತಾತುರಾಸ್ತು ಮಾಂ ।**
**ದೃಷ್ಟ್ವೇದಂ ಪ್ರಾರ್ಥಯಾಮಾಸುರ್ಜನನೀ ನೋ ಭವಾನಘೇ ॥೩೯॥**

ಆ ವಸಿಷ್ಠನು, ಅಷ್ಟವಸುಗಳನ್ನು ಕುರಿತು " ನೀವು ಮನುಷ್ಯಯೋನಿಯಲ್ಲಿ ಹುಟ್ಟಿರಿ." ಎಂದು ಕೊಟ್ಟ ಶಾಪದಿಂದ ಅತ್ಯಂತ ವ್ಯಸನದಿಂದ ಕೂಡಿದ ಆ ವಸುಗಳು ದಾರಿಯಲ್ಲಿ ನನ್ನನ್ನು ನೋಡಿ, " ಓ ಪಾಪರಹಿತಳಾದ ಗಂಗೆಯೇ, ನೀನು ನಮಗೆ ತಾಯಿಯಾಗು '' ಎಂದು ಪ್ರಾರ್ಥಿಸಿದರು.

**ತೇಭ್ಯೋ ದತ್ವಾ ವರಂ ಜಾತಾ ಪತ್ನೀ ತೇ ನೃಪಸತ್ತಮ ।**
**ದೇವಕಾರ್ಯಾರ್ಥಸಿದ್ಧ್ಯರ್ಥಂ ಜಾನೀಹಿ ಸಂಭವೋ ಮಮ ॥೪೦॥**

ಎಲೈ ರಾಜಶ್ರೇಷ್ಠನಾದ ಶಂತನುರಾಜನೇ, ಆ ವಸುಗಳಿಗೆ ನಾನು ನಿಮ್ಮ ತಾಯಿಯಾಗಲು ಭೂಲೋಕದಲ್ಲಿ ಹುಟ್ಟುತ್ತೇನೆಂದು ವರವನ್ನು ಕೊಟ್ಟು ನಾನು ನಿನ್ನ ಹೆಂಡತಿಯಾದೆನು. ನನ್ನ ಈ ಜನನವು ದೇವತೆಗಳ ಕಾರ್ಯಸಿದ್ಧಿಗೋಸ್ಕರ ಆಯಿತೆಂದು ತಿಳಿ.

**ಸಪ್ತ ತೇ ವಸವಃ ಪುತ್ರಾ ಮುಕ್ತಾಃ ಶಾಪಾದ್ವಸಿಷ್ಠಸ್ಯ ತೇ ।**
**ಕಿಯಂತಂ ಕಾಲಮೇಕೋಽಯಂ ತವ ಪುತ್ರೋ ಭವಿಷ್ಯತಿ ॥೪೧॥**

ಆ ಏಳು ವಸುಗಳೂ ನಿನ್ನ ಮಕ್ಕಳಾಗಿ ಹುಟ್ಟಿ ವಸಿಷ್ಠಮಹರ್ಷಿಯ ಶಾಪದಿಂದ ಬಿಡುಗಡೆಯನ್ನು ಹೊಂದಿದರು. ಈ ಎಂಟನೆಯ ಒಬ್ಬ ಪುತ್ರನು ಮಾತ್ರ ಕೆಲವು ಕಾಲದವರೆಗೆ ನಿನ್ನ ಮಗನಾಗಿರುವನು.

**ಗಂಗಾದತ್ತಮಿಮಂ ಪುತ್ರಂ ಗೃಹಾಣ ಶಂತನೋ ಸ್ವಯಂ ।**
**ವಸುಂ ದೇವಂ ವಿದಿತ್ವೈನಂ ಸುಖಂ ಭುಂಕ್ಷ್ವ ಸುತೋದ್ಭವಂ ॥೪೨॥**

ಎಲೈ ಶಂತನುರಾಜನೇ, ಗಂಗೆಯಿಂದ ಕೊಡಲ್ಪಟ್ಟ ಈ ಮಗನನ್ನು ನೀನು ಸ್ವೀಕರಿಸು. ಇವನನ್ನು ದೇವತೆಯಾದ ವಸುವನ್ನಾಗಿ ತಿಳಿದು, ಮಗನನ್ನು ಪಡೆಯುವುದರಿಂದ ತಂದೆಗೆ ಉಂಟಾಗುವ ಸುಖವನ್ನು ಅನುಭವಿಸು.

**ಗಾಂಗೇಯೋಽಯಂ ಮಹಾಭಾಗ ಭವಿಷ್ಯತಿ ಬಲಾಧಿಕಃ ।**
**ಅದ್ಯ ತತ್ರ ನಯಾಮ್ಯೇನಂ ಯತ್ರ ತ್ವಂ ವೈ ಮಯಾವೃತಃ ॥೪೩॥**

ಎಲೈ ಭಾಗ್ಯಶಾಲಿಯಾದ ಶಂತನುರಾಜನೇ, ಗಂಗಾಪುತ್ರನಾದ ಇವನು ಅತ್ಯಂತ ಬಲಶಾಲಿಯಾಗುವನು. ಈಗ ನಾನು ಇವನನ್ನು, ಎಲ್ಲಿ ನಿನ್ನನ್ನು ಮೊದಲು ನಾನು ವರಿಸಿದನೋ ಆ ಸ್ಥಾನಕ್ಕೆ ಕರೆದುಕೊಂಡು ಹೋಗುತ್ತೇನೆ.

**ದಾಸ್ಯಾಮಿ ಯೌವನಪ್ರಾಪ್ತಂ ಪಾಲಯಿತ್ವಾ ಮಹೀಪತೇ ।**
**ನ ಮಾತೃರಹಿತಃ ಪುತ್ರೋ ಜೀವೇನ್ನ ಚ ಸುಖೀ ಭವೇತ್ ॥೪೪॥**

ಎಲೈ ಶಂತನುರಾಜನೇ, ಇವನನ್ನು ನಾನು ಪೋಷಿಸಿ, ಯೌವನವನ್ನು ಪಡೆದ ಮೇಲೆ ಇವನನ್ನು ನಿನಗೆ ಕೊಡುತ್ತೇನೆ. ಏಕೆಂದರೆ, ತಾಯಿ ಇಲ್ಲದ ಮಗುವು ಬದುಕಲಾರನು, ಅಥವಾ ಬದುಕಿದರೂ ಸುಖವನ್ನು ಪಡೆಯಲಾರನು.

**ಇತ್ಯುಕ್ತ್ವಾಽಂತರ್ದಧೇ ಗಂಗಾ ತಂ ಗೃಹೀತ್ವಾ ಚ ಬಾಲಕಂ ।**
**ರಾಜಾ ಚಾತೀವ ದುಃಖಾರ್ತಃ ಸಂಸ್ಥಿತೋ ನಿಜಮಂದಿರೇ ॥೪೫॥**

ಗಂಗೆಯು ಈ ರೀತಿಯಾಗಿ ಹೇಳಿ ಆ ತನ್ನ ಮಗನನ್ನು ತೆಗೆದುಕೊಂಡು ಅಲ್ಲಿಯೇ ಕಣ್ಮರೆಯಾದಳು. ರಾಜನೂ ಕೂಡ ತಾತ್ಕಾಲಿಕವಾಗಿ ಉಂಟಾದ ವಿಯೋಗಗಳ ವ್ಯಸನದಿಂದ ಪೀಡಿತನಾಗಿ ತನ್ನ ಮನೆಯಲ್ಲಿ ಇದ್ದನು.

**ಭಾರ್ಯಾವಿರಹಜಂ ದುಃಖಂ ತಥಾ ಪುತ್ರಸ್ಯ ಚಾದ್ಭುತಂ ।**
**ಸರ್ವದಾ ಚಿಂತಯನ್ನಾಸ್ತೇ ರಾಜ್ಯಂ ಕುರ್ವನ್ಮಹೀಪತಿಃ ॥೪೬॥**

ಶಂತನುಮಹಾರಾಜನು ಹೀಗೆ ಆಶ್ಚರ್ಯಕರವಾಗಿ ಸಂಭವಿಸಿದ ತನ್ನ ಹೆಂಡತಿಯ ವಿಯೋಗದಿಂದ ಮತ್ತು ತನ್ನ ಮಗನ ವಿಯೋಗದಿಂದ ಉಂಟಾದ ಮಹತ್ತರವಾದ ದುಃಖವನ್ನು ಸ್ಮರಿಸುತ್ತಾ ಇದ್ದರೂ ರಾಜ್ಯಭಾರವನ್ನು ಮಾತ್ರ ಸರಿಯಾಗಿ ನೆರವೇರಿಸುತ್ತಿದ್ದನು.

ಏವಂ ಗಚ್ಛತಿ ಕಾಲೇಽಥ ನೃಪತಿರ್ಮೃಗಯಾಂ ಗತಃ ।
ನಿಘ್ನನ್ಮೃಗಗಣಾನ್ಬಾಣೈರ್ಮಹಿಷಾನ್ ಸೂಕರಾನಪಿ ॥೪೭॥

ಗಂಗಾತೀರಮನುಪ್ರಾಪ್ತಃ ಸ ರಾಜಾ ಶಂತನುಸ್ತದಾ ।
ನದೀಂ ಸ್ತೋಕಜಲಾಂ ದೃಷ್ಟ್ವಾ ವಿಸ್ಮಿತಃ ಸ ಮಹೀಪತಿಃ ॥೪೮॥

ಈ ರೀತಿಯಾಗಿ ಕೆಲವು ಕಾಲ ಕಳೆದಮೇಲೆ ಶಂತನುರಾಜನು ಬೇಟೆಯಾಡುವುದಕ್ಕೋಸ್ಕರ ಕಾಡಿಗೆ ಹೋದನು. ಅವನು ಕಾಡಿನಲ್ಲಿ ಬಾಣಗಳಿಂದ ಜಿಂಕೆಗಳ ಸಮೂಹವನ್ನೂ, ಕಾಡುಕೋಣಗಳನ್ನೂ ಮತ್ತು ಕಾಡುಹಂದಿಗಳನ್ನೂ ಕೊಲ್ಲುತ್ತಾ ಗಂಗಾನದಿಯ ದಡಕ್ಕೆ ಬಂದನು. ಆಗ ಶಂತನುಮಹಾರಾಜನು ಗಂಗಾನದಿಯಲ್ಲಿ ಸ್ವಲ್ಪವೇ ನೀರು ಇರುವುದನ್ನು ನೋಡಿ ಬಹಳ ಆಶ್ಚರ್ಯಪಟ್ಟನು.

ತತ್ರಾಪಶ್ಯತ್ಕುಮಾರಂ ತಂ ಮುಂಚಂತಂ ವಿಶಿಖಾನ್ ಬಹೂನ್ ।
ಆಕೃಷ್ಯ ಚ ಮಹಾಚಾಪಂ ಕ್ರೀಡಂತಂ ಸರಿತಸ್ತಟೇ ॥೪೯॥

ಶಂತನುಮಹಾರಾಜನು ಆ ಗಂಗಾನದಿಯ ದಡದಲ್ಲಿ ದೊಡ್ಡ ಧನುಸ್ಸನ್ನು ಎಳೆದು ಕಟ್ಟಿ ಅನೇಕಬಾಣಗಳನ್ನು ಹೂಡಿ ಪ್ರಯೋಗಿಸುತ್ತಾ ಆಟವಾಡುತ್ತಿರುವ ಒಬ್ಬ ಬಾಲಕನನ್ನು ನೋಡಿದನು.

ತಂ ವೀಕ್ಷ್ಯ ವಿಸ್ಮಿತೋ ರಾಜಾ ನ ಸ್ಮ ಜಾನಾತಿ ಕಿಂಚನ ।
ನೋಪಲೇಭೇ ಸ್ಮೃತಿಂ ಭೂಪಃ ಪುತ್ರೋಽಯಂ ಮಮ ವಾ ನ ವಾ ॥

ಆ ಬಾಲಕನನ್ನು ನೋಡಿ ರಾಜನು ಆಶ್ಚರ್ಯಪಟ್ಟನು. ಮತ್ತು ಅವನು ಯಾರೆಂಬುದೇ ಮೊದಲಾದ ವಿಷಯವು ಸ್ವಲ್ಪವೂ ತಿಳಿಯಲಿಲ್ಲ. ಅಲ್ಲದೆ ಶಂತನುರಾಜನಿಗೆ ಈ ಬಾಲಕನು ತನ್ನ ಪುತ್ರನೋ ಅಥವಾ ಅಲ್ಲವೋ ಎಂಬ ವಿಷಯದಲ್ಲಿ ಹಿಂದಿನ ನೆನಪೂ ಬರಲಿಲ್ಲ.

ದೃಷ್ಟ್ವಾಽತ್ಯಮಾನುಷಂ ಕರ್ಮ ಬಾಣೇಷು ಲಘುಹಸ್ತತಾಂ ।
ವಿದ್ಯಾಂ ವಾಽಪ್ರತಿಮಾಂ ರೂಪಂ ತಸ್ಯ ವೈ ಸ್ಮರಸನ್ನಿಭಂ ॥೫೧॥

ಪಪ್ರಚ್ಛ ವಿಸ್ಮಿತೋ ರಾಜಾ ಕಸ್ಯ ಪುತ್ರೋಽಸಿ ಚಾನಘ ।
ನೋವಾಚ ಕಿಂಚಿದ್ವೀರೋಽಸೌ ಮುಂಚನ್‌ಶಿಲೀಮುಖಾನಥ ॥೫೨॥

ಶಂತನುರಾಜನು ಆ ಬಾಲಕನು ಮಾಡುತ್ತಿರುವ ಸಾಮಾನ್ಯ ಮನುಷ್ಯರಿಗೆ ಅಸಾಧ್ಯವಾದ ಕೆಲಸವನ್ನೂ ಬಾಣಗಳನ್ನು ಪ್ರಯೋಗಿಸುವುದರಲ್ಲಿ ಅವನ ಕೈ ಚಟುವಟಿಕೆಯನ್ನೂ ಅಸದೃಶವಾದ ಅವನ ತಿಳಿವಳಿಕೆಯನ್ನೂ, ಮನ್ಮಥನಿಗೆ ಸಮಾನವಾದ ಅವನ ರೂಪವನ್ನೂ ನೋಡಿ ಬಹಳ ಆಶ್ಚರ್ಯಪಟ್ಟು, ಎಲೈ ಪಾಪರಹಿತನಾದ ಬಾಲಕನೇ, ನೀನು ಯಾರ ಮಗನು ? ಎಂದು ಕೇಳಿದನು. ಆದರೂ ಶೂರನಾದ ಆ ಬಾಲಕನು ಬಾಣಗಳನ್ನು ಪ್ರಯೋಗಿಸುತ್ತಾ ಯಾವ ಉತ್ತರವನ್ನೂ ಕೊಡಲಿಲ್ಲ.

**ಅಂತರ್ಧಾನಗತಃ ಸೋಽಥ ರಾಜಾ ಚಿಂತಾತುರೋಽಭವತ್ ।**
**ಕೋಽಯಂ ಮಮ ಸುತೋ ಬಾಲಃ ಕಿಂ ಕರೋಮಿ ವ್ರಜಾಮಿ ಕಂ ॥೫೩॥**

ಅನಂತರ ಆ ಬಾಲಕನು ಅಲ್ಲಿಯೇ ಕಣ್ಮರೆಯಾದನು. ಆಗ ಶಂತನುರಾಜನು ಈ ಬಾಲಕನು ಯಾರಾಗಿರಬಹುದು ? ನನ್ನ ಪುತ್ರನಾಗಿರಬಹುದೇ ? ಈಗ ನಾನು ಏನನ್ನು ಮಾಡಲಿ ? ಸಹಾಯಕ್ಕೋಸ್ಕರ ಯಾರ ಸಮೀಪಕ್ಕೆ ಹೋಗಲಿ ಎಂದು ಚಿಂತಿಸಿದನು.

**ಗಂಗಾಂ ತುಷ್ಟಾವ ಭೂಪಾಲಃ ಸ್ಥಿತಸ್ತತ್ರ ಸಮಾಹಿತಃ ।**
**ದರ್ಶನಂ ಸಾ ದದಾವಾಥ ಚಾರುರೂಪಾ ಯಥಾ ಪುರಾ ॥೫೪॥**

ಆಗ ಶಂತನುರಾಜನು, ನಿಶ್ಚಲವಾದ ಮನಸ್ಸುಳ್ಳವನಾಗಿ ಏಕಾಗ್ರವಾದ ಧ್ಯಾನದಿಂದಲೂ, ಸ್ತೋತ್ರದಿಂದಲೂ ಗಂಗೆಯನ್ನು ಸಂತೋಷಗೊಳಿಸಿದನು. ಆಗ ಗಂಗೆಯು, ಸುಂದರವಾದ ರೂಪವುಳ್ಳವಳಾಗಿ ಹಿಂದೆ ಹೇಗೆ ಶಂತನುರಾಜನಿಗೆ ಕಾಣಿಸಿಕೊಂಡಿದ್ದಳೋ ಹಾಗೆಯೇ ಈಗಲೂ ಅವನಿಗೆ ಕಾಣಿಸಿಕೊಂಡಳು.

**ದೃಷ್ಟ್ವಾ ತಾಂ ಚಾರುಸರ್ವಾಂಗೀಂ ಬಭಾಷೇ ನೃಪತಿಃ ಸ್ವಯಂ ।**
**ಕೋಽಯಂ ಗಂಗೇ ಗತೋ ಬಾಲೋ ಮಮ ತ್ವಂ ದರ್ಶಯಾಧುನಾ ॥೫೫॥**

ಶಂತನುರಾಜನು ಸುಂದರವಾದ ಎಲ್ಲ ಅಂಗಗಳುಳ್ಳ ಆ ಗಂಗೆಯನ್ನು ನೋಡಿ, ಎಲೌ ಗಂಗೆಯೇ, ಈಗ ತೋರಿ ಮರೆಯಾದ ಈ ಬಾಲಕನು ಯಾರು ? ನೀನು ನನಗೆ ಈಗ ಅವನನ್ನು ತೋರಿಸು.

|| ಗಂಗೋವಾಚ ||

**ಪುತ್ರೋಽಯಂ ತವ ರಾಜೇಂದ್ರ ರಕ್ಷಿತಶ್ಚಾಷ್ಟವೋ ವಸುಃ ।**
**ದದಾಮಿ ತವ ಹಸ್ತೇ ತು ಗಾಂಗೇಯೋಽಯಂ ಮಹಾತಪಾಃ ॥೫೬॥**

ಗಂಗೆಯು ಹೇಳಿದಳು--ಎಲೈ ರಾಜಶ್ರೇಷ್ಠನೇ, ಈ ಬಾಲಕನು ನಿನ್ನ ಮಗನು. ಎಂಟನೆಯ ವಸುವಾದ ಇವನನ್ನು ಕಾಪಾಡಿದೆನು. ಇವನನ್ನು ನಾನು ನಿನ್ನ ಕೈಯಲ್ಲಿ ಕೊಡುತ್ತೇನೆ. ಗಂಗಾ ಪುತ್ರನಾದ ಈ ಬಾಲಕನು ಮಹಾತೇಜಸ್ವಿ ಯಾಗಿಯೂ, ತಪಸ್ವಿಯಾಗಿಯೂ ಇರುವನು.

**ಕೀರ್ತಿಕರ್ತಾ ಕುಲಸ್ಯಾಸ್ಯ ಭವಿತಾ ತವ ಸುವ್ರತಃ ।**
**ಪಾಠಿತಸ್ತ್ವಖಿಲಾನ್ವೇದಾನ್ ಧನುರ್ವೇದಂ ಚ ಶಾಶ್ವತಂ ॥೫೭॥**

ಈ ಬಾಲಕನು ನಿನ್ನ ವಂಶಕ್ಕೆ ಕೀರ್ತಿಯನ್ನುಂಟುಮಾಡತಕ್ಕವನೂ, ವ್ರತಾ ಚಾರಸಂಪನ್ನನೂ ಆಗುವನು. ಈ ಬಾಲಕನು ಸಮಸ್ತ ವೇದಗಳನ್ನೂ ಧನುರ್ವೇದ ವನ್ನೂ ಚೆನ್ನಾಗಿ ಕಲಿತಿರುವನು.

**ವಸಿಷ್ಠಸ್ಯಾಶ್ರಮೇ ದಿವ್ಯೇ ಸಂಸ್ಥಿತೋಽಯಂ ಸುತಸ್ತವ ।**
**ಸರ್ವವಿದ್ಯಾವಿಧಾನಜ್ಞಃ ಸರ್ವಾರ್ಥಕುಶಲಃ ಶುಚಿಃ ॥೫೮॥**

ಈ ನಿನ್ನ ಪುತ್ರನು ಶ್ರೇಷ್ಠವಾದ ವಸಿಷ್ಠಮಹರ್ಷಿಯ ಆಶ್ರಮದಲ್ಲಿದ್ದನು. ಇವನು ಸಮಸ್ತ ವಿದ್ಯೆಗಳ ಪ್ರಯೋಗದ ರೀತಿಯನ್ನು ತಿಳಿದವನಾಗಿಯೂ ಪರಿಶುದ್ಧ ನಾಗಿಯೂ, ಎಲ್ಲ ವಿಷಯುಗಳಲ್ಲಿಯೂ ಸಮರ್ಥನಾಗಿಯೂ ಇರುವನು.

**ಯದ್ವೇದ ಜಾಮದಗ್ನ್ಯೋಽಸೌ ತದ್ವೇದಾಯಂ ಸುತಸ್ತವ ।**
**ಗೃಹಾಣ ಗಚ್ಛ ರಾಜೇಂದ್ರ ಸುಖೀ ಭವ ನರಾಧಿಪ ॥೫೯॥**

ಜಮದಗ್ನಿ ಪುತ್ರನಾದ ಪರಶುರಾಮನು ಯಾವ ಯಾವ ವಿದ್ಯೆಗಳನ್ನು ತಿಳಿ ದಿರುವನೋ ಅವೆಲ್ಲವನ್ನೂ ಈ ನಿನ್ನ ಮಗನೂ ತಿಳಿದಿರುವನು. ಎಲೈ ರಾಜಶ್ರೇಷ್ಠ ನಾದ ಶಂತನು ಮಹಾರಾಜನೇ, ಇವನನ್ನು ನೀನು ಸ್ವೀಕರಿಸಿ ಕರೆದುಕೊಂಡು ಹೋಗು ಮತ್ತು ಸುಖವಾಗಿರು.

**ಇತ್ಯುಕ್ತ್ವಾಂತರ್ದಧೇ ಗಂಗಾ ದತ್ವಾ ಪುತ್ರಂ ನೃಪಾಯ ವೈ ।**
**ನೃಪತಿಸ್ತು ಮುದಾ ಯುಕ್ತೋ ಬಭೂವಾತಿಸುಖಾನ್ವಿತಃ ॥೬೦॥**

ಗಂಗೆಯು ಈ ರೀತಿ ಹೇಳಿ ಮಗನನ್ನು ಶಂತನುರಾಜನಿಗೆ ಕೊಟ್ಟು ಮರೆಯಾದಳು. ಶಂತನುರಾಜನಾದರೋ ತುಂಬಾ ಸಂತೋಷಪಟ್ಟವನಾಗಿ ಅತ್ಯಂತ ಸುಖವನ್ನು ಪಡೆದನು.

**ಸಮಾಲಿಂಗ್ಯ ಸುತಂ ರಾಜಾ ಸಮಾಘ್ರಾಯ ಚ ಮಸ್ತಕಂ ।**
**ಸಮಾರೋಪ್ಯ ರಥೇ ಪುತ್ರಂ ಸ್ವಪುರಂ ಸ ಪ್ರಚಕ್ರಮೇ ॥೬೧॥**

ಶಂತನುರಾಜನು ತನ್ನ ಪುತ್ರನನ್ನು ಆಲಂಗಿಸಿ ಅವನ ತಲೆಯ ನೆತ್ತಿಯನ್ನು ಆಘ್ರಾಣಿಸಿ, ಅನಂತರವಲ್ಲಿ ಅವನನ್ನು ರಥದಲ್ಲಿ ಹತ್ತಿಸಿ ಕುಳ್ಳಿರಿಸಿಕೊಂಡು ತನ್ನ ಪಟ್ಟಣಕ್ಕೆ ಹೊರಟನು.

**ಗತ್ವಾ ಗಜಾಹ್ವಯಂ ರಾಜಾ ಚಕಾರೋತ್ಸವಮುತ್ತಮಂ ।**
**ದೈವಜ್ಞಂ ಚ ಸಮಾಹೂಯ ಪಪ್ರಚ್ಛ ಚ ಶುಭಂ ದಿನಂ ॥೬೨॥**

ರಾಜನು ಗಜಾಹ್ವಯವೆಂದು ಪ್ರಸಿದ್ಧವಾದ ಹಸ್ತಿನಾಪುರಕ್ಕೆ ಹೋಗಿ ಅಲ್ಲಿ ದೊಡ್ಡ ಉತ್ಸವವನ್ನು ಮಾಡಿಸಿದನು. ಮತ್ತು ಜೋಯಿಸರನ್ನು ಕರೆಯಿಸಿ ಯೌವ ರಾಜ್ಯಪಟ್ಟಾಭಿಷೇಕಕ್ಕೋಸ್ಕರ ಒಳ್ಳೆಯ ದಿನವನ್ನು ಕೇಳಿದನು.

**ಸಮಾಹೃತ್ಯ ಪ್ರಜಾಃ ಸರ್ವಾಃ ಸಚಿವಾನ್ ಸರ್ವಶಃ ಶುಭಾನ್ ।**
**ಯೌವರಾಜ್ಯೇಽಥ ಗಾಂಗೇಯಂ ಸ್ಥಾಪಯಾಮಾಸ ಪಾರ್ಥಿವಃ ॥**

ಶಂತನು ರಾಜನು ತನ್ನ ಎಲ್ಲಾ ಪ್ರಜೆಗಳನ್ನೂ, ಯೋಗ್ಯರಾದ ಎಲ್ಲಾ ಮಂತ್ರಿಗಳನ್ನೂ ಕರೆಯಿಸಿದನು. ಅನಂತರ ಗಂಗಾಪುತ್ರನಾದ ಆ ಮಗನನ್ನು ಯೌವ ರಾಜ್ಯಪದವಿಯ ಕಾರ್ಯಭಾರವನ್ನು ನೆರವೇರಿಸುತ್ತಿರುವಂತೆ ನಿಯಮಿಸಿದನು.

**ಕೃತ್ವಾ ತಂ ಯುವರಾಜಾನಂ ಪುತ್ರಂ ಸರ್ವಗುಣಾನ್ವಿತಂ ।**
**ಸುಖಮಾಸ ಸ ಧರ್ಮಾತ್ಮಾ ನ ಸಸ್ಮಾರ ಚ ಜಾಹ್ನವೀಂ ॥೬೪॥**

ರಾಜರಲ್ಲಿರಬೇಕಾದ ಸಮಸ್ತ ಗುಣಗಳಿಂದಲೂ ಕೂಡಿತರತಕ್ಕ ಆ ತನ್ನ ಪುತ್ರನನ್ನು ಯುವರಾಜನನ್ನಾಗಿ ಮಾಡಿ, ಧರ್ಮಾತ್ಮನಾದ ಆ ಶಂತನುರಾಜನು

ಸುಖವಾಗಿದ್ದನು. ಮತ್ತು ಪುತ್ರಪ್ರಾಪ್ತಿಸುಖದಿಂದ ಜಹ್ನುಮಹರ್ಷಿಯ ಪುತ್ರಿಯಾದ ಗಂಗೆಯ ವಿಯೋಗದುಃಖವನ್ನು ಮರೆತು ಅವಳನ್ನು ನೆನಸಲಿಲ್ಲ.

|| ಸೂತ ಉವಾಚ ||

**ಏತದ್ವಃ ಕಥಿತಂ ಸರ್ವಂ ಕಾರಣಂ ವಸುಶಾಪಜಂ ।**
**ಗಾಂಗೇಯಸ್ಯ ತಥೋತ್ಪತ್ತಿಂ ಜಾಹ್ನವ್ಯಾಃ ಸಂಭವಂ ತಥಾ ||೬೫||**

ಸೂತಮಹರ್ಷಿಯು ಹೇಳಿದನು—ಎಲೈ ಶೌನಕಾದಿ ಮಹರ್ಷಿಗಳೇ, ವಸುಗಳಿಗೆ ಬಂದ ಶಾಪದ ಕಾರಣವನ್ನೂ, ಅದರಿಂದ ಅವರು ಭೂಮಿಯಲ್ಲಿ ಹುಟ್ಟಿದುದನ್ನೂ, ಗಂಗಾಪುತ್ರನಾದ ಭೀಷ್ಮನ ಜನನವನ್ನೂ ಮತ್ತು ಜಹ್ನುಋಷಿಯಿಂದ ಉತ್ಪನ್ನಳಾದ ಗಂಗೆಯು ಮಾನುಷಸ್ತ್ರೀಯಾಗಿ ಹುಟ್ಟಿದುದನ್ನೂ ಎಲ್ಲವನ್ನೂ ನಿಮಗೆ ನಾನು ಹೇಳಿದೆನು.

**ಗಂಗಾವತರಣಂ ಪುಣ್ಯಂ ವಸೂನಾಂ ಸಂಭವಂ ತಥಾ ।**
**ಯಃ ಶೃಣೋತಿ ನರಃ ಪಾಪಾನ್ಮುಚ್ಯತೇ ನಾತ್ರ ಸಂಶಯಃ ||೬೬||**

ಗಂಗೆಯು ಭೂಲೋಕದಲ್ಲಿ ಅವತರಿಸಿದ ಮತ್ತು ಅಷ್ಟವಸುಗಳು ಭೂಲೋಕದಲ್ಲಿ ಹುಟ್ಟಿದ ಪವಿತ್ರವಾದ ಈ ಕಥೆಯನ್ನು ಯಾರು ಕೇಳುತ್ತಾರೆಯೋ ಅವರು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಸಂದೇಹವಿಲ್ಲವು.

**ಪುಣ್ಯಂ ಪವಿತ್ರಮಾಖ್ಯಾನಂ ಕಥಿತಂ ಮುನಿಸತ್ತಮಾಃ ।**
**ಯಥಾ ಮಯಾ ಶ್ರುತಂ ವ್ಯಾಸಾತ್ಪುರಾಣಂ ವೇದಸಂಮಿತಂ ||೬೭||**

ಎಲೈ ಮುನಿಶ್ರೇಷ್ಠರೇ, ಪರಿಶುದ್ಧವಾದ, ಪುಣ್ಯಕರವಾದ ಮತ್ತು ವೇದಗಳಿಗೆ ಸಮಾನವಾದ, ಕಥಾರೂಪವಾದ ಈ ಪುರಾಣವನ್ನು ನಾನು ವ್ಯಾಸಮಹರ್ಷಿಯಿಂದ ಹೇಗೆ ಕೇಳಿದ್ದೆನೋ ಹಾಗೆಯೇ ನಿಮಗೆ ನಾನು ಹೇಳಿದೆನು.

**ಶ್ರೀಮದ್ಭಾಗವತಂ ಪುಣ್ಯಂ ನಾನಾಖ್ಯಾನಕಥಾನ್ವಿತಂ ।**
**ದ್ವೈಪಾಯನಮುಖೋದ್ಭೂತಂ ಪಂಚಲಕ್ಷಣಸಂಯುತಂ ||೬೮||**

**ಶೃಣ್ವತಾಂ ಸರ್ವಪಾಪಘ್ನಂ ಶುಭದಂ ಸುಖದಂ ತಥಾ ।**
**ಇತಿಹಾಸಮಿಮಂ ಪುಣ್ಯಂ ಕೀರ್ತಿದಂ ಮುನಿಸತ್ತಮಾಃ ॥೬೯॥**

ಎಲೈ ಮುನಿಶ್ರೇಷ್ಠರೇ, ಪವಿತ್ರವಾಗಿಯೂ, ಅನೇಕ ಕಥೆಗಳಿಂದ ಕೂಡಿದುದಾಗಿಯೂ, ವ್ಯಾಸಮುನಿಯ ಮುಖದಿಂದ ಪ್ರಕಟವಾದುದಾಗಿಯೂ, ಸರ್ಗ, ಪ್ರತಿಸರ್ಗವೇ ಮೊದಲಾದ ಐದು ಲಕ್ಷಣಗಳಿಂದ ಕೂಡಿದ್ದಾಗಿಯೂ, ಇರುವ ಈ ದೇವೀಭಾಗವತವು ಕೇಳತಕ್ಕವರ ಸರ್ವಪಾಪವನ್ನೂ ನಾಶಮಾಡತಕ್ಕ ಮಂಗಳಕರವಾದ, ಸುಖವನ್ನುಂಟುಮಾಡತಕ್ಕ, ಪುಣ್ಯಕರವಾದ ಇತಿಹಾಸವಾಗಿದೆ. ಈ ಶ್ರೇಯಸ್ಕರವಾದ ಕಥೆಯನ್ನು ನಾನು ನಿಮಗೆ ಹೇಳಿದೆನು.

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಚತುರ್ಥೋಽಧ್ಯಾಯಃ

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

### ॥ ಪಂಚಮೋಽಧ್ಯಾಯಃ ॥

### ಐದನೆಯ ಅಧ್ಯಾಯವು

॥ ಋಷಯ ಊಚುಃ ॥

**ವಸೂನಾಂ ಸಂಭವಃ ಸೂತ ಕಥಿತಃ ಶಾಪಕಾರಣಾತ್ ।**
**ಗಾಂಗೇಯಸ್ಯ ತಥೋತ್ಪತ್ತಿಃ ಕಥಿತಾ ಲೌಮಹರ್ಷಣೇ ॥೧॥**

ಶೌನಕಾದಿಋಷಿಗಳು ಸೂತಮಹರ್ಷಿಯನ್ನು ಈರೀತಿ ಪ್ರಶ್ನೆಮಾಡಿದರು— ಓ ಲೋಮಹರ್ಷಣನ ಪುತ್ರನಾದ ಸೂತನೇ, ಶಾಪದ ದೆಶೆಯಿಂದ ವಸುಗಳು ಭೂಲೋಕದಲ್ಲಿ ಹುಟ್ಟಿದುದನ್ನು ನೀನು ಹೇಳಿದೆ. ಹಾಗೆಯೇ, ಗಂಗಾಪುತ್ರನಾದ ಭೀಷ್ಮನ ಜನನವು ಶಾಪದ ಕಾರಣದಿಂದ ಹೇಗೆ ಆಯಿತೆಂಬುದನ್ನೂ ಹೇಳಿದೆ.

**ಮಾತಾ ವ್ಯಾಸಸ್ಯ ಧರ್ಮಜ್ಞಾ ನಾಮ್ನಾ ಸತ್ಯವತೀ ಸತೀ ।**
**ಕಥಂ ಶಂತನುನಾ ಪ್ರಾಪ್ತಾ ಭಾರ್ಯಾ ಗಂಧವತೀ ಶುಭಾ ॥೨॥**

ಎಲೈ ಧರ್ಮವನ್ನರಿತ ಸೂತನೇ, ಶಂತನುರಾಜನು ಭಾಗ್ಯಶಾಲಿನಿಯೂ, ಸುವಾಸನೆಯುಳ್ಳವಳೂ, ವ್ಯಾಸನ ತಾಯಿಯೂ, ಪತಿವ್ರತೆಯೂ ಆದ ಸತ್ಯವತಿಯನ್ನು ಹೇಗೆ ಹೆಂಡತಿಯನ್ನಾಗಿ ಪಡೆದುಕೊಂಡನು ?

**ತನ್ಮಮಾಚಕ್ಷ್ವ ವಿಸ್ತಾರಂ ದಾಶಪುತ್ರೀ ಕಥಂ ವೃತಾ ।**
**ರಾಜ್ಞಾ ಧರ್ಮವರಿಷ್ಠೇನ ಸಂಶಯಂ ಛಿಂಧಿ ಸುವ್ರತ ॥೩॥**

ಓ ಆಚಾರಶೀಲನಾದ ಸೂತಮುನಿಯೇ, ಧಾರ್ಮಿಕರಲ್ಲಿ ಶ್ರೇಷ್ಠನಾದ ಶಂತನು ರಾಜನು ಬೆಸ್ತರವನ ಮಗಳನ್ನು ಹೇಗೆ ಮದುವೆಯಾದನು ? ಅದೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳಿ ನನ್ನ ಸಂಶಯವನ್ನು ಹೋಗಲಾಡಿಸು.

|| ಸೂತ ಉವಾಚ ||

**ಶಂತನುರ್ನಾಮ ರಾಜರ್ಷಿರ್ಮೃಗಯಾನಿರತಃ ಸದಾ ।**
**ವನಂ ಜಗಾಮ ನಿಘ್ನನ್ಸ್ವೈ ಮೃಗಾಂಶ್ಚ ಮಹಿಷಾನ್ ರುರೂನ್ ॥೪॥**

ಯಾವಾಗಲೂ ಬೇಟೆಯಾಡುವುದರಲ್ಲಿ ಆಸಕ್ತನಾದ ಶಂತನು ಎಂಬ ಶ್ರೇಷ್ಠನಾದ ರಾಜನು, ಜಿಂಕೆ, ಕಾಡುಕೋಣವೇ ಮೊದಲಾದ ಮೃಗಗಳನ್ನು ಕೊಲ್ಲುವ ಉದ್ದೇಶವುಳ್ಳವನಾಗಿ ಕಾಡಿಗೆ ಹೋದನು.

**ಚತ್ವಾರ್ಯೇವ ತು ವರ್ಷಾಣಿ ಪುತ್ರೇಣ ಸಹ ಭೂಪತಿಃ ।**
**ರಮಮಾಣಃ ಸುಖಂ ಪ್ರಾಪ ಕುಮಾರೇಣ ಯಥಾ ಹರಃ ॥೫॥**

ಆ ರಾಜನು ತನ್ನ ಮಗನ ಆಟಪಾಟಗಳಲ್ಲಿ ಭಾಗಿಯಾಗಿರುತ್ತಾ, ನಾಲ್ಕು ವರ್ಷಗಳ ಕಾಲದವರೆಗೂ ಈಶ್ವರನು ತನ್ನ ಮಗನಾದ ಷಣ್ಮುಖನೊಡನೆ ಹೇಗೋ ಹಾಗೆ ಸಂತೋಷಪಡುತ್ತಿದ್ದನು.

**ಏಕದಾ ವಿಕ್ಷಿಪನ್ಬಾಣಾನ್ನಿನಿಘ್ನನ್ ಖಡ್ಗಸೂಕರಾನ್ ।**
**ಸ ಕದಾಚಿದ್ವನಂ ಪ್ರಾಪ್ತಃ ಕಾಲಿಂದೀಂ ಸರಿತಾಂ ವರಾಂ ॥೬॥**

ಕಾಡಿನಲ್ಲಿದ್ದ ಆ ರಾಜನು ಒಂದುದಿನ ಬಾಣಗಳನ್ನು ಪ್ರಯೋಗಿಸುತ್ತಾ, ಖಡ್ಗಮೃಗಗಳನ್ನೂ, ಕಾಡುಹಂದಿಗಳನ್ನೂ ಕೊಲ್ಲುತ್ತಾ, ಅಲ್ಲಿರತಕ್ಕ ನದಿಗಳಲ್ಲಿ ಶ್ರೇಷ್ಠವಾದ ಯಮುನಾನದಿಯ ಸಮೀಪಕ್ಕೆ ಬಂದನು.

**ಮಹೀಪತಿರನಿರ್ದೇಶ್ಯಮಾಜಿಘ್ರದ್ಗಂಧಮುತ್ತಮಂ ।**
**ತಸ್ಯ ಪ್ರಭವಮನ್ವಿಚ್ಛನ್ ಸಂಚಚಾರ ವನಂ ತದಾ ॥೭॥**

ರಾಜನು ಅಲ್ಲಿ ವರ್ಣಿಸಲಸಾಧ್ಯವಾದ ಮತ್ತು ಶ್ರೇಷ್ಠವಾದ ಒಂದು ಪರಿಮಳವನ್ನು ಆಘ್ರಾಣಿಸಿದನು. ಆಗ ಅವನು ಅದರ ಉತ್ಪತ್ತಿಸ್ಥಾನವನ್ನು ಹುಡುಕುವ ಉದ್ದೇಶವುಳ್ಳವನಾಗಿ ಕಾಡಿನಲ್ಲಿ ಸಂಚರಿಸುತ್ತಿದ್ದನು.

**ನ ಮಂದಾರಸ್ಯ ಗಂಧೋऽಯಂ ಮೃಗನಾಭಿಮದಸ್ಯ ನ ।**
**ಚಂಪಕಸ್ಯ ನ ಮಾಲತ್ಯಾ ನ ಕೇತಕ್ಯಾ ಮನೋಹರಃ ॥೮॥**

ಮನಸ್ಸನ್ನು ಆಕರ್ಷಿಸತಕ್ಕ ಈ ಸುವಾಸನೆಯು ಮಂದಾರಹೂವಿನದಲ್ಲ, ಕಸ್ತೂರಿಯದೂ ಅಲ್ಲವು, ಸಂಪಿಗೆಯದೂ ಅಲ್ಲ, ಜಾಜಿಯದೂ ಅಲ್ಲ, ತಾಳೆಯ ಹೂವಿನದೂ ಅಲ್ಲವು; ಎಂದು ಮುಂತಾಗಿ ರಾಜನು ಆಲೋಚಿಸುತ್ತಿದ್ದನು.

**ನ ಚಾನುಭೂತಪೂರ್ವೋಽಯಂ ವಾತಿ ಗಂಧವಹಃ ಶುಭಃ ।**
**ಕುತೋಽಯಮೇತಿ ವಾಯುರ್ನ್ಯೈ ಮಮ ಘ್ರಾಣವಿಮೋಹನಃ ॥೯॥**

ಸುಗಂಧದಿಂದ ಕೂಡಿ ಆಹ್ಲಾದಕರವಾಗಿ ಬೀಸುತ್ತಿರುವ ಈ ವಿಧವಾದ ಮಂದಮಾರುತವನ್ನು ನಾನು ಯಾವಾಗಲೂ ಅನುಭವಿಸಿರಲಿಲ್ಲವು. ನನ್ನ ಮೂಗನ್ನು ಮೋಹಗೊಳಿಸುವಷ್ಟು ಪರಿಮಳಯುಕ್ತವಾಗಿರುವ ಈ ಗಾಳಿಯು ಎಲ್ಲಿಂದ ಬೀಸುತ್ತಿದೆ?

**ಇತಿ ಸಂಚಿತ್ಯಮಾನೋಽಸೌ ಬಭ್ರಾಮ ವನಮಂಡಲಂ ।**
**ಮೋಹಿತೋ ಗಂಧಲೋಭೇನ ಶಂತನುಃ ಪವನಾನುಗಃ ॥೧೦॥**

ಈ ರೀತಿಯಾಗಿ ಯೋಚಿಸುತ್ತಾ ಆ ಪರಿಮಳದಲ್ಲಿ ಆಶೆಯುಳ್ಳವನಾಗಿ, ಆ ಗಾಳಿಯ ಮಾರ್ಗವನ್ನೇ ಅನುಸರಿಸುವವನಾಗಿ, ಆ ಶಂತನುರಾಜನು ಆ ಕಾಡಿನಲ್ಲಿ ಎಲ್ಲೆಡೆಯೂ ಸುತ್ತಾಡುತ್ತಿದ್ದನು.

**ಸ ದದರ್ಶ ನದೀತೀರೇ ಸಂಸ್ಥಿತಾಂ ಚಾರುದರ್ಶನಾಂ ।**
**ಶೃಂಗಾರಸಹಿತಾಂ ಕಾಂತಾಂ ಸುಸ್ಥಿತಾಂ ಮಲಿನಾಂಬರಾಂ ॥೧೧॥**

ಆ ಶಂತನುರಾಜನು ನದೀದಡದಲ್ಲಿ ಕೊಳಕುಬಟ್ಟೆಯನ್ನು ಧರಿಸಿರುವವಳಾದರೂ ಸುಂದರವಾದ ರೂಪವುಳ್ಳವಳಾದ, ಅನುರಾಗ ಮುಂತಾದ ಶೃಂಗಾರಭಾವವನ್ನು ಸೂಚಿಸುವಂತೆ ಸಿಂಗರಿಸಿಕೊಂಡಿರುವ, ಒಬ್ಬಳು ಸ್ತ್ರೀಯನ್ನು ನೋಡಿದನು.

**ದೃಷ್ಟ್ವಾ ತಾಮಸಿತಾಪಾಂಗೀಂ ವಿಸ್ಮಿತಃ ಸ ಮಹೀಪತಿಃ ।**
**ಅಸ್ಯಾ ದೇಹಸ್ಯ ಗಂಧೋಽಯಮಿತಿ ಸಂಜಾತನಿಶ್ಚಯಃ ॥೧೨॥**

ಆ ಶಂತನುರಾಜನು ಕಪ್ಪಾದ ಕಡೆಗಣ್ಣಿನ ನೋಟವುಳ್ಳ ಆ ಸ್ತ್ರೀಯನ್ನು ನೋಡಿ ಆಶ್ಚರ್ಯಪಟ್ಟನು. ಮತ್ತು ಈ ಸುವಾಸನೆಯು ಈ ಶರೀರದಿಂದಲೇ ಬರುತ್ತಿದೆ ಎಂಬುದನ್ನೂ ನಿಶ್ಚಯಿಸಿಕೊಂಡನು.

**ತದದ್ಭುತಂ ರೂಪಮತೀವ ಸುಂದರಂ**
**ತಥೈವ ಗಂಧೋಽಖಿಲಲೋಕಸಂಮತಃ ।**
**ವಯಶ್ಚ ತಾದೃಙ್ನವಯೌವನಂ ಶುಭಂ**
**ದೃಷ್ಟ್ವೈವ ರಾಜಾ ಕಿಲ ವಿಸ್ಮಿತೋಽಭವತ್ ॥೧೩॥**

ಹೆಚ್ಚು ಸೌಂದರ್ಯವುಳ್ಳ ಅವಳ ರೂಪವೂ, ಹಾಗೆಯೇ, ಎಲ್ಲ ಜನರಿಗೂ ಹಿತತೃಪ್ತಿಕರವಾದ ಆ ಪರಿಮಳವೂ, ಮಂಗಳಕರವಾದ ಅಂತಹ ಹೊಸಪ್ರಾಯದ ವಯಸ್ಸೂ ಇವೆಲ್ಲವನ್ನೂ ನೋಡಿ, ಆ ಶಂತನುರಾಜನು ಆಶ್ಚರ್ಯಪಟ್ಟನು.

**ಕೇಯಂ ಕುತೋ ವಾ ಸಮುಪಾಗತಾಽಧುನಾ**
**ದೇವಾಂಗನಾ ವಾ ಕಿಮು ಮಾನುಷೀ ವಾ ।**
**ಗಂಧರ್ವಪುತ್ರೀ ಕಿಲ ನಾಗಕನ್ಯಾ**
**ಜಾನೇ ಕಥಂ ಗಂಧವತೀಂ ನು ಕಾಮಿನೀಂ ॥೧೪॥**

ಇವಳು ಯಾರು ಆಗಿರಬಹುದು? ಎಲ್ಲಿಂದ ಈಗ ಇಲ್ಲಿಗೆ ಬಂದಿದ್ದಾಳೆ? ಇವಳು ಈಗ ಇಲ್ಲಿಗೆ ಏಕೆ ಬಂದಳು? ಇವಳು ದೇವತಾಸ್ತ್ರೀಯಾಗಿರಬಹುದೇ? ಮಾನುಷಸ್ತ್ರೀಯೇ? ಗಂಧರ್ವರಾಜನ ಮಗಳೇ? ಅಥವಾ ನಾಗಕನ್ನಿಕೆಯೇ? ಸುವಾಸನೆಯುಳ್ಳ ಈ ಸ್ತ್ರೀಯನ್ನು ನಾನು ಯಾರೆಂದು ಹೇಗೆ ನಿರ್ಧರಿಸಲಿ?

**ಸಂಚಿಂತ್ಯ ಚೈವಂ ಮನಸಾ ನೃಪೋಽಸೌ**
**ನ ನಿಶ್ಚಯಂ ಪ್ರಾಪ ಯದಾ ತತಃ ಸ್ವಯಂ ।**
**ಗಂಗಾಂ ಸ್ಮರನ್ ಕಾಮವಶಂ ಗತೋಽಥ**
**ಪಪ್ರಚ್ಛ ಕಾಂತಾಂ ತಟಸಂಸ್ಥಿತಾಂ ಚ ॥೧೫॥**

ಈ ರೀತಿಯಾಗಿ ಶಂತನುಮಹಾರಾಜನು ಮನಸ್ಸಿನಲ್ಲಿ ಯೋಚಿಸುತ್ತಾ ಯಾವಾಗ ತಾನೇ ಸ್ವಂತವಾಗಿ ನಿಶ್ಚಯವನ್ನು ಪಡೆಯಲಾರದೆ ಹೋದನೋ, ಆಗ ರಾಜನು ಪೂರ್ವದಲ್ಲಿ ತನ್ನನ್ನು ಬಿಟ್ಟುಹೋಗಿದ್ದ ಗಂಗೆಯಾಗಿರಬಹುದೇ ಎಂದು ಅವಳನ್ನು ನೆನೆಯುತ್ತಾ ಕಾಮುವಶನಾಗಿ ದಡದಲ್ಲಿದ್ದ ಮನೋಹರಳಾದ ಆ ಸ್ತ್ರೀಯನ್ನೇ ಹೀಗೆ ಕೇಳಿದನು.

ಕಾಸಿ ಪ್ರಿಯೇ ಕಸ್ಯ ಸುತಾಽಸಿ ಕಸ್ಮಾ-
ದಿಹ ಸ್ಥಿತಾ ತ್ವಂ ವಿಜನೇ ವರೋರು ।
ಏಕಾಕಿನೀ ಕಿಂ ವದ ಚಾರುನೇತ್ರೇ
ವಿವಾಹಿತಾ ವಾ ನ ವಿವಾಹಿತಾಽಸಿ ॥೧೬॥

ಓ ಪ್ರಿಯಳೇ, ನೀನು ಯಾರು ? ಯಾರ ಮಗಳು ? ಓ ಸುಂದರವಾದ ತೊಡೆಗಳುಳ್ಳ ಸ್ತ್ರೀಯೇ, ನೀನು ಜನರಿಲ್ಲದ ಈ ಸ್ಥಳದಲ್ಲಿ ಒಬ್ಬಳೇ ಏಕೆ ಇರುವೆ? ಓ ಸುಂದರವಾದ ಕಣ್ಣುಗಳುಳ್ಳ ರಮಣಿಯೇ, ನಿನಗೆ ಮದುವೆಯಾಗಿದೆಯೇ ಅಥವಾ ಇಲ್ಲವೇ? ಹೇಳು ಎಂದು ಕೇಳಿದನು.

ಸಂಜಾತಕಾಮೋಽಹಮರಾಲನೇತ್ರೇ
ತ್ವಾಂ ವೀಕ್ಷ್ಯ ಕಾಂತಾಂ ಚ ಮನೋರಮಾಂ ಚ ।
ಬ್ರೂಹಿ ಪ್ರಿಯೇ ಯಾಸಿ ಚಿಕೀರ್ಷಸಿ ತ್ವಂ
ಕಿಂ ಚೇತಿ ಸರ್ವಂ ಮಮ ವಿಸ್ತರೇಣ ॥೧೭॥

ಓ ಕೊಂಕಾದ ನೋಟವುಳ್ಳ ರಮಣಿಯೇ, ಮನಸ್ಸನ್ನು ಆಕರ್ಷಿಸತಕ್ಕ ಮತ್ತು ಸುಂದರಳಾದ ನಿನ್ನನ್ನು ನೋಡಿ ನಾನು ಕಾಮಪೀಡಿತನಾಗಿರುತ್ತೇನೆ. ಓ ಪ್ರಿಯಳೇ, ನೀನು ಯಾರಾಗಿರುವೆ? ಮುಂದೆ ನೀನು ಏನನ್ನು ಮಾಡಲು ಇಚ್ಛಿಸುತ್ತೀಯೆ? ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.

ಇತ್ಯೇವಮುಕ್ತಾ ಸುದತೀ ನೃಪೇಣ
ಪ್ರೋವಾಚ ತಂ ಸಸ್ಮಿತಮಂಬುಜೇಕ್ಷಣಾ ।
ವಾಶಸ್ಯ ಪುತ್ರೀಂ ತ್ವಮವೇಹಿ ರಾಜನ್
ಕನ್ಯಾಂ ಪಿತುಃ ಶಾಸನಸಂಸ್ಥಿತಾಂ ಚ ॥೧೮॥

ಈ ರೀತಿಯಾಗಿ ರಾಜನಿಂದ ಕೇಳಲ್ಪಟ್ಟ ಕಮಲದಂತಿರುವ ಕಣ್ಣುಗಳುಳ್ಳ, ಸುಂದರವಾದ ಹಲ್ಲುಗಳುಳ್ಳ ಆ ಸ್ತ್ರೀಯು ರಾಜನನ್ನು ಕುರಿತು ಹೀಗೆ ಹೇಳಿದಳು— ಓ ರಾಜನೇ, ನೀನು ನನ್ನನ್ನು ಬೆಸ್ತರವನ ಮಗಳೆಂದೂ, ಇನ್ನೂ ಮದುವೆಯಾಗದವಳೆಂದೂ, ತಂದೆಯ ಅಧೀನದಲ್ಲಿರತಕ್ಕವಳೆಂದೂ ತಿಳಿ.

ತರೀಮಿಮಾಂ ಧರ್ಮನಿಮಿತ್ತಮೇವ
ಸಂವಾಹಯಾಮೀಹ ಜಲೇ ನೃಪೇಂದ್ರ ।
ಪಿತಾ ಗೃಹೇ ಮೇಽದ್ಯ ಗತೋಽಸ್ತಿ ಕಾಮಂ
ಸತ್ಯಂ ಬ್ರವೀಮ್ಯರ್ಥಪತೇ ತವಾಗ್ರೇ ॥೧೯॥

ಓ ರಾಜಶ್ರೇಷ್ಠನೇ, ದೋಣಿ ನಡೆಸುವುದು ನಮ್ಮ ಕುಲದ ಧರ್ಮವಾದುದರಿಂದ ಇಲ್ಲಿ ನೀರಿನಲ್ಲಿ ನಾನು ಈ ದೋಣಿಯನ್ನು ನಡೆಸುತ್ತಿದ್ದೇನೆ. ನನ್ನ ತಂದೆಯು ಈಗ ಮನೆಗೆ ಹೋಗಿರುತ್ತಾನೆ. ಓ ಐಶ್ವರ್ಯವಂತನಾದ ರಾಜನೇ, ನಿನ್ನ ಮುಂದೆ ಮನಃಪೂರ್ವಕವಾಗಿ ನಾನು ಸತ್ಯವನ್ನು ಹೇಳುತ್ತಿದ್ದೇನೆ.

ಇತ್ಯೇವಮುಕ್ತ್ವಾ ವಿರರಾಮ ಬಾಲಾ
ಕಾಮಾತುರಸ್ತಾಂ ನೃಪತಿರ್ಬಭಾಷೇ ।
ಕುರು ಪ್ರವೀರಂ ಕುರು ಮಾಂ ಪತಿಂ ತ್ವಂ
ವೃಥಾ ನ ಗಚ್ಛೇನ್ನನು ಯೌವನಂ ತೇ ॥೨೦॥

ಈ ರೀತಿಯಾಗಿ ಹೇಳಿ ಆ ಬಾಲಿಕೆಯು ಸುಮ್ಮನಾದಳು. ಆಗ ರಾಜನು ಕಾಮಪೀಡಿತನಾಗಿ ಅವಳನ್ನು ಕುರಿತು ಹೇಳಿದನು—ಕುರುವಂಶದ ರಾಜರಲ್ಲಿ ಪರಾಕ್ರಮದಿಂದ ಶ್ರೇಷ್ಠನಾದ ನನ್ನನ್ನು ನೀನು ಗಂಡನನ್ನಾಗಿ ಮಾಡಿಕೋ. ನನ್ನನ್ನು ಹೊಂದುವುದರಿಂದ ನಿನ್ನ ಯೌವನವು ವ್ಯರ್ಥವಾಗಲಾರದು.

ನ ಚಾಸ್ತಿ ಪತ್ನೀ ಮಮ ವೈ ದ್ವಿತೀಯಾ
ತ್ವಂ ಧರ್ಮಪತ್ನೀ ಭವ ಮೇ ಮೃಗಾಕ್ಷಿ ।
ದಾಸೋಽಸ್ಮಿ ತೇಽಹಂ ವಶಗಃ ಸದೈವ
ಮನೋಭವಸ್ತಾಪಯತಿ ಪ್ರಿಯೇ ಮಾಂ ॥೨೧॥

ನನಗೆ ಬೇರೆ ಹೆಂಡತಿ ಯಾರೂ ಇಲ್ಲವು. ಆದುದರಿಂದ ಎಲೆ ಜಿಂಕೆಯ ಕಣ್ಣಿನಂತಿರುವ ಕಣ್ಣುಗಳುಳ್ಳವಳೇ, ನೀನು ನನ್ನ ಧರ್ಮಪತ್ನಿಯಾಗು. ನಾನು ನಿನ್ನ ದಾಸನಾಗಿರುವೆನು. ಯಾವಾಗಲೂ ನಿನ್ನ ಅಧೀನವಾಗಿರುವೆನು. ಎಲೆ ಪ್ರಿಯಳೇ, ಮನ್ಮಥನು ನನ್ನನ್ನು ಪೀಡಿಸುತ್ತಿದ್ದಾನೆ.

ಗತಾ ಪ್ರಿಯಾ ಮಾಂ ಪರಿಹೃತ್ಯ ಕಾಂತಾ
ನಾನ್ಯಾ ವೃತಾಹಂ ವಿಧುರೋಽಸ್ಮಿ ಕಾಂತೇ ।
ತ್ವಾಂ ವೀಕ್ಷ್ಯ ಸರ್ವಾವಯವಾತಿರಮ್ಯಾಂ
ಮನೋ ಹಿ ಜಾತಂ ವಿವಶಂ ಮದೀಯಂ ॥೨೨॥

ಓ ಪ್ರಿಯಳೇ, ನನ್ನ ಪ್ರೀತಿಯ ಹೆಂಡತಿಯು ನನ್ನನ್ನು ಬಿಟ್ಟುಹೋದಳು. ನಾನು ಮತ್ತೊಬ್ಬಳನ್ನು ಇನ್ನೂ ಲಗ್ನವಾಗಲಿಲ್ಲ. ಆದುದರಿಂದ ಎಲೆ ಸುಂದರಿಯೇ, ನಾನು ಪತ್ನೀರಹಿತನಾಗಿದ್ದೇನೆ. ಎಲ್ಲಾ ಅಂಗಗಳಲ್ಲಿಯೂ ಅತ್ಯಂತ ಸುಂದರಿಯಾಗಿರುವ ನಿನ್ನನ್ನು ನೋಡಿ ನನ್ನ ಮನಸ್ಸು ಕಾಮಪರವಶವಾಗಿದೆ.

ಶ್ರುತ್ವಾಽಮೃತಾಸ್ವಾದರಸಂ ನೃಪಸ್ಯ
ವಚೋಽತಿರಮ್ಯಂ ಖಲು ದಾಶಕನ್ಯಾ ।
ಉವಾಚ ತಂ ಸಾತ್ತ್ವಿಕಭಾವಯುಕ್ತಾ
ಕೃತ್ವಾಽತಿಧೈರ್ಯಂ ನೃಪತಿಂ ಸುಗಂಧಾ ॥೨೩॥

ಅಮೃತಕ್ಕೆ ಸಮಾನವಾದ ರುಚಿಯುಳ್ಳ ಮತ್ತು ಅತಿ ಮನೋಹರವಾದ ರಾಜನ ಈ ಮಾತುಗಳನ್ನು ಕೇಳಿ, ಸುವಾಸನೆಯುಳ್ಳ ಆ ಬೆಸ್ತನ ಮಗಳು ಸಾತ್ತ್ವಿಕ ಭಾವದಿಂದ ಕೂಡಿದವಳಾಗಿ ಬಹಳ ಧೈರ್ಯದಿಂದ ರಾಜನನ್ನು ಕುರಿತು ಹೀಗೆ ಹೇಳಿದಳು.

ಯದಾತ್ಥ ರಾಜನ್ ಮಯಿ ತತ್ತಥೈವ
ಮನ್ಯೇಽಹಮೇತತ್ತು ಯಥಾವಚಸ್ತೇ ।
ನಾಸ್ಮಿ ಸ್ವತಂತ್ರಾ ತ್ವಮವೇಹಿ ಕಾಮಂ
ದಾತಾ ಪಿತಾ ಮೇಽರ್ಥಯ ತಂ ತ್ವಮಾಶು ॥೨೪॥

ಓ ರಾಜನೇ, ನೀನು ನನ್ನ ವಿಷಯದಲ್ಲಿ ಯಾವ ಮಾತುಗಳನ್ನು ಹೇಳಿದೆಯೋ ಅದು ಹಾಗೆಯೇ ನಿಜವಾಗಿದೆ ಎಂಬುದನ್ನು ನಾನೂ ಬಲ್ಲೆನು. ಆದರೆ, ನಾನು ಸ್ವತಂತ್ರಳಲ್ಲವೆಂಬುದನ್ನು ತಿಳಿ. ನನ್ನನ್ನು ಕೊಡತಕ್ಕವನು ನನ್ನ ತಂದೆಯು. ಆದುದರಿಂದ ನೀನು ಬೇಗನೆ ಅವನನ್ನು ಕೇಳು.

ನ ಸ್ವೈರಿಣೀಹಾಸ್ಮ್ಯಪಿ ದಾಶಪುತ್ರೀ
ಪಿತುರ್ವಶೇऽಹಂ ಸತತಂ ಚರಾಮಿ ।
ಸ ಚೇದ್ದದಾತಿ ಪ್ರಥಿತಃ ಪಿತಾ ಮೇ
ಗೃಹಾಣ ಪಾಣಿಂ ವಶಗಾಸ್ಮಿ ತೇऽಹಂ ॥೨೫॥

ನಾನು ಬೆಸ್ತರವನ ಮಗಳಾದರೂ, ವೇಶ್ಯೆಯಂತೆ ಸ್ವೇಚ್ಛೆಯಿಂದ ವರ್ತಿಸು ವವಳಲ್ಲವು. ನಾನು ಯಾವಾಗಲೂ ನನ್ನ ತಂದೆಯ ಅಧೀನವಲ್ಲಿರುವೆನು. ಆದುದ ರಿಂದ ಪ್ರಸಿದ್ಧನಾದ ಆ ನನ್ನ ತಂದೆಯು, ನನ್ನನ್ನು ನಿನಗೆ ಕೊಡುವುದಾದರೆ ನೀನು ನನ್ನನ್ನು ಮದುವೆಯಾಗು. ನಾನೂ ನಿನ್ನಲ್ಲಿ ಮನಸೋತು ಅಧೀನಳಾಗಿರುವೆನು.

ಮನೋಭವಸ್ತ್ವಾಂ ನೃಪ ಕಿಂ ದುನೋತಿ
ಯಥಾ ಪುನರ್ಮಾಂ ನವಯೌವನಾಂ ಚ ।
ದುನೋತಿ ತತ್ರಾಪಿ ಹಿ ರಕ್ಷಣೀಯಾ
ಧೃತಿಃ ಕುಲಾಚಾರಪರಂಪರಾಸು ॥೨೬॥

ಓ ರಾಜನೇ, ಮನ್ಮಥನು ಹೊಸ ಪ್ರಾಯದಲ್ಲಿರುವ ನನ್ನನ್ನು ಯಾವ ರೀತಿ ಯಲ್ಲಿ ಪೀಡಿಸುತ್ತಿದ್ದಾನೆಯೋ ಹಾಗೆಯೇ ನಿನ್ನನ್ನೂ ಪೀಡಿಸುತ್ತಿದ್ದಾನೆಯೇ ? ಇಲ್ಲವು. ಆದರೂ ಅಂತಹ ಸ್ಥಿತಿಯಲ್ಲೂ ನಮ್ಮ ಕುಲ ಪದ್ಧತಿಗಳನ್ನು ಬಿಡದೆ ಅನು ಸರಿಸುವುದರಲ್ಲಿ ಸ್ಥಿರಬುದ್ಧಿಯನ್ನು ಕಾಪಾಡಿಕೊಂಡಿರಬೇಕು.

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾ ನೃಪತಿಃ ಕಾಮಮೋಹಿತಃ ।
ಗತೋ ದಾಶಪತೇರ್ಗೇಹಂ ತಸ್ಯಾ ಯಾಚನಹೇತವೇ ॥೨೭॥

ಸೂತನು ಹೇಳಿದನು—ಕಾಮಪೀಡಿತನಾದ ಆ ರಾಜನು ಅವಳ ಈ ರೀತಿ ಯಾದ ಮಾತನ್ನು ಕೇಳಿ ಅವಳನ್ನು ಯಾಚಿಸುವುದಕ್ಕೋಸ್ಕರ ಆ ಬೆಸ್ತರೊಡೆಯನ ಮನೆಗೆ ಹೋದನು.

ದೃಷ್ಟ್ವಾ ನೃಪತಿಮಾಯಾಂತಂ ದಾಶೋಽತಿವಿಸ್ಮಯಂ ಗತಃ ।
ಪ್ರಣಾಮಂ ನೃಪತೇಃ ಕೃತ್ವಾ ಕೃತಾಂಜಲಿರಭಾಷತ ॥೨೮॥

ಆ ಬೆಸ್ತರವನು ರಾಜನು ಬರುತ್ತಿರುವುದನ್ನು ನೋಡಿ ಬಹಳ ಆಶ್ಚರ್ಯ ಪಟ್ಟನು. ಅವನು ರಾಜನನ್ನು ನಮಸ್ಕರಿಸಿ ಕೈಮುಗಿದುಕೊಂಡು ಹೇಳಿದನು—

|| ದಾಶ ಉವಾಚ ||

**ದಾಸೋಽಸ್ಮಿ ತವ ಭೂಪಾಲ ಕೃತಾರ್ಥೋಽಹಂ ತವಾಗಮೇ ।**
**ಆಜ್ಞಾಂ ದೇಹಿ ಮಹಾರಾಜ ಯದರ್ಥಮಿಹ ಚಾಗಮಃ ॥೨೯॥**

ಬೆಸ್ತರವನು ಹೇಳಿದನು—ಓ ದೇಶವನ್ನು ಕಾಪಾಡುವ ದೊರೆಯೇ, ನಾನು ನಿನ್ನ ದಾಸನಾಗಿದ್ದೇನೆ. ಓ ಮಹಾರಾಜನೇ, ನೀನು ಇಲ್ಲಿಗೆ ಬಂದಿರುವುದರ ಉದ್ದೇಶವನ್ನು ಅಪ್ಪಣೆಕೊಡಿಸು.

|| ರಾಜೋವಾಚ ||

**ಧರ್ಮಪತ್ನೀಂ ಕರಿಷ್ಯಾಮಿ ಸುತಾಮೇತಾಂ ತವಾನಘ ।**
**ತ್ವಯಾ ಚೇದ್ದೀಯತೇ ಮಹ್ಯಂ ಸತ್ಯಮೇತದ್ಬ್ರವೀಮಿ ತೇ ॥೩೦॥**

ರಾಜನು ಬೆಸ್ತರವನನ್ನು ಕುರಿತು ಹೀಗೆ ಹೇಳಿದನು—ಎಲೈ ಪಾಪರಹಿತನಾದ ಬೆಸ್ತರವನೇ, ನೀನು ನಿನ್ನ ಈ ಮಗಳನ್ನು ನನಗೆ ಕೊಡುವುದಾದರೆ ಅವಳನ್ನು ನಾನು ನನ್ನ ಧರ್ಮಪತ್ನಿಯನ್ನಾಗಿ ಮಾಡಿಕೊಳ್ಳುತ್ತೇನೆ. ನಾನು ನಿನಗೆ ಹೇಳುವ ಈ ಮಾತು ನಿಜವು.

|| ದಾಶ ಉವಾಚ ||

**ಕನ್ಯಾರತ್ನಂ ಮದೀಯಂ ಚೇದ್ಯತ್ತ್ವಂ ಪ್ರಾರ್ಥಯಸೇ ನೃಪ ।**
**ದಾತವ್ಯಂ ತು ಪ್ರದಾಸ್ಯಾಮಿ ನ ತ್ವದೇಯಂ ಕದಾಚನ ॥೩೧॥**

ಬೆಸ್ತರವನು ಹೇಳಿದನು—ಓ ರಾಜನೇ, ನನ್ನ ಶ್ರೇಷ್ಠಳಾದ ಕನ್ನಿಕೆಯನ್ನು ನೀನು ಪ್ರಾರ್ಥಿಸುವುದಾದರೆ, ಎಂದಾದರೂ ಪುರುಷರಿಗೆ ವಿವಾಹಾರ್ಥವಾಗಿ ಕೊಡ ಬೇಕಾಗಿರುವ ಅವಳನ್ನು, ಅವಶ್ಯಕವಾಗಿ ನಿನಗೆ ಕೊಡುತ್ತೇನೆ. ಅವಳನ್ನು ತಕ್ಕ ವರನಿಗೆ ಕೊಡದೆ ಮನೆಯಲ್ಲೇ ಇಟ್ಟುಕೊಳ್ಳತಕ್ಕದ್ದಲ್ಲವು.

**ತಸ್ಯಾಃ ಪುತ್ರೋ ಮಹಾರಾಜ ತ್ವದಂತೇ ಪೃಥಿವೀಪತಿಃ ।**
**ಸರ್ವಥಾ ಚಾಭಿಷೇಕ್ತವ್ಯೋ ನಾನ್ಯಃ ಪುತ್ರಸ್ತವೇತಿ ವೈ ॥೩೨॥**

ಆದರೆ, ಅವಳಲ್ಲಿ ಹುಟ್ಟುವ ಮಗನನ್ನು ನಿನ್ನ ಕಾಲಾನಂತರದಲ್ಲಿ ರಾಜನನ್ನಾಗಿ ಪಟ್ಟಾಭಿಷೇಕ ಮಾಡಬೇಕು. ಅಲ್ಲದೆ ನಿನ್ನ ಬೇರೆ ಮಗನಿಗೆ ಪಟ್ಟಾಭಿಷೇಕವನ್ನು ಖಂಡಿತವಾಗಿಯೂ ಮಾಡಬಾರದು.

|| ಸೂತ ಉವಾಚ ||

**ಶ್ರುತ್ವಾ ವಾಕ್ಯಂ ತು ದಾಶಸ್ಯ ರಾಜಾ ಚಿಂತಾತುರೋಽಭವತ್ ।**
**ಗಾಂಗೇಯಂ ಮನಸಾ ಕೃತ್ವಾ ನೋವಾಚ ನೃಪತಿಸ್ತದಾ ॥೩೩॥**

ಸೂತನು ಹೇಳಿದನು—ಬೆಸ್ತನ ಈ ಮಾತನ್ನು ಕೇಳಿ ರಾಜನು ಚಿಂತಾಮಗ್ನನಾದನು. ಮತ್ತು ಗಂಗಾಪುತ್ರನಾದ ಭೀಷ್ಮನನ್ನು ಪಟ್ಟಾಭಿಷೇಕಕ್ಕೆ ಯೋಗ್ಯನೆಂದು ಮನಸ್ಸಿನಲ್ಲಿ ಯೋಚಿಸಿ ಗೊತ್ತುಮಾಡಿಕೊಂಡಿದ್ದುದರಿಂದ ಬೆಸ್ತರವನಿಗೆ ಆಗ ಯಾವ ಉತ್ತರವನ್ನೂ ಕೊಡಲಿಲ್ಲ.

**ಕಾಮಾತುರೋ ಗೃಹಂ ಪ್ರಾಪ್ತಶ್ಚಿಂತಾವಿಷ್ಟೋ ಮಹೀಪತಿಃ ।**
**ನ ಸಸ್ನೌ ಬುಭುಜೇ ನಾಽಥ ನ ಸುಷ್ವಾಪ ಗೃಹಂ ಗತಃ ॥೩೪॥**

ಕಾಮಪೀಡಿತನಾದ ರಾಜನು ಮನೆಗೆ ಹೋದನು. ಆದರೆ ಚಿಂತಾಕ್ರಾಂತನಾಗಿದ್ದುದರಿಂದ ಮನೆಯಲ್ಲಿ ಆ ರಾಜನು ಸ್ನಾನವನ್ನು ಮಾಡಲಿಲ್ಲ, ಊಟವನ್ನೂ ಮಾಡಲಿಲ್ಲ, ನಿದ್ರಿಸಲೂ ಇಲ್ಲವು.

**ಚಿಂತಾತುರಂ ತು ತಂ ದೃಷ್ಟ್ವಾ ಪುತ್ರೋ ದೇವವ್ರತಸ್ತದಾ ।**
**ಗತ್ವಾಽಪೃಚ್ಛನ್ಮಹೀಪಾಲಂ ತದಸಂತೋಷಕಾರಣಂ ॥೩೫॥**

ಆಗ ಅವನ ಪುತ್ರನಾದ, ದಿವ್ಯವಾದ ನಿಯಮನಿಷ್ಠೆಯುಳ್ಳವನಾದ, ಭೀಷ್ಮನು ಚಿಂತಾವಿಷ್ಟನಾದ ತಂದೆಯನ್ನು ನೋಡಿ, ಅವನ ಸಮೀಪಕ್ಕೆ ಹೋಗಿ, ಅವನ ದುಃಖದ ಕಾರಣವನ್ನು ಕೇಳಿದನು.

**ದುರ್ಜಯಃ ಕೋಽಸ್ತಿ ಶತ್ರುಸ್ತೇ ಕರೋಮಿ ವಶಗಂ ತವ ।**
**ಕಾ ಚಿಂತಾ ನೃಪಶಾರ್ದೂಲ ಸತ್ಯಂ ವದ ನೃಪೋತ್ತಮ ॥೩೬॥**

ಓ ಉತ್ತಮನಾದ ದೊರೆಯೇ, ನಿನಗೆ ಯಾವ ಶತ್ರುವು ಜಯಿಸಲಶಕ್ಯನಾಗಿದ್ದಾನೆ ? ಅವನನ್ನು ನಾನು ನಿನ್ನ ಅಧೀನನನ್ನಾಗಿ ಮಾಡುತ್ತೇನೆ. ಓ ರಾಜ

ಶ್ರೇಷ್ಠನೇ ನಿನಗೆ ಹತ್ತಿರುವ ಯೋಚನೆಯು ಯಾವುದು ? ನನಗೆ ನಿಶ್ಚಯವನ್ನು ಹೇಳು.

**ಕಿಂ ತೇನ ಜಾತೇನ ಸುತೇನ ರಾಜನ್**
**ದುಃಖಂ ನ ಜಾನಾತಿ ನ ನಾಶಯೇದ್ಯಃ ।**
**ಋಣಂ ಗೃಹೀತುಂ ಸಮುಪಾಗತೋಽಸೌ**
**ಪ್ರಾಗ್ಜನ್ಮಜಂ ನಾತ್ರ ವಿಚಾರಣಾಸ್ತಿ** ॥೩೭॥

ಓ ರಾಜನೇ, ಯಾವ ಪುತ್ರನು ತಂದೆಯ ದುಃಖವನ್ನು ತಿಳಿಯುವುದಿಲ್ಲವೋ, ಮತ್ತು ಅದನ್ನು ಹೋಗಲಾಡಿಸುವುದಿಲ್ಲವೋ, ಅಂತಹ ಮಗನು ಹುಟ್ಟಿದುದರಿಂದ ಏನು ಪ್ರಯೋಜನ ? ಅವನು ಪೂರ್ವಜನ್ಮದಲ್ಲಿ ತೆಗೆದುಕೊಂಡಿದ್ದ ಸಾಲವನ್ನು ಈ ಜನ್ಮದಲ್ಲಿ ತಂದೆಯಿಂದ ತೆಗೆದುಕೊಳ್ಳುವುದಕ್ಕೆ ಮಾತ್ರ ಬಂದವನಂತೆ ಆಗುತ್ತಾನೆ. ಈ ಅಂಶವನ್ನು ಚರ್ಚಿಸಬೇಕಾಗಿಯೇ ಇಲ್ಲವು. ಏಕೆಂದರೆ ಇದರಲ್ಲಿ ಯಾವ ಸಂದೇಹವೂ ಇಲ್ಲವು.

**ವಿಮುಚ್ಯ ರಾಜ್ಯಂ ರಘುನಂದನೋಽಪಿ**
**ತಾತಾಜ್ಞಯಾ ದಾಶರಥಿಸ್ತು ರಾಮಃ ।**
**ವನಂ ಗತೋ ಲಕ್ಷ್ಮಣಜಾನಕೀಭ್ಯಾಂ**
**ಸಹೈವ ಶೈಲಂ ಕಿಲ ಚಿತ್ರಕೂಟಂ** ॥೩೮॥

ರಘುವಂಶದವನೂ, ದಶರಥಪುತ್ರನೂ ಆದ ರಾಮನೂ ಕೂಡ ತಂದೆಯ ಅಪ್ಪಣೆಯಿಂದ ರಾಜ್ಯವನ್ನು ಬಿಟ್ಟು ಲಕ್ಷ್ಮಣ ಮತ್ತು ಸೀತೆ ಇವರೊಡನೆ ಕಾಡಿಗೆ ಹೋಗಿ ಚಿತ್ರಕೂಟ ಪರ್ವತವನ್ನು ಸೇರಿದನು.

**ಸುತೋ ಹರಿಶ್ಚಂದ್ರನೃಪಸ್ಯ ರಾಜನ್**
**ಯೋ ರೋಹಿತಶ್ಚೇತಿ ಪ್ರಸಿದ್ಧನಾಮಾ ।**
**ಕ್ರೀತೋಽಥ ಪಿತ್ರಾ ವಿಪಣೋದ್ಯತಶ್ಚ**
**ದಾಸಾರ್ಪಿತೋ ವಿಪ್ರಗೃಹೇ ತು ನೂನಂ** ॥೩೯॥

ಓ ರಾಜನೇ, ರೋಹಿತನೆಂದು ಪ್ರಸಿದ್ಧವಾದ ಹೆಸರುಳ್ಳ ಹರಿಶ್ಚಂದ್ರ ರಾಜನ ಮಗನು ವ್ಯಾಪಾರದಲ್ಲಿ ಪ್ರವೃತ್ತನಾದ ತಂದೆಯಿಂದ ಮಾರಲ್ಪಟ್ಟನು. ಅಲ್ಲದೆ ಅವ

ನನ್ನು ಕೊಂಡುಕೊಂಡ ಬ್ರಾಹ್ಮಣನ ಮನೆಯಲ್ಲಿ ಕೆಲಸದವನಾಗಿ ಸಮರ್ಪಿಸಲ್ಪಟ್ಟಿದ್ದನು. (ಈ ಕಥೆಯು, ಮುಂದೆ ಏಳನೆಯ ಸ್ಕಂಧದಲ್ಲಿ ವಿವರಿಸಲ್ಪಟ್ಟಿದೆ.)

ತಥಾಽಜಿಗರ್ತಸ್ಯ ಸುತೋ ವರಿಷ್ಠೋ
ನಾಮ್ನಾ ಶುನಃಶೇಫ ಇತಿ ಪ್ರಸಿದ್ಧಃ ।
ಕ್ರೀತಸ್ತು ಪಿತ್ರಾಪ್ಯಥ ಯೂಪಬದ್ಧಃ
ಸಂಮೋಚಿತೋ ಗಾಧಿಸುತೇನ ಪಶ್ಚಾತ್ ॥೪೦॥

ಹಾಗೆಯೇ, ಶುನಃಶೇಫನೆಂದು ಪ್ರಸಿದ್ಧವಾದ ಹೆಸರುಳ್ಳ ಶ್ರೇಷ್ಠನಾದ ಅಜಿಗರ್ತನ ಮಗನೂ ಕೂಡ ತಂದೆಯಿಂದ ಮಾರಲ್ಪಟ್ಟನು. ಅನಂತರದಲ್ಲಿ ಯಜ್ಞದ ಯೂಪಸ್ತಂಭದಲ್ಲಿ ಅವನನ್ನು ಪಶುವಿನಂತೆ ಕಟ್ಟಿದ್ದರು. ಗಾಧಿಯ ಮಗನಾದ ವಿಶ್ವಾಮಿತ್ರನು ಅವನನ್ನು ಬಿಡಿಸಿದನು. (ಈ ಕಥೆಯೂ ಸಹ ಮುಂದೆ ಏಳನೆಯ ಸ್ಕಂಧದಲ್ಲಿ ಹೆಚ್ಚು ವಿವರಗಳೊಡನೆ ಹೇಳಲ್ಪಟ್ಟಿದೆ.)

ಪಿತ್ರಾಜ್ಞಯಾ ಜಾಮದಗ್ನ್ಯೇನ ಪೂರ್ವಂ
ಛಿನ್ನಂ ಶಿರೋ ಮಾತುರಿತಿ ಪ್ರಸಿದ್ಧಂ ।
ಅಕಾರ್ಯಮಪ್ಯಾಚರಿತಂ ಚ ತೇನ
ಗುರೋರನುಜ್ಞಾ ಚ ಗರೀಯಸೀ ಕೃತಾ ॥೪೧॥

ಅಲ್ಲದೆ ಪೂರ್ವದಲ್ಲಿ ಜಮದಗ್ನಿ ಪುತ್ರನಾದ ಪರಶುರಾಮನು ತಂದೆಯ ಅಪ್ಪಣೆಯಿಂದ ತಾಯಿಯ ತಲೆಯನ್ನು ಕತ್ತರಿಸಿದನು. ಇದು ಲೋಕದಲ್ಲಿ ಪ್ರಸಿದ್ಧವಾಗಿದೆ. ತಾಯಿಯನ್ನು ಕೊಲ್ಲುವುದು ಅಯೋಗ್ಯವಾದಾಗ್ಯೂ ಪರಶುರಾಮನು ಮಿಗಿಲಾದ ತಂದೆಯ ಅಪ್ಪಣೆಯನ್ನು ನೆರವೇರಿಸಿದನು. ಇದರಿಂದ ಹಿರಿಯರ ಅಪ್ಪಣೆಯನ್ನು ಪಾಲಿಸುವುದು ಎಲ್ಲಕ್ಕೂ ಮಿಗಿಲಾದ ಧರ್ಮವು. ಎಂಬುದು ಸ್ಥಿರಪಟ್ಟಿದೆ.

ಇದಂ ಶರೀರಂ ತವ ಭೂಪ ತೇ ನ
ಕ್ಷಮೋಽಸ್ಮಿ ನೂನಂ ವದ ಕಿಂ ಕರೋಮ್ಯಹಂ ।
ನ ಶೋಚನೀಯಂ ಮಯಿ ವರ್ತಮಾನೇಽ
ಪ್ಯಸಾಧ್ಯಮರ್ಥಂ ಪ್ರತಿಪಾದಯಾಮ್ಯದಃ ॥೪೨॥

ಓ ರಾಜನೇ, ಈ ದೇಹವು ನಿನ್ನದು. ಅದರಿಂದ ನಿನ್ನ ಸೇವೆಯನ್ನು ಮಾಡಬಲ್ಲೆನು. ನಾನು ನಿನ್ನ ವೃಷ್ಟಿಯಲ್ಲಿ ಆ ಇಷ್ಟವನ್ನು ನೆರವೇರಿಸಲು ಸಮರ್ಥನಲ್ಲವೆ

ಹೋಗಬಹುದಾದರೂ ನಾನು ಏನನ್ನು ಮಾಡಬೇಕೆಂಬುದನ್ನು ಹೇಳು. ನಾನು ಇರುವಾಗ ನೀನು ದುಃಖಿಸಬೇಕಾದುದಿಲ್ಲವು. ಮಾಡಲು ಅಸಾಧ್ಯವಾದ ಕೆಲಸವನ್ನೂ ಸಹ ನಾನು ನೆರವೇರಿಸುತ್ತೇನೆ.

**ಪ್ರಬ್ರೂಹಿ ರಾಜಂಸ್ತವ ಕಾಸ್ತಿ ಚಿಂತಾ**
**ನಿವಾರಯಾಮ್ಯದ್ಯ ಧನುರ್ಗೃಹೀತ್ವಾ ।**
**ದೇಹೇನ ಮೇ ಚೇಚ್ಚರಿತಾರ್ಥತಾ ವಾ**
**ಭವತ್ವಮೋಘಾ ಭವತಶ್ಚಿಕೀರ್ಷಾ** ॥೪೩॥

ಓ ರಾಜನೇ, ನಿನಗೆ ಯಾವ ಯೋಚನೆಯು ಇದೆಯೋ ಅದನ್ನು ಹೇಳು. ಆ ದುಃಖವನ್ನು, ನಾನು ಧನುಸ್ಸನ್ನು ಧರಿಸಿ, ಈಗಲೇ ಹೋಗಲಾಡಿಸುತ್ತೇನೆ. ಈ ಪ್ರಸಂಗದಲ್ಲಿ ಶರೀರವನ್ನೇ ಸಮರ್ಪಿಸಬೇಕಾದರೂ ಹಾಗೆ ಮಾಡುತ್ತೇನೆ. ಹಾಗೆ ಮಾಡುವುದರಿಂದ ನನ್ನ ದೇಹವು ನಷ್ಟವಾಗಬಹುದಾದರೂ, ನನ್ನ ದೇಹವು ಸಾರ್ಥಕವಾಗಿ, ಅದರಿಂದ ನಾನು ಕೃತಾರ್ಥನಾಗುವೆನು. ಅಥವಾ ಆ ಕಾರ್ಯ ನೆರವೇರಿದರೆ ನಿನ್ನ ಇಷ್ಟಾರ್ಥವೂ ಸಫಲವಾಗುವುದು.

**ಧಿಕ್ ತಂ ಸುತಂ ಯಃ ಪಿತುರೀಪ್ಸಿತಾರ್ಥಂ**
**ಕ್ಷಮೋಽಪಿ ಸನ್ನ ಪ್ರತಿಪಾದಯೇದ್ಯಃ ।**
**ಜಾತೇನ ಕಿಂ ತೇನ ಸುತೇನ ಕಾಮಂ**
**ಪಿತುರ್ನ ಚಿಂತಾಂ ಹಿ ಸಮುದ್ಧರೇದ್ಯಃ** ॥೪೪॥

ಯಾವ ಪುತ್ರನು ತಂದೆಯ ಇಷ್ಟಾರ್ಥವನ್ನು ನೆರವೇರಿಸಲು ಸಮರ್ಥನಾಗಿದ್ದಾಗ್ಯೂ ತಂದೆಯ ಇಷ್ಟವನ್ನು ನೆರವೇರಿಸುವುದಿಲ್ಲವೋ ಆ ಪುತ್ರನಿಗೆ ಧಿಕ್ಕಾರವು ಇರಲಿ. ಯಾವ ಮಗನು ತಂದೆಯ ದುಃಖವನ್ನು ಚನ್ನಾಗಿ ಮನಃಪೂರ್ವಕವಾಗಿ ಹೋಗಲಾಡಿಸುವುದಿಲ್ಲವೋ ಅಂಥವನು ಹುಟ್ಟಿದುದರಿಂದ ಏನು ಪ್ರಯೋಜನವು ?

**ನಿಶಮ್ಯೇತಿ ವಚಸ್ತಸ್ಯ ಪುತ್ರಸ್ಯ ಶಂತನುರ್ನೃಪಃ ।**
**ಲಜ್ಜಮಾನಸ್ತು ಮನಸಾ ತಮಾಹ ತ್ವರಿತಂ ಸುತಂ** ॥೪೫॥

ಶಂತನುರಾಜನು ಮಗನ ಈ ರೀತಿಯಾದ ಮಾತನ್ನು ಕೇಳಿ ಮನಸ್ಸಿನಲ್ಲಿ ನಾಚಿಕೆಪಡುತ್ತಿದ್ದರೂ ಆ ಮಗನನ್ನು ಕುರಿತು ಬೇಗನೆ ಹೀಗೆ ಹೇಳಿದನು.

|| ರಾಜೋವಾಚ ||

**ಚಿಂತಾ ಮೇ ಮಹತೀ ಪುತ್ರ ಯಸ್ತ್ವಮೇಕೋಽಸಿ ಮೇ ಸುತಃ ।**
**ಶೂರೋಽತಿಬಲವಾನ್ಮಾನೀ ಸಂಗ್ರಾಮೇಷ್ವಪರಾಙ್ಮುಖಃ ॥೪೬॥**

ರಾಜನು ಹೇಳಿದನು—ಎಲೈ ಮಗನೇ, ನನಗೆ ಬಹಳ ದುಃಖವಿದೆ. ಏಕೆಂದರೆ, ಧೀರನೂ, ಬಲಶಾಲಿಯೂ, ಗೌರವವನ್ನು ಪಡೆದಿರುವವನೂ, ಅಭಿಮಾನಿಯೂ, ಯುದ್ಧಗಳಲ್ಲಿ ಹಿಂತಿರುಗದವನೂ ಆದರೂ ನನಗೆ ನೀನೊಬ್ಬನೇ ಮಗನಾಗಿರುವೆ.

**ಏಕಾಪತ್ಯಸ್ಯ ಮೇ ತಾತ ವೃಥೇದಂ ಜೀವಿತಂ ಕಿಲ ।**
**ಮೃತೇ ತ್ವಯಿ ಮೃಧೇ ಕ್ವಾಪಿ ಕಿಂ ಕರೋಮಿ ನಿರಾಶ್ರಯಃ ॥ ॥೪೭॥**

ಎಲೈ ಮಗನೇ, ಒಬ್ಬನೇ ಮಗನುಳ್ಳ ನನ್ನ ಜೀವನವು ವ್ಯರ್ಥವು. ನೀನು ಎಲ್ಲಾದರೂ ಯುದ್ಧದಲ್ಲಿ ಅಕಸ್ಮಾತ್ ಮೃತನಾದರೆ ಆಶ್ರಯರಹಿತನಾಗುವ ನಾನು ಏನನ್ನು ಮಾಡಲಿ?

**ಏಷಾ ಮೇ ಮಹತೀ ಚಿಂತಾ ತೇನಾದ್ಯ ದುಃಖಿತೋಽಸ್ಮ್ಯಹಂ ।**
**ನಾನ್ಯಾ ಚಿಂತಾಸ್ತಿ ಮೇ ಪುತ್ರ ಯಾಂ ತವಾಗ್ರೇ ವದಾಮ್ಯಹಂ ॥೪೮॥**

ಇದೇ ನನ್ನ ದೊಡ್ಡ ಚಿಂತೆಯು. ಇದರಿಂದಲೇ ನಾನು ವ್ಯಸನವುಳ್ಳವನಾಗಿದ್ದೇನೆ. ಇದಲ್ಲದೆ, ನಿನ್ನ ಮುಂದೆ ಹೇಳಬಹುದಾದ ಇನ್ನು ಬೇರೆ ಯಾವ ದುಃಖವೂ ನನಗಿಲ್ಲವು.

|| ಸೂತ ಉವಾಚ ||

**ತದಾಕರ್ಣ್ಯಾಥ ಗಾಂಗೇಯೋ ಮಂತ್ರಿವೃದ್ಧಾನಪೃಚ್ಛತ ।**
**ನ ಮಾಂ ವದತಿ ಭೂಪಾಲೋ ಲಜ್ಜಯಾದ್ಯ ಪರಿಪ್ಲುತಃ ॥೪೯॥**

ಸೂತನು ಹೇಳಿದನು—ಗಂಗಾಪುತ್ರನಾದ ಭೀಷ್ಮನು ಆ ಮಾತನ್ನು ಕೇಳಿ ವೃದ್ಧಮಂತ್ರಿಗಳನ್ನು ಕೇಳಿದನು. ಓ ಮಂತ್ರಿಗಳೇ, ರಾಜನು ನಾಚಿಕೆಯಿಂದ ಕೂಡಿದವನಾಗಿ ನನಗೆ ತನ್ನ ದುಃಖವನ್ನು ಹೇಳುವುದಿಲ್ಲವು.

ವಿತ್ತ ವಾರ್ತಾಂ ನೃಪಸ್ಯಾದ್ಯ ಪೃಷ್ಟ್ವಾ ಯೂಯಂ ವಿನಿಶ್ಚಯಾತ್ ।
ಸತ್ಯಂ ಬ್ರುವಂತು ಮಾಂ ಸರ್ವಂ ತತ್ಕರೋಮಿ ನಿರಾಕುಲಃ ॥೫೦॥

ಆದುದರಿಂದ ನೀವು ರಾಜನ ನಿಜವಾದ ಆಶಯವನ್ನು ತಿಳಿದು ಅದೆಲ್ಲವನ್ನೂ ನಿಜವಾಗಿ ಹೇಳಿರಿ. ನಾನು ಅದನ್ನು ಯಾವ ಚಿಂತೆಯೂ ಇಲ್ಲದೆ ನೆರವೇರಿಸುತ್ತೇನೆ.

ತಚ್ಛ್ರುತ್ವಾ ತೇ ನೃಪಂ ಗತ್ವಾ ಸಂವಿಜ್ಞಾಯ ಚ ಕಾರಣಂ ।
ಶಶಂಸುರ್ವಿದಿತಾರ್ಥಸ್ತು ಗಾಂಗೇಯಸ್ತದಚಿಂತಯತ್ ॥೫೧॥

ಮಂತ್ರಿಗಳು ಭೀಷ್ಮನ ಮಾತನ್ನು ಕೇಳಿ ರಾಜನ ಸಮೀಪಕ್ಕೆ ಹೋದರು. ಅಲ್ಲಿ ರಾಜನ ದುಃಖದ ಕಾರಣವನ್ನು ತಿಳಿದು ಬಂದು ಭೀಷ್ಮನಿಗೆ ಹೇಳಿದರು. ಆಗ ಭೀಷ್ಮನು ಚಿಂತೆಗೆ ಕಾರಣವಾದ ವಿಷಯವನ್ನು ತಿಳಿದು ಮುಂದಿನ ಕೆಲಸಕ್ಕೋಸ್ಕರ ಯೋಚಿಸಿದನು.

ಸಹಿತಸ್ತೈರ್ಜಗಾಮಾಶು ದಾಶಸ್ಯ ಸದನಂ ತದಾ ।
ಪ್ರೇಮಪೂರ್ವಮುವಾಚೇದಂ ವಿನಮ್ರೋ ಜಾಹ್ನವೀಸುತಃ ॥೫೨॥

ಆಗ ಭೀಷ್ಮನು ಆ ಮಂತ್ರಿಗಳೊಡನೆ ಬೇಗನೆ ಬೆಸ್ತರವನ ಮನೆಗೆ ಹೋದನು. ಅಲ್ಲಿ ಆ ಬೆಸ್ತನನ್ನು ಕುರಿತು ಗಂಗಾಪುತ್ರನಾದ ಭೀಷ್ಮನು ವಿನಯದಿಂದ ಪ್ರೀತಿಪೂರ್ವಕವಾಗಿ ಈ ಮಾತನ್ನು ಹೇಳಿದನು.

॥ ಗಾಂಗೇಯ ಉವಾಚ ॥

ಪಿತ್ರೇ ದೇಹಿ ಸುತಾಂ ತೇಽದ್ಯ ಪ್ರಾರ್ಥಯಾಮಿ ಸುಮಧ್ಯಮಾಂ ।
ಮಾತಾ ಮೇಽಸ್ತು ಸುತೇಯಂ ತೇ ದಾಸೋಽಸ್ಮ್ಯಸ್ಯಾಃ ಪರಂತಪ ॥೫೩॥

ಎಲೈ ಶತ್ರುನಿಗ್ರಹಸಮರ್ಥನಾದ ಬೆಸ್ತರ ಯಜಮಾನನೇ, ನಿನ್ನ ಮಗಳನ್ನು ನನ್ನ ತಂದೆಗೆ ಮದುವೆಮಾಡಿಕೊಡು. ಸುಂದರವಾದ ನಡುವುಳ್ಳ ನಿನ್ನ ಮಗಳನ್ನು ಈಗ ನಾನು ನನ್ನ ತಂದೆಗಾಗಿ ಪ್ರಾರ್ಥಿಸುತ್ತೇನೆ. ಈ ನಿನ್ನ ಮಗಳು ನನಗೆ ತಾಯಿಯಾಗಿರಲಿ. ನಾನು ಇವಳ ಸೇವಕನಾಗಿರುವೆನು.

॥ ದಾಶ ಉವಾಚ ॥

ತ್ವಂ ಗೃಹಾಣ ಮಹಾಭಾಗ ಪತ್ನೀಂ ಕುರು ನೃಪಾತ್ಮಜ ।
ಪುತ್ರೋಽಸ್ಯಾ ನ ಭವೇದ್ರಾಜಾ ವರ್ತಮಾನೇ ತ್ವಯೀತಿ ವೈ ॥೫೪॥

ಎಲೈ ಭಾಗ್ಯಶಾಲಿಯಾದ ರಾಜಪುತ್ರನೇ, ನೀನು ಬೇಕಾದರೆ ಇವಳನ್ನು ಪರಿಗ್ರಹಿಸಿ ಹೆಂಡತಿಯನ್ನಾಗಿ ಮಾಡಿಕೋ. ಆದರೆ ನಿನ್ನ ತಂದೆಯು ಇವಳನ್ನು ಮದುವೆಯಾದರೆ ನೀನು ನಿನ್ನ ತಂದೆಗೆ ಹಿರಿಯಮಗನಾಗಿರುವುದರಿಂದ, ಇವಳಲ್ಲಿ ಹುಟ್ಟುವ ಮಗನು ರಾಜನಾಗಲಾರನು. ಆದುದರಿಂದ ನಾನು ಹೀಗೆ ಹೇಳಬೇಕಾಗಿದೆ.

|| ಗಾಂಗೇಯ ಉವಾಚ ||

**ಮಾತೇಯಂ ಮಮ ದಾಶೇಯಿಾ ರಾಜ್ಯಂ ನೈವ ಕರೋಮ್ಯಹಂ ।**
**ಪುತ್ರೋऽಸ್ಯಾಃ ಸರ್ವಥಾ ರಾಜ್ಯಂ ಕರಿಷ್ಯತಿ ನ ಸಂಶಯಃ ॥೫೫॥**

ಭೀಷ್ಮನು ಹೇಳಿದನು—ಚಿತ್ರರಥನ ಮಗಳಾದ ಇವಳು ನನ್ನ ತಾಯಿಯು. ನಾನು ರಾಜ್ಯಭಾರವನ್ನು ಸ್ವೀಕರಿಸುವುದಿಲ್ಲ. ನಿಶ್ಚಯವಾಗಿಯೂ ಇವಳ ಮಗನೇ ರಾಜ್ಯದ ಅಧಿಪತಿಯಾಗುತ್ತಾನೆ. ಈ ವಿಚಾರದಲ್ಲಿ ಯಾವ ಸಂಶಯವೂ ಇಲ್ಲವು.

|| ದಾಶ ಉವಾಚ ||

**ಸತ್ಯಂ ವಾಕ್ಯಂ ಮಯಾ ಜ್ಞಾತಂ ಪುತ್ರಸ್ತೇ ಬಲವಾನ್ ಭವೇತ್ ।**
**ಸೋಽಪಿ ರಾಜ್ಯಂ ಬಲಾನ್ನೂನಂ ಗೃಹ್ಣೀಯಾದಿತಿ ನಿಶ್ಚಯಃ ॥೫೬॥**

ಚಿತ್ರರಥನು ಹೇಳಿದನು—ನೀನು ಆಡಿದ ಮಾತನ್ನು ಸತ್ಯವೆಂದು ನಾನು ತಿಳಿದೆನು. ಆದರೆ ನೀನು ರಾಜ್ಯವನ್ನು ಪರಿಗ್ರಹಿಸದಿದ್ದರೂ, ನಿನಗೆ ಜನಿಸುವ ಪುತ್ರನು ಅತ್ಯಂತ ಬಲಶಾಲಿಯಾಗುವುದಾದರೆ, ಇವಳ ಮಗನಿಂದ ಬಲಾತ್ಕಾರವಾಗಿ ರಾಜ್ಯವನ್ನು ತೆಗೆದುಕೊಂಡಾನು. ಇದು ನಿಜವು.

|| ಗಾಂಗೇಯ ಉವಾಚ ||

**ನ ದಾರಸಂಗ್ರಹಂ ನೂನಂ ಕರಿಷ್ಯಾಮಿ ಹಿ ಸರ್ವಥಾ ।**
**ಸತ್ಯಂ ಮೇ ವಚನಂ ತಾತ ಮಯಾ ಭೀಷ್ಮಂ ವ್ರತಂ ಕೃತಂ ॥೫೭॥**

ಭೀಷ್ಮನು ಹೇಳಿದನು—ನಾನು ನಿಶ್ಚಯವಾಗಿಯೂ ವಿವಾಹವನ್ನೇ ಮಾಡಿಕೊಳ್ಳುವುದಿಲ್ಲವು, ಎಂದು ನಾನು ಭಯಂಕರವಾದ ಪ್ರತಿಜ್ಞೆಯನ್ನು ಇಗೋ ಮಾಡಿದ್ದೇನೆ. ಎಲೈ ತಂದೆಗೆ ಸಮನಾದವನೇ, ನನ್ನ ಈ ಮಾತನ್ನು ನಿಶ್ಚಯವೆಂದು ತಿಳಿ.

|| ಸೂತ ಉವಾಚ ||

**ಏವಂ ಕೃತಾಂ ಪ್ರತಿಜ್ಞಾಂ ತು ನಿಶಮ್ಯ ಝುಷಜೀವಕಃ ।**
**ದದೌ ಸತ್ಯವತೀಂ ತಸ್ಮೈ ರಾಜ್ಞೇ ಸರ್ವಾಂಗಶೋಭನಾಂ ॥೫೮॥**

ಸೂತಮಹರ್ಷಿಯು ಹೇಳಿದನು—ಮೀನಿನಿಂದ ಜೀವಿಸತಕ್ಕ ಬೆಸ್ತರಪತಿಯು ಈ ರೀತಿಯಾಗಿ ಭೀಷ್ಮನು ಮಾಡಿದ ಪ್ರತಿಜ್ಞೆಯನ್ನು ಕೇಳಿ, ಸಮಸ್ತ ಅವಯವಗಳಲ್ಲಿಯೂ ಸುಂದರಿಯಾದ ಸತ್ಯವತಿಯನ್ನು ಆ ಶಂತನುರಾಜನಿಗೆ ಕೊಟ್ಟನು.

**ಅನೇನ ವಿಧಿನಾ ತೇನ ವೃತಾ ಸತ್ಯವತೀ ಪ್ರಿಯಾ ।**
**ನ ಜಾನಾತಿ ಪರಂ ಜನ್ಮ ವ್ಯಾಸಸ್ಯ ನೃಪಸತ್ತಮಃ ॥೫೯॥**

ಈ ರೀತಿಯಾಗಿ ರಾಜನು ಸತ್ಯವತಿಯನ್ನು ಹೆಂಡತಿಯನ್ನಾಗಿ ಮಾಡಿಕೊಂಡನು. ಆದರೆ ರಾಜರಲ್ಲಿ ಶ್ರೇಷ್ಠನಾದ ಶಂತನುವು ಅವಳಲ್ಲಿ ಮೊದಲೇ ವ್ಯಾಸನು ಜನಿಸಿದ್ದಾನೆ ಎಂಬ ವಿಷಯವನ್ನು ತಿಳಿಯದಿರುತ್ತಾನೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಪಂಚಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

॥ ಷಷ್ಠೋಽಧ್ಯಾಯಃ ॥

### ಆರನೆಯ ಅಧ್ಯಾಯವು

॥ ಸೂತ ಉವಾಚ ॥

**ಏವಂ ಸತ್ಯವತೀ ತೇನ ವೃತಾ ಶಂತನುನಾ ಕಿಲ ।**
**ದ್ವೌ ಪುತ್ರೌ ಚ ತಥಾ ಜಾತೌ ಮೃತೌ ಕಾಲವಶಾದಪಿ ॥೧॥**

ಸೂತಮಹರ್ಷಿಯು ಹೇಳಿದನು—ಈ ಹಿಂದೆ ಹೇಳಿದ ಪ್ರಕಾರ ಶಂತನು ರಾಜನು ಸತ್ಯವತಿಯನ್ನು ವರಿಸಿದನು. ಅವಳಲ್ಲಿ ಚಿತ್ರಾಂಗದ, ವಿಚಿತ್ರವೀರ್ಯ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಆದರೆ ಅವರು ಕೆಲವು ಕಾಲದ ಮೇಲೆ ಸತ್ತು ಹೋದರು.

**ವ್ಯಾಸವೀರ್ಯಾತ್ತು ಸಂಜಾತೋ ಧೃತರಾಷ್ಟ್ರೋಽಂಧ ಏವ ಚ ।**
**ಮುನಿಂ ದೃಷ್ಟ್ವಾಥ ಕಾಮಿನ್ಯಾ ನೇತ್ರಸಂಮೀಲನೇ ಕೃತೇ ॥೨॥**

ವಂಶನಾಶವಾಗುವ ಕಾಲವು ಬಂದುದರಿಂದ ವ್ಯಾಸನು ತನ್ನ ಸಹೋದರನ ಹೆಂಡತಿಯಲ್ಲಿ ಒಂದು ಮಗುವನ್ನು ಹುಟ್ಟಿಸಿದನು. ಆದರೆ ಅವಳು ಜಡೆಗಳುಳ್ಳ ತೇಜಸ್ವಿಯಾದ ವ್ಯಾಸಮುನಿಯನ್ನು ನೋಡಿ ಪ್ರೀತಿಮಾಡಲಾರದೆ ಕಣ್ಣುಗಳನ್ನು ಮುಚ್ಚಿಕೊಂಡುದರಿಂದ ಆ ಮಗುವು ಕುರುಡಾಯಿತು. ಅವನೇ ಧೃತರಾಷ್ಟ್ರನು.

**ಶ್ವೇತರೂಪಾ ಯತೋ ಜಾತಾ ದೃಷ್ಟ್ವಾ ವ್ಯಾಸಂ ನೃಪಾತ್ಮಜಾ ।**
**ವ್ಯಾಸಕೋಪಾತ್ಸಮುತ್ಪನ್ನಃ ಪಾಂಡುಸ್ತೇನ ನ ಸಂಶಯಃ ॥೩॥**

ಅನಂತರ ರಾಜನ ಮಗಳಾದ ಅಂಬಾಲಿಕೆಯು ವ್ಯಾಸನ ತೇಜಸ್ಸನ್ನು ನೋಡಿ ಅವನಲ್ಲಿ ತನಗೆ ತಕ್ಕ ಅನುರಾಗವಿಲ್ಲದುದರಿಂದ ರಕ್ತ ಕಡಮೆಯಾಗಿ ಬೆಳ್ಳಗಾಗಿದ್ದಳು. ಇದರಿಂದ ವ್ಯಾಸನು ಕೋಪಗೊಂಡನು. ವ್ಯಾಸನು ಕೋಪಗೊಂಡಿರುವಾಗ ಪಾಂಡುವು ಹುಟ್ಟಿದುದರಿಂದ ಅವನು ಬೆಳ್ಳಗಾದನು. ಇದರಲ್ಲಿ ಯಾವ ಸಂದೇಹವೂ ಇಲ್ಲವು.

**ಸಂತೋಷಿತಸ್ತಯಾ ವ್ಯಾಸೋ ದಾಸ್ಯಾ ಕಾಮಕಲಾವಿದಾ ।**
**ವಿದುರಸ್ತು ಸಮುತ್ಪನ್ನೋ ಧರ್ಮಾಂಶಃ ಸತ್ಯವಾಕ್ ಶುಚಿಃ ॥೪॥**

ಹೀಗೆ ಎರಡು ಮಕ್ಕಳೂ ಗುಣಹೀನರೂ, ದೋಷವುಳ್ಳವರೂ ಆಗಲು ಸತ್ಯವತಿಯು ಸೊಸೆಯನ್ನು ಕುರಿತು ಇನ್ನೊಂದಾವೃತ್ತಿ ವ್ಯಾಸಮುನಿಯಿಂದ ಒಳ್ಳೆಯ ಸಂತಾನವನ್ನು ಪಡೆ ಎಂದು ಹೇಳಿದಳು. ಸೊಸೆಯು ತಾನೇ ಪುನಃ ಹೋಗಲೊಲ್ಲದ ತನ್ನ ದಾಸಿಯನ್ನು ವ್ಯಾಸನಲ್ಲಿಗೆ ಕಳುಹಿಸಿದಳು. ಆ ದಾಸಿಯು ಕಾಮಕಳಾಶಾಸ್ತ್ರದಲ್ಲಿ ನಿಪುಣಳಾಗಿದ್ದಳು. ಆ ವಿಶೇಷವಾದ ತಿಳಿವಳಿಕೆಯಿಂದ ಅವಳು ವ್ಯಾಸಮುನಿಯನ್ನು ತುಂಬ ಸಂತೋಷಪಡಿಸಿದಳು. ಆದುದರಿಂದ ಅವಳಲ್ಲಿ ಧರ್ಮಾಂಶನಾದ, ಸತ್ಯವಂತನಾದ ಮತ್ತು ಪಾಪರಹಿತನಾದ ಮಗನು ಹುಟ್ಟಿದನು. ಅವನೇ ಪ್ರಸಿದ್ಧನಾದ ವಿದುರನು.

**ರಾಜ್ಯೇ ಸಂಸ್ಥಾಪಿತಃ ಪಾಂಡುಃ ಕನೀಯಾನಪಿ ಮಂತ್ರಿಭಿಃ ।**
**ಅಂಧತ್ವಾದ್ಧೃತರಾಷ್ಟ್ರೋಽಸೌ ನಾಧಿಕಾರೇ ನಿಯೋಜಿತಃ ॥೫॥**

ಆಮೇಲೆ ಮಂತ್ರಿಗಳು ಪಾಂಡುವು ಕಿರಿಯವನಾದಾಗ್ಯೂ ಅವನನ್ನು ರಾಜ್ಯಾಡಳಿತದಲ್ಲಿ ನಿಯಮಿಸಿದರು. ಈ ಧೃತರಾಷ್ಟ್ರನು ಹುಟ್ಟು ಕುರುಡನಾದುದರಿಂದ ಅವನನ್ನು ಆ ಅಧಿಕಾರದಲ್ಲಿ ನಿಯಮಿಸಲಿಲ್ಲ.

**ಭೀಷ್ಮಸ್ಯಾನುಮತೇ ರಾಜ್ಯಂ ಪ್ರಾಪ್ತಃ ಪಾಂಡುರ್ಮಹಾಬಲಃ ।**
**ವಿದುರೋಽಪೃಥ ಮೇಧಾವೀ ಮಂತ್ರಕಾರ್ಯೇ ನಿಯೋಜಿತಃ ॥೬॥**

ಅತ್ಯಂತ ಪರಾಕ್ರಮವುಳ್ಳ ಪಾಂಡುವು ಭೀಷ್ಮನ ಅನುಮತಿಯಿಂದ ರಾಜಳವನ್ನು ಹೊಂದಿದನು. ಅತ್ಯಂತ ಬುದ್ಧಿಶಾಲಿಯಾದ ವಿದುರನೂ ಸಹ ಮಂತ್ರಿಯಾಗಿ ನಿಯಮಿಸಲ್ಪಟ್ಟನು.

**ಧೃತರಾಷ್ಟ್ರಸ್ಯ ದ್ವೇ ಭಾರ್ಯೇ ಗಾಂಧಾರೀ ಸೌಬಲೀ ಸ್ಮೃತಾ ।**
**ದ್ವಿತೀಯಾ ಚ ತಥಾ ವೈಶ್ಯಾ ಗಾರ್ಹಸ್ಥ್ಯೇಷು ಪ್ರತಿಷ್ಠಿತಾ ॥೭॥**

ಧೃತರಾಷ್ಟ್ರನಿಗೆ ಗಾಂಧಾರೀ ಮತ್ತು ಸೌಬಲೀ ಎಂಬ ಇಬ್ಬರು ಹೆಂಡತಿಯರಿದ್ದರು. ಎರಡನೆಯವಳು ವೈಶ್ಯಳಾಗಿದ್ದಳು. ಅವಳೂ ಕೂಡ ಗೃಹಸ್ಥಾಶ್ರಮದಲ್ಲಿ ಸ್ಥಾಪಿಸಲ್ಪಟ್ಟಳು.

**ಪಾಂಡೋರಪಿ ತಥಾ ಪತ್ನ್ಯೌ ದ್ವೇ ಪ್ರೋಕ್ತೇ ವೇದವಾದಿಭಿಃ ।**
**ಶೌರಸೇನೀ ತಥಾ ಕುಂತೀ ಮಾದ್ರೀ ಚ ಮದ್ರದೇಶಜಾ ॥೮॥**

ಹಾಗೆಯೇ ಪಾಂಡುವಿಗೂ ಕೂಡ ಶೂರಸೇನನ ಮಗಳಾದ ಕುಂತಿಯೂ, ಮದ್ರದೇಶದ ರಾಜನ ಮಗಳಾದ ಮಾದ್ರಿಯೂ ಇಬ್ಬರು ಹೆಂಡತಿಯರಿದ್ದರೆಂದು ವೇದಗಳನ್ನು ತಿಳಿದವರು ಹೇಳಿದ್ದಾರೆ.

**ಗಾಂಧಾರೀ ಸುಷುವೇ ಪುತ್ರಶತಂ ಪರಮಶೋಭನಂ ।**
**ವೈಶ್ಯಾಪ್ಯೇಕಂ ಸುತಂ ಕಾಂತಂ ಯುಯುತ್ಸುಂ ಸುಷುವೇ ಪ್ರಿಯಂ ॥೯॥**

ಗಾಂಧಾರಿಯು ಅತ್ಯಂತ ಸುಂದರರಾದ ನೂರು ಪುತ್ರರನ್ನು ಪ್ರಸವಿಸಿದಳು. ವೈಶ್ಯಳೂ ಕೂಡ ಸುಂದರನಾದ ಯುದ್ಧದಲ್ಲಿ ಆಸಕ್ತಿಯುಳ್ಳ ಒಬ್ಬ ಪ್ರೀತಿಯ ಮಗನನ್ನು ಪ್ರಸವಿಸಿದಳು.

**ಕುಂತೀ ತು ಪ್ರಥಮಂ ಕನ್ಯಾ ಸೂರ್ಯಾತ್ಕರ್ಣಂ ಮನೋಹರಂ।**
**ಸುಷುವೇ ಪಿತೃಗೇಹಸ್ಥಾ ಪಶ್ಚಾತ್ಪಾಂಡುಪರಿಗ್ರಹಃ ॥೧೦॥**

ಕುಂತಿಯಾದರೋ ಕನ್ನಿಕೆಯಾಗಿ ತಂದೆಯ ಮನೆಯಲ್ಲಿರುವಾಗಲೇ ಸೂರ್ಯನಿಂದ ಸುಂದರನಾದ ಕರ್ಣನನ್ನು ಪ್ರಸವಿಸಿದಳು. ಅನಂತರದಲ್ಲಿ ಪಾಂಡುವಿನೊಡನೆ ಅವಳ ವಿವಾಹವು ನೆರವೇರಿತು.

|| ಋಷಯ ಊಚುಃ ||

**ಕಿಮೇತತ್ಸೂತ ಚಿತ್ರಂ ತ್ವಂ ಭಾಷಸೇ ಮುನಿಸತ್ತಮ ।**
**ಜನಿತಶ್ಚ ಸುತಃ ಪೂರ್ವಂ ಪಾಂಡುನಾ ಸಾ ವಿವಾಹಿತಾ ॥೧೧॥**

ಋಷಿಗಳು ಸೂತನನ್ನು ಕೇಳಿದರು—ಎಲೈ ಶ್ರೇಷ್ಠಮುನಿಯಾದ ಸೂತನೇ, ಇದೇನು? ನೀನು ಆಶ್ಚರ್ಯಕರವಾದ ಮಾತನ್ನು ಹೇಳುತ್ತಿರುವೆ! ಮೊದಲು ಕುಂತಿಗೆ ಮಗನು ಹುಟ್ಟಿದನು, ಆ ಮೇಲೆ ಅವಳನ್ನು ಪಾಂಡುವು ಲಗ್ನವಾದನು ಎಂದು. ಇದು ಆಶ್ಚರ್ಯಕರವಾಗಿದೆ.

**ಸೂರ್ಯಾತ್ಕರ್ಣಃ ಕಥಂ ಜಾತಃ ಕನ್ಯಾಯಾಂ ವದ ವಿಸ್ತರಾತ್ ।**
**ಕನ್ಯಾ ಕಥಂ ಪುನರ್ಜಾತಾ ಪಾಂಡುನಾ ಸಾ ವಿವಾಹಿತಾ ॥೧೨॥**

ಕುಂತಿಯು ಕನ್ನಿಕೆಯಾಗಿದ್ದಲ್ಲಿ ಅವಳಲ್ಲಿ ಸೂರ್ಯನಿಂದ ಕರ್ಣನು ಹೇಗೆ ಹುಟ್ಟಿದನು? ಒಂದುವೇಳೆ ಮದುವೆಯಾದ ಮೇಲೆ ಅವನು ಹುಟ್ಟಿದುದಾದರೆ ಅವಳು ಪುನಃ ಕನ್ನಿಕೆಯಾಗಿ ಹೇಗೆ ಆಗಿದ್ದಳು? ಅಲ್ಲದೆ ಆ ಕುಂತಿಯನ್ನು ಪಾಂಡುವು ಹೇಗೆ ಮದುವೆಯಾದನು? ಇದೆಲ್ಲವನ್ನೂ ವಿಸ್ತಾರವಾಗಿ ಹೇಳು.

|| ಸೂತ ಉವಾಚ ||

**ಶೂರಸೇನಸುತಾ ಕುಂತೀ ಬಾಲಭಾವೇ ಯದಾ ದ್ವಿಜಾಃ ।**
**ಕುಂತಿಭೋಜೇನ ರಾಜ್ಞಾ ತು ಪ್ರಾರ್ಥಿತಾ ಕನ್ಯಕಾ ಶುಭಾ ॥೧೩॥**

ಎಲೈ ಬ್ರಾಹ್ಮಣರುಗಳಿರಾ, ಯಾವಾಗ ಕುಂತಿಯು ಬಾಲ್ಯವಯಸ್ಸಿನಲ್ಲಿದ್ದಳೋ ಆಗ ರಾಜನಾದ ಕುಂತಿಭೋಜನು ತನಗೆ ಮಕ್ಕಳಿಲ್ಲದುದರಿಂದ ಲಕ್ಷಣವಂತಳಾದ ಆ ಕನ್ನಿಕೆಯನ್ನು ತನಗೆ ಮಗಳಾಗಿ ಕೊಡು ಎಂದು ಶೂರಸೇನನನ್ನು ಪ್ರಾರ್ಥಿಸಿದನು.

**ಕುಂತಿಭೋಜೇನ ಸಾ ಬಾಲಾ ಪುತ್ರೀ ತು ಪರಿಕಲ್ಪಿತಾ ।**
**ಸೇವನಾರ್ಥಂ ತು ದೀಪ್ತಸ್ಯ ವಿಹಿತಾ ಚಾರುಹಾಸಿನೀ ॥೧೪॥**

ಕುಂತಿಭೋಜನು ಅವಳನ್ನು ತನ್ನ ಮಗಳನ್ನಾಗಿ ಸ್ವೀಕಾರಮಾಡಿದನು. ಅನಂತರ ಸುಂದರವಾದ ಮಂದಹಾಸದಿಂದ ಒಪ್ಪುವ ಅವಳನ್ನು ಕುಂತಿಭೋಜನು ಅಗ್ನಿಹೋತ್ರದ ಮನೆಯಲ್ಲಿ ಜ್ವಲಿಸತಕ್ಕ ಅಗ್ನಿಯ ಸೇವೆಗೋಸ್ಕರ ನಿಯಮಿಸಿದನು.

**ದುರ್ವಾಸಾಸ್ತು ಮುನಿಃ ಪ್ರಾಪ್ತಶ್ಚಾತುರ್ಮಾಸ್ಯೇ ಸ್ಥಿತೋ ದ್ವಿಜಃ ।**
**ಪರಿಚರ್ಯಾ ಕೃತಾ ಕುಂತ್ಯಾ ಮುನಿಸ್ತೋಷಂ ಜಗಾಮ ಹ ॥೧೫॥**

ಚಾತುರ್ಮಾಸ್ಯದ ಸಮಯದಲ್ಲಿ ವ್ರತವನ್ನು ಆಚರಿಸುತ್ತಿದ್ದ ದೂರ್ವಾಸ ಮುನಿಯು ಅಲ್ಲಿಗೆ ಬಂದನು. ಅವನ ಸೇವೆಯನ್ನು ಕುಂತಿಯು ಮಾಡಿದಳು. ಅವಳು ಮಾಡಿದ ಸೇವೆಯಿಂದ ಆ ಮುನಿಯು ಬಹಳ ಸಂತೋಷಪಟ್ಟನು.

**ದದೌ ಮಂತ್ರಂ ಶುಭಂ ತಸ್ಯೈ ಯೇನಾಹೂತಃ ಸುರಃ ಸ್ವಯಂ ।**
**ಸಮಾಯಾತಿ ತಥಾ ಕಾಮಂ ಪೂರಯಿಷ್ಯತಿ ವಾಂಛಿತಂ ॥೧೬॥**

ದೂರ್ವಾಸನು ಅವಳಿಗೆ ಮಂಗಳಕರವಾದ ಮಂತ್ರವನ್ನು ಉಪದೇಶಿಸಿದನು. ಆ ಮಂತ್ರವು ಎಂತಹುದೆಂದರೆ—ಆ ಮಂತ್ರವನ್ನು ಜಪಿಸಿದರೆ ಉದ್ದೇಶಪಟ್ಟ ದೇವತೆಯು ಪ್ರತ್ಯಕ್ಷನಾಗುವನು ಮತ್ತು ಅವಳ ಕೋರಿಕೆಯನ್ನು ಸಲ್ಲಿಸುವನು !

**ಗತೇ ಮುನೌ ತತಃ ಕುಂತೀ ನಿಶ್ಚಯಾರ್ಥಂ ಗೃಹೇ ಸ್ಥಿತಾ ।**
**ಚಿಂತಯಾಮಾಸ ಮನಸಾ ಕಂ ಸುರಂ ಸಮುಚಿಂತಯೇ ॥೧೭॥**

ದೂರ್ವಾಸಮುನಿಯು ಹೊರಟುಹೋದ ಮೇಲೆ ಕುಂತಿಯು ಈ ಮಂತ್ರದಲ್ಲಿ ಸಿದ್ಧಿಯನ್ನುಂಟುಮಾಡುವ ಸಾಮರ್ಥ್ಯವಿದೆ ಎಂಬುದನ್ನು ಪರೀಕ್ಷಿಸಿ ಗೊತ್ತುಮಾಡಿಕೊಳ್ಳಲು ಮನೆಯಲ್ಲೇ ಇದ್ದುಕೊಂಡು ಯಾವ ದೇವನನ್ನು ಧ್ಯಾನಿಸಲಿ ಎಂದು ಮನಸ್ಸಿನಲ್ಲಿ ಯೋಚಿಸಿದಳು.

**ಉದಿತಶ್ಚ ತದಾ ಭಾನುಸ್ತಯಾ ದೃಷ್ಟೋ ದಿವಾಕರಃ ।**
**ಮಂತ್ರೋಚ್ಚಾರಂ ತಥಾ ಕೃತ್ವಾ ಚಾಹೂತಸ್ತಿಗ್ಮಗುಸ್ತದಾ ॥೧೮॥**

ಆ ಸಮಯದಲ್ಲಿ ಸೂರ್ಯನು ಉದಯಿಸಿದನು. ಮತ್ತು ಕುಂತಿಯು ಹಗಲನ್ನುಂಟುಮಾಡುವ ಆ ಸೂರ್ಯನನ್ನು ನೋಡಿದಳು. ಅಲ್ಲದೆ ಆಗ ಅವಳು ಮಂತ್ರವನ್ನು ಉಚ್ಚರಿಸಿ ಆ ಸೂರ್ಯದೇವನನ್ನು ಕರೆದಳು.

**ಮಂಡಲಾನ್ಮಾನುಷಂ ರೂಪಂ ಕೃತ್ವಾ ಸರ್ವಾತಿಪೇಶಲಂ ।**
**ಅವಾತರತ್ತದಾಕಾಶಾತ್ಸಮೀಪೇ ತತ್ರ ಮಂದಿರೇ ॥೧೯॥**

ಆಗ ಸೂರ್ಯನು ಸುಂದರವಾದ ಮನುಷ್ಯರೂಪವನ್ನು ಧರಿಸಿ ಸೂರ್ಯಮಂಡಲದಿಂದ ಹೊರಟು ಆಕಾಶದ ಮಾರ್ಗವಾಗಿ ಇಳಿದು ಮನೆಯಲ್ಲಿ ಅವಳ ಹತ್ತಿರಕ್ಕೆ ಬಂದನು.

**ದೃಷ್ಟ್ವಾ ದೇವಂ ಸಮಾಯಾಂತಂ ಕುಂತೀ ಭಾನುಂ ಸುವಿಸ್ಮಿತಾ ।**
**ವೇಪಮಾನಾ ರಜೋದೋಷಂ ಪ್ರಾಪ್ತಾ ಸದ್ಯಸ್ತು ಭಾಮಿನೀ ॥೨೦॥**

ಕುಂತಿಯು ಕೆಳಕ್ಕೆ ಇಳಿದು ಬರುತ್ತಿರುವ ಸೂರ್ಯದೇವನನ್ನು ನೋಡಿ ಬಹಳ ಆಶ್ಚರ್ಯಪಟ್ಟಳು. ಮತ್ತು ಆ ಕೂಡಲೇ ಋತುಪ್ರಾಪ್ತಿಯ ದೋಷವನ್ನು ಪಡೆದು ಕುಂತಿಯು ನಡುಗುತ್ತಾ ಇದ್ದಳು.

**ಕೃತಾಂಜಲಿಃ ಸ್ಥಿತಾ ಸೂರ್ಯಂ ಬಭಾಷೇ ಚಾರುಲೋಚನಾ ।**
**ಸುಪ್ರೀತಾ ದರ್ಶನೇನಾದ್ಯ ಗಚ್ಛ ತ್ವಂ ನಿಜಮಂಡಲಂ ॥೨೧॥**

ಸುಂದರವಾದ ಕಣ್ಣುಗಳುಳ್ಳ ಆ ಕುಂತಿಯು ಕೈಮುಗಿದುಕೊಂಡು ಸೂರ್ಯ ನನ್ನು ಕುರಿತು ಈ ರೀತಿ ಹೇಳಿದಳು—ಓ ಸೂರ್ಯದೇವನೇ, ನಿನ್ನನ್ನು ನೋಡಿ ನಾನು ಬಹಳ ತೃಪ್ತಿಯನ್ನು ಪಡೆದವಳಾಗಿದ್ದೇನೆ. ಈಗ ನೀನು ನಿನ್ನ ತೇಜೋ ಮಂಡಲಕ್ಕೆ ಹಿಂತಿರುಗಿ ಹೋಗು.

॥ ಸೂರ್ಯ ಉವಾಚ ॥

**ಆಹೂತೋಽಸ್ಮಿ ಕಥಂ ಕುಂತಿ ತ್ವಯಾ ಮಂತ್ರಬಲೇನ ವೈ ।**
**ನ ಮಾಂ ಭಜಸಿ ಕಸ್ಮಾತ್ತ್ವಂ ಸಮಾಹ್ವ(ಹೂ)ಯ ಪುರೋಗತಂ ॥೨೨॥**

ಸೂರ್ಯನು ಕುಂತಿಯನ್ನು ಕುರಿತು ಹೀಗೆ ಹೇಳಿದನು—ಓ ಕುಂತಿಯೇ, ನೀನು ಮಂತ್ರದ ಸಾಮರ್ಥ್ಯದಿಂದ ನನ್ನನ್ನು ಕರೆದಿರುತ್ತೀಯೆ. ಕರೆದು ನಿನ್ನ ಮುಂದ ಬಂದಿರತಕ್ಕ ನನ್ನನ್ನು ಏಕೆ ಹೊಂದುವುದಿಲ್ಲ?

**ಕಾಮಾರ್ತೋಽಸ್ಮ್ಯಸಿತಾಪಾಂಗಿ ಭಜ ಮಾಂ ಭಾವಸಂಯುತಂ ।**
**ಮಂತ್ರೇಣಾಧೀನತಾಂ ಪ್ರಾಪ್ತಂ ಕ್ರೀಡಿತುಂ ನಯ ಮಾಮಿತಿ ॥೨೩॥**

ಎಲೈ ಕಪ್ಪಾದ ಕಡೆಗಣ್ಣನೋಟಗಳುಳ್ಳ ಕುಂತಿಯೇ, ನಾನು ನಿನ್ನನ್ನು ನೋಡಿ ಕಾಮಪೀಡಿತನಾಗಿದ್ದೇನೆ. ಆದುದರಿಂದ ಶೃಂಗಾರಭಾವದಿಂದ ಕೂಡಿದ ನನ್ನನ್ನು ಹೊಂದು. ಮಂತ್ರದಿಂದ ನಿನ್ನ ಅಧೀನನಾದ ನನ್ನನ್ನು ಕ್ರೀಡಿಸಲು ಕರೆದುಕೊಂಡುಹೋಗು. ಎಂದು ಸೂರ್ಯನು ಹೇಳಿದನು.

|| ಕುಂತ್ಯುವಾಚ ||

**ಕನ್ಯಾಸ್ಮ್ಯಹಂ ತು ಧರ್ಮಜ್ಞ ಸರ್ವಸಾಕ್ಷಿನ್ನಮಾಮ್ಯಹಂ ।**
**ತವಾಪ್ಯಹಂ ನ ದುರ್ವಾಚ್ಯಾ ಕುಲಕನ್ಯಾಸ್ಮಿ ಸುವ್ರತ ॥೨೪॥**

ಕುಂತಿಯು ಸೂರ್ಯನನ್ನು ಹೀಗೆ ಬೇಡಿದಳು—ಎಲೈ ಧರ್ಮವನ್ನು ತಿಳಿದಿರ ತಕ್ಕ ಮತ್ತು ಎಲ್ಲವನ್ನು ನೋಡತಕ್ಕ ಸೂರ್ಯದೇವನೇ, ನಾನು ಇನ್ನೂ ಚಿಕ್ಕವಳಾಗಿ ಕನ್ಯಾವಸ್ಥೆಯಲ್ಲಿ ಇದ್ದೇನೆ. ನಾನು ನಿನ್ನನ್ನು ನಮಸ್ಕರಿಸುತ್ತೇನೆ. ಎಲೈ ಆಚಾರವಂತನಾದ ಸೂರ್ಯನೇ, ನಿನಗೂ ಕೂಡ ನಾನು ನಿಂದಿಸಲು ಅರ್ಹಳಲ್ಲವು. ಏಕೆಂದರೆ ನಾನು ಸತ್ಕುಲಪ್ರಸೂತಳಾದ ಕನ್ನಿಕೆಯಾಗಿದ್ದೇನೆ.

|| ಸೂರ್ಯ ಉವಾಚ ||

**ಲಜ್ಜಾ ಮೇ ಮಹತೀ ಚಾದ್ಯ ಯದಿ ಗಚ್ಛಾಮ್ಯಹಂ ವೃಥಾ ।**
**ವಾಚ್ಯತಾಂ ಸರ್ವದೇವಾನಾಂ ಯಾಸ್ಯಾಮ್ಯತ್ರ ನ ಸಂಶಯಃ ॥೨೫॥**

ಸೂರ್ಯನು ಹೇಳಿದನು—ಪ್ರಯೋಜನವು ನೆರವೇರದೆ ನಾನು ಈಗ ಹಿಂತಿರುಗಿ ಹೋದರೆ ನನಗೆ ಬಹಳ ಅವಮಾನವೂ, ನಾಚಿಕೆಯೂ ಆಗುವುದು. ಅಲ್ಲದೆ, ಎಲ್ಲ ದೇವತೆಗಳ ದೂಷಣೆಗಳಿಗೆ ನಾನು ಗುರಿಯಾಗುವೆನು. ಈ ಅಂಶದಲ್ಲಿ ಸಂದೇಹವಿಲ್ಲ.

**ಶಪ್ಸ್ಯಾಮಿ ತಂ ದ್ವಿಜಂ ಚಾದ್ಯ ಯೇನ ಮಂತ್ರಃ ಸಮರ್ಪಿತಃ ।**
**ತ್ವಾಂ ಚಾಪಿ ಸುಭೃಶಂ ಕುಂತಿ ನೋ ಚೇನ್ಮಾಂ ತ್ವಂ ಭಜಿಷ್ಯಸಿ॥೨೬॥**

ಓ ಕುಂತಿಯೇ, ನೀನು ಈಗ ನನ್ನನ್ನು ಹೊಂದದಿದ್ದರೆ ಯಾವ ಬ್ರಾಹ್ಮಣನು ನಿನಗೆ ಈ ಮಂತ್ರವನ್ನು ಉಪದೇಶಮಾಡಿಕೊಟ್ಟನೋ ಅವನಿಗೂ ಮತ್ತು ನಿನಗೂ ಹೆಚ್ಚಾಗಿ ಶಾಪವನ್ನು ಕೊಡುತ್ತೇನೆ.

**ಕನ್ಯಾಧರ್ಮಃ ಸ್ಥಿರಸ್ತೇ ಸ್ಯಾನ್ನ ಜ್ಞಾಸ್ಯಂತಿ ಜನಾಃ ಕಿಲ ।**
**ಮತ್ಸಮಸ್ತು ತಥಾ ಪುತ್ರೋ ಭವಿತಾ ತೇ ವರಾನನೇ ॥೨೭॥**

ನಿನ್ನನ್ನು ನಾನು ಅನುಭವಿಸಿದರೂ, ಆ ಮೇಲೆ ನನ್ನ ಅನುಗ್ರಹದಿಂದ ನಿನ್ನ ಕನ್ಯಾಧರ್ಮವು ನಾಶವಾಗುವುದಿಲ್ಲ. ಅಲ್ಲದೆ, ಜನರೂ ಈ ವಿಷಯವನ್ನು ತಿಳಿಯು

ವುದಿಲ್ಲ. ಓ ಸುಂದರವಾದ ಮುಖವುಳ್ಳ ಕುಂತಿಯೇ, ನಿನಗೆ ನನ್ನ ಸಮಾನನಾದ ಮಗನು ಹುಟ್ಟುವನು.

**ಇತ್ಯುಕ್ತ್ವಾ ತರಣಿಃ ಕುಂತೀಂ ತನ್ಮನಸ್ಕಾಂ ಸುಲಜ್ಜಿತಾಂ ।**
**ಭುಕ್ತ್ವಾ ಜಗಾಮ ದೇವೇಶೋ ವರಂ ದತ್ವಾತಿವಾಂಛಿತಂ ॥೨೮॥**

ಈ ರೀತಿಯಾಗಿ ಹೇಳಿ ಸೂರ್ಯನು ಅವನಲ್ಲೇ ಮನಸ್ಸನ್ನಿಟ್ಟಿದ್ದ ಮತ್ತು ನಾಚಿಕೆಯಿಂದ ಕೂಡಿದ ಕುಂತಿಯನ್ನು ಭೋಗಿಸಿದನು. ಅನಂತರದಲ್ಲಿ ದೇವತೆಗಳಲ್ಲಿ ಶ್ರೇಷ್ಠನಾದ ಆ ಸೂರ್ಯನು ಅವಳಿಗೆ ತುಂಬ ಇಷ್ಟವಾದ ವರವನ್ನು ಕೊಟ್ಟು ಹೊರಟುಹೋದನು.

**ಗರ್ಭಂ ದಧಾರ ಸುಶ್ರೋಣೀ ಸುಗುಪ್ತೇ ಮಂದಿರೇ ಸ್ಥಿತಾ ।**
**ಧಾತ್ರೀ ವೇದ ಪ್ರಿಯಾ ಚೈಕಾ ನ ಮಾತಾ ನ ಜನಸ್ತಥಾ ॥೨೯॥**

ಅನಂತರದಲ್ಲಿ ಸುಂದರವಾದ ನಡುವುಳ್ಳ ಕುಂತಿಯು ಗರ್ಭವನ್ನು ಧರಿಸಿ ಗುಟ್ಟಾದ ಒಂದು ಮನೆಯಲ್ಲಿದ್ದಳು. ಈ ವಿಷಯವನ್ನು ಸಾಕುತಾಯಿಯಾದ ಪ್ರೀತಿಯ ದಾದಿಯೊಬ್ಬಳು ತಿಳಿದಿದ್ದಳಲ್ಲದೆ, ತಾಯಿಯಾಗಲೀ ಜನರಾಗಲೀ ತಿಳಿದಿರಲಿಲ್ಲ.

**ಗುಪ್ತೇ ಸದ್ಮನಿ ಪುತ್ರಸ್ತು ಜಾತಶ್ಚಾತಿಮನೋಹರಃ ।**
**ಕವಚೇನಾತಿರಮ್ಯೇಣ ಕುಂಡಲಾಭ್ಯಾಂ ಸಮನ್ವಿತಃ ॥೩೦॥**

ಗುಟ್ಟಾದ ಆ ಮನೆಯಲ್ಲಿ ಅತ್ಯಂತ ಮನೋಹರವಾದ ಕವಚದಿಂದ ರಕ್ಷಿಸಲ್ಪಟ್ಟಿದ್ದ ಕುಂಡಲಗಳಿಂದಲೂ ಕೂಡಿ ಅತಿ ಸುಂದರನಾದ ಮಗನು ಹುಟ್ಟಿದನು.

**ದ್ವಿತೀಯ ಇವ ಸೂರ್ಯಸ್ತು ಕುಮಾರ ಇವ ಚಾಪರಃ ।**
**ಕರೇ ಕೃತ್ವಾಥ ಧಾತ್ರೇಯೀ ತಾಮುವಾಚ ಸುಲಜ್ಜಿತಾಂ ॥೩೧॥**

ಆಮೇಲೆ ಸಾಕು ತಾಯಿಯು ಎರಡನೆಯ ಸೂರ್ಯನಂತೆಯೂ, ಮತ್ತೊಬ್ಬ ಷಣ್ಮುಖನಂತೆಯೂ, ಇರತಕ್ಕ ಆ ಮಗುವನ್ನು ಕೈಯ್ಯಲ್ಲಿ ತೆಗೆದುಕೊಂಡು, ನಾಚಿಕೆಯಿಂದ ಕೂಡಿದ ಆ ಕುಂತಿಯನ್ನು ಕುರಿತು ಹೀಗೆ ಹೇಳಿದಳು.

**ಕಾಂ ಚಿಂತಾಂ ಕರಭೋರು ತ್ವಮಾಧಸ್ಸೇಽದ್ಯ ಸ್ಥಿತಾಽಸ್ಮ್ಯಹಂ ।**
**ಮಂಜೂಷಾಯಾಂ ಸುತಂ ಕುಂತೀ ಮುಂಚಂತೀ ವಾಕ್ಯಮಬ್ರವೀತ್ ॥೩೨॥**

ಎಲೈ ಆನೆಯ ಸೊಂಡಲಿನಂತಿರುವ ತೊಡೆಗಳುಳ್ಳ ಕುಂತಿಯೇ, ನೀನು ಮನಸ್ಸಿನಲ್ಲಿ ಯಾವ ಯೋಚನೆ ಮತ್ತು ಆತಂಕವನ್ನು ಪಡೆದಿರುವೆ? ಯಾವ ಕೆಲಸಕ್ಕೂ ನಿನಗೆ ನೆರವಾಗಿ ಈಗ ನಾನಿದ್ದೇನೆ. ಈ ಮಾತನ್ನು ಕೇಳಿ ಕುಂತಿಯು ಶಿಶುವನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಬಿಡುತ್ತಾ ಮುಂದೆ ಸೂಚಿಸಿರುವ ಮಾತನ್ನು ಹೇಳಿದಳು.

**ಕಿಂ ಕರೋಮಿ ಸುತಾರ್ತಾಹಂ ತ್ಯಜೇ ತ್ವಾಂ ಪ್ರಾಣವಲ್ಲಭಂ ।**
**ಮಂದಭಾಗ್ಯಾ ತ್ಯಜಾಮಿ ತ್ವಾಂ ಸರ್ವಲಕ್ಷಣಸಂಯುತಂ ॥೩೩॥**

ಓ ಮಗನೇ, ನಾನು ಏನನ್ನು ಮಾಡಲಿ? ನಾನು ಮಗನನ್ನು ಪಡೆಯಲು ಆತ್ಯಾಶೆಯಿಂದ ಸಂಕಟಕ್ಕೆ ಒಳಗಾಗಿದ್ದೇನೆ. ಭಾಗ್ಯಹೀನಳಾದ ನಾನು ಪ್ರಾಣಪ್ರಿಯನಾದ ಮತ್ತು ಎಲ್ಲ ಲಕ್ಷಣಗಳಿಂದ ಕೂಡಿದ ನಿನ್ನನ್ನು ಬಿಡುತ್ತಲಿದ್ದೇನೆ.

**ಪಾತು ತ್ವಾಂ ಸಗುಣಾಗುಣಾ ಭಗವತೀ ಸರ್ವೇಶ್ವರೀ ಚಾಂಬಿಕಾ**
**ಸ್ತನ್ಯಂ ಸೈವ ದದಾತು ವಿಶ್ವಜನನೀ ಕಾತ್ಯಾಯನೀ ಕಾಮದಾ ।**
**ದ್ರಕ್ಷ್ಯೇಽಹಂ ಮುಖಪಂಕಜಂ ಸುಲಲಿತಂ ಪ್ರಾಣಪ್ರಿಯಾರ್ಹಂ ಕದಾ**
**ತ್ಯಕ್ತ್ವಾ ತ್ವಾಂ ವಿಜನೇ ವನೇ ರವಿಸುತಂ ದುಷ್ಟಾ ಯಥಾ ಸ್ವೈರಿಣೀ ॥೩೪॥**

ಓ ಮಗನೇ, ವ್ಯಾವಹಾರಿಕದೆಶೆಯಲ್ಲಿ ಎಲ್ಲ ಗುಣಗಳಿಂದಲೂ ಕೂಡಿರುವ ಮತ್ತು ಪಾರಮಾರ್ಥಿಕ ಸ್ವರೂಪದಲ್ಲಿ ಗುಣರಹಿತಳಾದ ಪೂಜ್ಯಳಾದ ಮತ್ತು ಎಲ್ಲರಿಗೂ ಒಡೆಯಳಾದ ಆ ಜಗನ್ಮಾತೆಯು ನಿನ್ನನ್ನು ಕಾಪಾಡಲಿ. ಜಗತ್ತಿಗೇ ತಾಯಿಯಾದ, ಇಷ್ಟಾರ್ಥವನ್ನು ನೀಡತಕ್ಕ ಆ ಕಾತ್ಯಾಯನಿಯೇ ನಿನಗೆ ಮೊಲೆಹಾಲನ್ನು ಕುಡಿಸಲಿ. ಯಾವ ರೀತಿಯಲ್ಲಿ ದುಷ್ಟಳಾದ ವ್ಯಭಿಚಾರಿಣಿಯಾದ ಸ್ತ್ರೀಯು ಶಿಶುವನ್ನು ಜನರಹಿತವಾದ ಕಾಡಿನಲ್ಲಿ ಬಿಡುತ್ತಾಳೆಯೋ ಅದರಂತೆಯೇ ನಾನು ಪ್ರಾಣಕ್ಕೆ ಸಮಾನನಾದ ಮತ್ತು ಸೂರ್ಯನ ಮಗನಾದ ನಿನ್ನನ್ನು ಬಿಡುತ್ತಿದ್ದೇನೆ. ಹಾ ಮಗನೇ! ಸುಂದರವಾದ ನಿನ್ನ ಮುಖಕಮಲವನ್ನು ತಿರುಗಿ ಎಂದು ನೋಡಿಯೇನು!

**ಪೂರ್ವಸ್ಮಿನ್ನಪಿ ಜನ್ಮನಿ ತ್ರಿಜಗತಾಂ ಮಾತಾ ನ ಚಾರಾಧಿತಾ**
**ನ ಧ್ಯಾತಂ ಪದಪಂಕಜಂ ಸುಖಕರಂ ದೇವ್ಯಾಃ ಶಿವಾಯಾಶ್ಚಿರಂ ।**

**ತೇನಾಹಂ ಸುತ ದುರ್ಭಗಾಸ್ಮಿ ಸತತಂ ತ್ಯಕ್ತ್ವಾ ಪುನಸ್ತ್ವಾಂ ವನೇ**
**ತಪ್ಸ್ಯಾಮಿ ಪ್ರಿಯ ಪಾತಕಂ ಸ್ಮೃತವತೀ ಬುದ್ಧ್ಯಾ ಕೃತಂ ಯತ್ಸ್ವಯಂ ॥**

ಹಿಂದಿನ ಜನ್ಮದಲ್ಲಿಯೂ ಸಹ ಮೂರು ಲೋಕಕ್ಕೆ ತಾಯಿಯಾದ ದೇವಿಯನ್ನು ನಾನು ಪೂಜಿಸಲಿಲ್ಲ. ಮತ್ತು ಮಂಗಳವನ್ನುಂಟುಮಾಡತಕ್ಕ ದೇವಿಯ ಸುಖವನ್ನುಂಟುಮಾಡತಕ್ಕ ಪಾದಕಮಲವನ್ನು ದೀರ್ಘಕಾಲದವರೆಗೆ ಧ್ಯಾನಿಸಲಿಲ್ಲ. ಆದುದರಿಂದ ಎಲೈ ಪ್ರೀತಿಯ ಮಗನೇ, ನಾನು ಭಾಗ್ಯಶೂನ್ಯಳಾಗಿದ್ದೇನೆ. ನಿನ್ನನ್ನು ಬಿಟ್ಟು, ನಾನೇ ಸ್ವತಂತ್ರಿಸಿ ಮಾಡಿದ ಈ ಪಾಪವನ್ನು ನೆನಸುತ್ತಾ ಕಾಡಿನಲ್ಲಿ ಯಾವಾಗಲೂ ಪಶ್ಚಾತ್ತಾಪಪಡುತ್ತಾ ತಪಸ್ಸನ್ನು ಮಾಡುವೆನು.

॥ ಸೂತ ಉವಾಚ ॥

**ಇತ್ಯುಕ್ತ್ವಾ ತಂ ಸುತಂ ಕುಂತೀ ಮಂಜೂಷಾಯಾಂ ಧೃತಂ ಕಿಲ ।**
**ಧಾತ್ರೀಹಸ್ತೇ ದದೌ ಭೀತಾ ಜನದರ್ಶನತಸ್ತಥಾ ॥೩೬॥**

ಈ ರೀತಿಯಾಗಿ ಹೇಳಿ ಕುಂತಿಯು, ಜನರು ನೋಡಿಯಾರೆಂದು ಹೆದರಿದವಳಾಗಿ, ಪೆಟ್ಟಿಗೆಯಲ್ಲಿರತಕ್ಕ ಆ ಮಗುವನ್ನು ಆ ಸಾಕುತಾಯಿಯ ಕೈಯಲ್ಲಿ, ಗಂಗೆಯಲ್ಲಿ ಬಿಡುವುದಕ್ಕೋಸ್ಕರ ಕೊಟ್ಟಳು.

**ಸ್ನಾತ್ವಾ ತ್ರಸ್ತಾ ತದಾ ಕುಂತೀ ಪಿತೃವೇಶ್ಮನ್ಯುವಾಸ ಸಾ ।**
**ಮಂಜೂಷಾ ವಹಮಾನಾ ಚ ಪ್ರಾಪ್ತಾ ಹ್ಯಧಿರಥೇನ ವೈ ॥೩೭॥**

ಅನಂತರದಲ್ಲಿ ಕುಂತಿಯು ಸ್ನಾನಮಾಡಿ, ಹೆದರಿಕೆಯಿಂದ ಕೂಡಿದವಳಾಗಿ ತಂದೆಯ ಮನೆಯಲ್ಲಿ ವಾಸಮಾಡುತ್ತಿದ್ದಳು. ಆ ತೊಟ್ಟಿಲೂ ಸಹ ನದಿಯಲ್ಲಿ ತೇಲಿ ಹೋಗುತ್ತಾ, ಅಧಿರಥನೆಂಬ ಬೆಸ್ತನಿಗೆ ಸಿಕ್ಕಿತು.

**ರಾಧಾ ಸೂತಸ್ಯ ಭಾರ್ಯಾ ವೈ ತಯಾಸೌ ಪ್ರಾರ್ಥಿತಃ ಸುತಃ ।**
**ಕರ್ಣೋಽಭೂದ್ಬಲವಾನ್ವೀರಃ ಪಾಲಿತಃ ಸೂತಸದ್ಮನಿ ॥೩೮॥**

ಆ ಬೆಸ್ತರವನಿಗೆ ರಾಧೆಯೆಂಬ ಹೆಂಡತಿ ಇದ್ದಳು. ಅವಳು ಈ ಮಗುವನ್ನು ಅಪೇಕ್ಷಿಸಿದಳು. ಆ ಮೇಲೆ ಕರ್ಣನು ಬಹಳ ಬಲಶಾಲಿಯೂ, ವೀರನೂ ಆಗುತ್ತಾ ರಾಧೇಯನೂ ಕರ್ಣನೂ ಆಗಿ ಬೆಸ್ತರವನ ಮನೆಯಲ್ಲಿ ಬೆಳೆಯುತ್ತಿದ್ದನು.

**ಕುಂತೀ ವಿವಾಹಿತಾ ಕನ್ಯಾ ಪಾಂಡುನಾ ಸಾ ಸ್ವಯಂವರೇ ।**
**ಮಾದ್ರೀ ಚೈವಾಪರಾ ಭಾರ್ಯಾ ಮದ್ರರಾಜಸುತಾ ಶುಭಾ ॥೩೯॥**

ಆ ಕನ್ನಿಕೆಯಾದ ಕುಂತಿಯನ್ನು ಸ್ವಯಂವರದಲ್ಲಿ ಪಾಂಡುರಾಜನು ಮದುವೆಯಾದನು. ಪಾಂಡುರಾಜನು ಭಾಗ್ಯಶೀಲಳಾದ ಮತ್ತು ಮದ್ರದೇಶದ ರಾಜನ ಮಗಳಾದ ಮಾದ್ರೀ ಎಂಬ ಇನ್ನೊಬ್ಬಳು ಹೆಂಡತಿಯನ್ನೂ ಮದುವೆಯಾದನು.

**ಮೃಗಯಾ ರಮಮಾಣಸ್ತು ವನೇ ಪಾಂಡುರ್ಮಹಾಬಲಃ ।**
**ಜಘಾನ ಮೃಗಬುದ್ಧ್ಯಾ ತು ರಮಮಾಣಂ ಮುನಿಂ ವನೇ ॥೪೦॥**

ತುಂಬ ಪರಾಕ್ರಮಶಾಲಿಯಾದ ಆ ಪಾಂಡುರಾಜನು ಕಾಡಿನಲ್ಲಿ ಬೇಟೆಯಲ್ಲಿ ವಿಹಾರಮಾಡುತ್ತಾ, ಹುಲ್ಲೇಕರುವೆಂಬ ಭ್ರಾಂತಿಯಿಂದ ಕ್ರೀಡಿಸುತ್ತಿರುವ ಒಬ್ಬ ಮುನಿಯನ್ನು ಬಾಣದಿಂದ ಹೊಡೆದನು.

**ಶಪ್ತಸ್ತೇನ ತದಾ ಪಾಂಡುರ್ಮುನಿನಾ ಕುಪಿತೇನ ಚ ।**
**ಸ್ತ್ರೀಸಂಗಂ ಯದಿ ಕರ್ತಾಸಿ ತದಾ ತೇ ಮರಣಂ ಧ್ರುವಂ ॥೪೧॥**

ಆಗ ಕೋಪಗೊಂಡ ಆ ಮುನಿಯು, ಪಾಂಡುವನ್ನು ಕುರಿತು—ನೀನು ಯಾವಾಗ ಸ್ತ್ರೀಸಂಗವನ್ನು ಮಾಡುವೆಯೋ ಆಗ ನಿನಗೆ ಸಾವು ನಿಶ್ಚಯವಾಗಿಯೂ ಉಂಟಾಗುವುದು ಎಂದು ಶಪಿಸಿದನು.

**ಇತಿ ಶಪ್ತಸ್ತು ಮುನಿನಾ ಪಾಂಡುಃ ಶೋಕಸಮನ್ವಿತಃ ।**
**ತ್ಯಕ್ತ್ವಾ ರಾಜ್ಯಂ ವನೇ ವಾಸಂ ಚಕಾರ ಭೃಶದುಃಖಿತಃ ॥೪೨॥**

ಈ ರೀತಿಯಾಗಿ ಮುನಿಯಿಂದ ಶಾಪವನ್ನು ಹೊಂದಿದ ಪಾಂಡುವು ದುಃಖಿತನಾಗಿ ರಾಜ್ಯವನ್ನು ಬಿಟ್ಟು ಬಹಳ ಶೋಕದಿಂದ ಕೂಡಿದವನಾಗಿ ಕಾಡಿನಲ್ಲಿ ವಾಸಮಾಡುತ್ತಿದ್ದನು.

**ಕುಂತೀ ಮಾದ್ರೀ ಚ ಭಾರ್ಯೇ ದ್ವೇ ಜಗ್ಮತುಃ ಸಹ ಸಂಗತೇ ।**
**ಸೇವನಾರ್ಥಂ ಸತೀಧರ್ಮಸಂಶ್ರಿತೇ ಮುನಿಸತ್ತಮಾಃ ॥೪೩॥**

ಎಲೈ ಮುನಿಶ್ರೇಷ್ಠರಾದವರೇ, ಅವನ ಪತ್ನಿಯರಾದ ಕುಂತೀ, ಮಾದ್ರಿಯರೂ ಕೂಡ ಪಾತಿವ್ರತ್ಯಧರ್ಮವನ್ನು ಅವಲಂಬಿಸಿದವರಾಗಿ ಪತಿಯನ್ನು ಸೇವಿಸಲು ಅವನೊಡನೆ ವನಕ್ಕೆ ಹೋದರು.

**ಗಂಗಾತೀರೇ ಸ್ಥಿತಃ ಪಾಂಡುರ್ಮುನೀನಾಮಾಶ್ರಮೇಷು ಚ ।**
**ಶೃಣ್ವಾನೋ ಧರ್ಮಶಾಸ್ತ್ರಾಣಿ ಚಕಾರ ದುಶ್ಚರಂ ತಪಃ ॥೪೪॥**

ಪಾಂಡುವು ಗಂಗಾತೀರದಲ್ಲಿ ಮುನಿಗಳ ಆಶ್ರಮಗಳ ಪ್ರದೇಶದಲ್ಲಿ ವಾಸ ಮಾಡುತ್ತಾ ಧರ್ಮಶಾಸ್ತ್ರಗಳನ್ನು ಶ್ರವಣಮಾಡುತ್ತಾ ಕಠಿನವಾದ ತಪಸ್ಸನ್ನು ಆಚ. ರಿಸುತ್ತಿದ್ದನು.

**ಕಥಾಯಾಂ ವರ್ತಮಾನಾಯಾಂ ಕದಾಚಿದ್ಧರ್ಮಸಂಶ್ರಿತಂ ।**
**ಅಶೃಣೋದ್ವಚನಂ ರಾಜಾ ಸುಪುಷ್ಟಂ ಮುನಿಭಾಷಿತಂ ॥೪೫॥**

ಒಂದು ದಿನ ಕಥಾಪ್ರಸಂಗದಲ್ಲಿ ಧರ್ಮಸಂಬಂಧವಾದ ಒಂದು ಪ್ರಶ್ನೆಗೆ ಉತ್ತರವಾಗಿ ಸೂತಮುನಿಯು ಹೇಳಿದ ಈ ಮಾತನ್ನು ರಾಜನು ಕೇಳಿದನು.

**ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೇ ಗಂತುಂ ಪರಂತಪ ।**
**ಯೇನ ಕೇನಾಪ್ಯುಪಾಯೇನ ಪುತ್ರಸ್ಯ ಜನನಂ ಚರೇತ್ ॥೪೬॥**

ಎಲೈ ಶತ್ರುಗಳನ್ನು ಜಯಿಸತಕ್ಕ ಪಾಂಡುವೇ, ಮಕ್ಕಳಿಲ್ಲದವರಿಗೆ ಸ್ವರ್ಗಕ್ಕೆ ಹೋಗಲು ದಾರಿಯಿಲ್ಲವು. ಆದುದರಿಂದ ಯಾವರೀತಿಯಿಂದಲಾದರೂ ಮಗನು ಹುಟ್ಟುವ ಕಾರ್ಯಸಾಧನೆಯನ್ನು ಮಾಡಬೇಕು.

**ಅಂಶಜಃ ಪುತ್ರಿಕಾಪುತ್ರಃ ಕ್ಷೇತ್ರಜೋ ಗೋಲಕಸ್ತಥಾ ।**
**ಕುಂಡಃ ಸಹೋಢಃ ಕಾನೀನಃ ಕ್ರೀತಃ ಪ್ರಾಪ್ತಸ್ತಥಾ ವನೇ ॥೪೭॥**

ಮಕ್ಕಳು ಅನೇಕವಿಧವಾಗಿದ್ದಾರೆ. ಹೇಗೆಂದರೆ—ತನ್ನ ವೀರ್ಯದಿಂದ ಹುಟ್ಟಿದ ವನು ಅಂಶಜನು, ಇವನನ್ನೇ ಔರಸಪುತ್ರನೆನ್ನುತ್ತಾರೆ! ತನ್ನ ಮಗಳ ಮಗನು, ಪುತ್ರಿಕಾಪುತ್ರನು; ತನ್ನ ಅಪ್ಪಣೆಯಿಂದ ತನ್ನ ಹೆಂಡತಿಯಲ್ಲಿ ಇತರ ಪುರುಷನಿಂದ ಹುಟ್ಟಿದವನು, ಕ್ಷೇತ್ರಜನು; ಗಂಡನು ಸತ್ತನಂತರ ಹುಟ್ಟುವವನು ಗೋಲಕನು; ಗಂಡನು ಜೀವಿಸಿರುವಾಗಲೇ ಅವನ ಅನುಮತಿಯಿಲ್ಲದೆ ಬೇರೊಬ್ಬ ಪುರುಷನಿಂದ ಹುಟ್ಟಿದವನು, ಕುಂಡನು; ಗರ್ಭಿಣಿಯಾಗಿರುವಾಗಲೇ ಮದುವೆಮಾಡಿಕೊಂಡು ಅವಳಲ್ಲಿ ಹುಟ್ಟಿದವನು, ಸಹೋಢಪುತ್ರನು; ತಂದೆಯ ಮನೆಯಲ್ಲಿ ಹುಡುಗಿಯು ಕನ್ನಿಕೆಯಾಗಿರುವಾಗ ಹುಟ್ಟಿದವನು, ಕಾನೀನನು; ಹಣಕೊಟ್ಟು ಕೊಂಡುಕೊಂಡ

ವನು ಕ್ರೀತನು; ಮತ್ತು ಕಾಡಿನಲ್ಲಿ ಸಿಕ್ಕಿದವನು; ಇವರೆಲ್ಲರೂ ಮಕ್ಕಳೆನಿಸಿ ಕೊಳ್ಳುತ್ತಾರೆ.

**ದತ್ತಃ ಕೇನಾಪಿ ಚಾಶಕ್ತೌ ಧನಗ್ರಾಹಿ ಸುತಾಃ ಸ್ಮೃತಾಃ ।**
**ಉತ್ತರೋತ್ತರತಃ ಪುತ್ರಾ ನಿಕೃಷ್ಟಾ ಇತಿ ನಿಶ್ಚಯಃ ॥೪೮॥**

ಮತ್ತು ಯಾರಿಂದಲಾದರೂ ಮಗನನ್ನು ಕಾಪಾಡಲು ಅಸಮರ್ಥನಾದವ ನಿಂದ ಕೊಡಲ್ಪಟ್ಟವನು, ದತ್ತನು. ಹೀಗೆ ಹತ್ತು ಬಗೆಯ ಮಕ್ಕಳಾದ ಇವರೆಲ್ಲರೂ ತಂದೆಯ ಆಸ್ತಿಗೆ ಉತ್ತರಾಧಿಕಾರಿಗಳಾಗುತ್ತಾರೆ. ಇವರಲ್ಲಿ ಕ್ರಮವಾಗಿ ಮೊದಲನೆಯ ವರು ಎರಡನೆಯವರಿಗಿಂತ ಶ್ರೇಷ್ಠರೂ, ಬರಬರುತ್ತ ಕಡೆಕಡೆಯವರು ಅಪಕೃಷ್ಟರೂ ಆಗಿರುತ್ತಾರೆ. ಎಂದು ಧರ್ಮಶಾಸ್ತ್ರದಲ್ಲಿ ಗೊತ್ತುಮಾಡಿದೆ.

**ಇತ್ಯಾಕರ್ಣ್ಯ ತದಾ ಪ್ರಾಹ ಕುಂತೀಂ ಕಮಲಲೋಚನಾಂ ।**
**ಸುತಮುತ್ಪಾದಯಾಶು ತ್ವಂ ಮುನಿಂ ಗತ್ವಾ ತಪೋನ್ವಿತಂ ॥೪೯॥**

ಸೂತಮುನಿಯ ಈ ಮಾತುಗಳನ್ನು ಕೇಳಿ ರಾಜನು ಕಮಲದಂತಿರುವ ಕಣ್ಣುಗಳುಳ್ಳ ಕುಂತಿಯನ್ನು ಕುರಿತು ಇಂತೆಂದನು—ಓ ಕುಂತಿಯೇ, ನೀನು ಬೇಗನೆ ತಪಸ್ಸಿನಿಂದ ಕೂಡಿದ ಮುನಿಯನ್ನು ಪಡೆದು ಮಗನನ್ನು ಪ್ರಸವಿಸು.

**ಮಮಾಜ್ಞಯಾ ನ ದೋಷಸ್ತೇ ಪುರಾ ರಾಜ್ಞಾ ಮಹಾತ್ಮನಾ ।**
**ವಸಿಷ್ಠಾಜ್ಜನಿತಃ ಪುತ್ರಃ ಸೌದಾಸೇನೇತಿ ಮೇ ಶ್ರುತಂ ॥೫೦॥**

ನನ್ನ ಅನುಮತಿಯನ್ನನುಸರಿಸಿ ನೀನು ಈ ಕೆಲಸಮಾಡುವುದರಿಂದ ನಿನಗೆ ಈ ವಿಷಯದಲ್ಲಿ ದೋಷವು ಬರಲಾರದು. ಏಕೆಂದರೆ, ಪೂರ್ವಕಾಲದಲ್ಲಿಯೂ ಮಹಾತ್ಮನಾದ ಸೌದಾಸ (ಸುದಾಸನ ಮಗ)ನೆಂಬ ರಾಜನು ವಸಿಷ್ಠಮಹರ್ಷಿಯ ಸಹಾಯದಿಂದ ಮಗನನ್ನು ಪಡೆದನೆಂದು ಐತಿಹ್ಯವನ್ನು ನಾನು ಕೇಳಿದ್ದೇನೆ.

**ತಂ ಕುಂತೀ ವಚನಂ ಪ್ರಾಹ ಮಮ ಮಂತ್ರೋಽಸ್ತಿ ಕಾಮದಃ ।**
**ದತ್ತೋ ದೂರ್ವಾಸಸಾ ಪೂರ್ವಂ ಸಿದ್ಧಿದಃ ಸರ್ವಥಾ ಪ್ರಭೋ ॥೫೧॥**

ಆಗ ಪಾಂಡುವನ್ನು ಕುರಿತು ಕುಂತಿಯು ಹೇಳಿದಳು—ಓ ಪ್ರಭುವೇ, ಪೂರ್ವದಲ್ಲಿ ದೂರ್ವಾಸಋಷಿಯಿಂದ ನನಗೆ ಉಪದೇಶಮೂಲಕವಾಗಿ ಕೊಡಲ್ಪಟ್ಟ,

ತಪ್ಪದೆ ಫಲಸಿದ್ಧಿಯನ್ನುಂಟುಮಾಡುವ, ಎಲ್ಲ ಇಷ್ಟಾರ್ಥವನ್ನು ಕೊಡತಕ್ಕ, ಮಂತ್ರವು ನನ್ನಲ್ಲಿದೆ.

**ನಿಮಂತ್ರಯೇಽಹಂ ಯಂ ದೇವಂ ಮಂತ್ರೇಣಾನೇನ ಪಾರ್ಥಿವ ।**
**ಆಗಚ್ಛೇತ್ಸರ್ವಥಾ ಸೋ ವೈ ಮಮ ಪಾರ್ಶ್ವೇ ನಿಯಂತ್ರಿತಃ ॥೫೨॥**

ಓ ರಾಜನೇ, ನಾನು ಈ ಮಂತ್ರದಿಂದ ಯಾವ ದೇವನನ್ನು ಪ್ರಾರ್ಥಿಸಿ ಕರೆಯುವೆನೋ ಅವನು ಮಂತ್ರದ ಪ್ರಭಾವದಿಂದ ನಿಯಮಿಸಲ್ಪಟ್ಟನಾಗಿ ನನ್ನ ಸಮೀಪಕ್ಕೆ ನಿಶ್ಚಯವಾಗಿ ಬರುವನು.

**ಭರ್ತುರ್ವಾಕ್ಯೇನ ಸಾ ತತ್ರ ಸ್ಮೃತ್ವಾ ಧರ್ಮಂ ಸುರೋತ್ತಮಂ ।**
**ಸಂಗಮ್ಯ ಸುಷುವೇ ಪುತ್ರಂ ಪ್ರಥಮಂ ಚ ಯುಧಿಷ್ಠಿರಂ ॥೫೩॥**

ಗಂಡನ ಅನುಮತಿಯ ಮಾತಿನಿಂದ ಆ ಕುಂತಿಯು ಅಲ್ಲಿ ದೇವತೆಗಳಲ್ಲಿ ಶ್ರೇಷ್ಠನಾದ ಯಮಧರ್ಮನನ್ನು ನೆನೆಸಿದಳು. ಅನಂತರ ಅವನೊಡನೆ ಸೇರಿ ಮೊದಲು ಯುಧಿಷ್ಠಿರನೆಂಬ ಹಿರಿಯ ಮಗನನ್ನು ಪ್ರಸವಿಸಿದಳು.

**ವಾಯೋರ್ವೃಕೋದರಂ ಪುತ್ರಂ ಜಿಷ್ಣುಂ ಚೈವ ಶತಕ್ರತೋಃ ।**
**ವರ್ಷೇ ವರ್ಷೇ ತ್ರಯಃ ಪುತ್ರಾಃ ಕುಂತ್ಯಾ ಜಾತಾ ಮಹಾಬಲಾಃ ॥೫೪॥**

ಆ ಕುಂತೀದೇವಿಯು ವಾಯುದೇವನಿಂದ ಭೀಮನನ್ನೂ, ಇಂದ್ರನಿಂದ ಅರ್ಜುನನನ್ನೂ ಪಡೆದಳು. ಈ ರೀತಿಯಲ್ಲಿ ಒಂದು ವರ್ಷಕ್ಕೆ ಒಬ್ಬರಂತೆ ಕುಂತಿಗೆ ಬಲಶಾಲಿಗಳಾದ ಮೂರುಜನ ಪುತ್ರರು ಹುಟ್ಟಿದರು.

**ಮಾದ್ರೀ ಪ್ರಾಹ ಪತಿಂ ಪಾಂಡುಂ ಪುತ್ರಂ ಮೇ ಕುರುಸತ್ತಮ ।**
**ಕಿಂ ಕರೋಮಿ ಮಹಾರಾಜ ದುಃಖಂ ನಾಶಯ ಮೇ ಪ್ರಭೋ ॥೫೫॥**

ಮಾದ್ರಿಯು ಗಂಡನಾದ ಪಾಂಡುವನ್ನು ಕುರಿತು ಹೇಳಿದಳು—ಓ ಕುರು ವಂಶಶ್ರೇಷ್ಠನೇ, ನನಗೆ ಮಗನನ್ನು ಕೊಡು. ಎಲೈ ಮಹಾರಾಜನೇ, ನಾನು ಏನನ್ನು ಮಾಡಲಿ ? ಹೇ ಪ್ರಭುವೇ, ನನ್ನ ವ್ಯಸನವನ್ನು ನಾಶಮಾಡು.

**ಪ್ರಾರ್ಥಿತಾ ಪತಿನಾ ಕುಂತೀ ದದೌ ಮಂತ್ರಂ ದಯಾನ್ವಿತಾ ।**
**ಏಕಪುತ್ರಪ್ರಬಂಧೇನ ಮಾದ್ರೀ ಪತಿಮತೇ ಸ್ಥಿತಾ ॥೫೬॥**

ಗಂಡನಿಂದ ಪ್ರಾರ್ಥಿಸಲ್ಪಟ್ಟ ಕುಂತಿಯು ದಯೆಯಿಂದ ಕೂಡಿದವಳಾಗಿ ಆ ಮಾದ್ರೀದೇವಿಗೂ ಒಬ್ಬ ಮಗನಾಗಲೆಂಬ ಉದ್ದೇಶದಿಂದ ಅವಳಿಗೆ ಒಂದು ಮಂತ್ರವನ್ನು ಉಪದೇಶಮಾಡಿಕೊಟ್ಟಳು. ಮಾದ್ರಿಯೂ, ಮಗನನ್ನು ಪಡೆಯಲು ಗಂಡನ ಅನುಮತಿಯನ್ನು ಪಡೆದಿದ್ದಳು.

**ಸ್ಮೃತ್ವಾ ತದಾಶ್ವಿನೌ ದೇವೌ ಮದ್ರರಾಜಸುತಾ ಸುತೌ ।**
**ನಕುಲಃ ಸಹದೇವಶ್ಚ ಸುಷುವೇ ವರವರ್ಣಿನೀ ॥೫೭॥**

ಮದ್ರದೇಶದ ದೊರೆಯ ಮಗಳಾದ, ಉತ್ತಮಸ್ತ್ರೀಯಾದ ಆ ಮಾದ್ರೀದೇವಿಯು ಆಗ ಅಶ್ವಿನೀ ಎಂಬ ಅವಳಿದೇವತೆಗಳನ್ನು ಸ್ಮರಿಸಿ, ನಕುಲ, ಸಹದೇವರೆಂಬ ಇಬ್ಬರು ಅವಳಿಮಕ್ಕಳನ್ನು ಪ್ರಸವಿಸಿದಳು.

**ಏವಂ ತೇ ಪಾಂಡವಾಃ ಪಂಚ ಕ್ಷೇತ್ರೋತ್ಪನ್ನಾಃ ಸುರಾತ್ಮಜಾಃ ।**
**ವರ್ಷವರ್ಷಾಂತರೇ ಜಾತಾ ವನೇ ತಸ್ಮಿನ್ ದ್ವಿಜೋತ್ತಮಾಃ ॥೫೮॥**

ಎಲೈ ಬ್ರಾಹ್ಮಣಶ್ರೇಷ್ಠರಾದವರೇ, ಈ ರೀತಿಯಾಗಿ ದೇವತೆಗಳ ಮಕ್ಕಳಾದ ಮತ್ತು ಕ್ಷೇತ್ರದಲ್ಲಿ ಹುಟ್ಟಿದ ಆ ಐದುಜನ ಪಾಂಡವರೂ ಒಂದೊಂದು ವರ್ಷದಲ್ಲಿ ಒಬ್ಬೊಬ್ಬರಂತೆ ಕಾಡಿನಲ್ಲಿ ಹುಟ್ಟಿದರು.

**ಏಕಸ್ಮಿನ್ ಸಮಯೇ ಪಾಂಡುರ್ಮಾದ್ರೀಂ ದೃಷ್ಟ್ವಾಽಥ ನಿರ್ಜನೇ ।**
**ಆಶ್ರಮೇ ಚಾತಿಕಾಮಾರ್ತೋ ಜಗ್ರಾಹಾಽಽಗತವೈಶಸಃ ॥೫೯॥**

ಒಂದಾನೊಂದು ಸಮಯದಲ್ಲಿ ಪಾಂಡುವು ಜನರಹಿತವಾದ ಆಶ್ರಮದಲ್ಲಿ ಏಕಾಂತವಾಗಿ ಆ ಮಾದ್ರಿಯನ್ನು ನೋಡಿ, ಅತ್ಯಂತವಾಗಿ ಕಾಮಪೀಡಿತನೂ, ಸಮೀಪಿಸಿದ ಮರಣವುಳ್ಳವನೂ ಆಗಿ ಅವಳನ್ನು ಪರಿಗ್ರಹಿಸಿದನು.

**ಮಾ ಮಾ ಮಾ ಮೇತಿ ಬಹುಧಾ ನಿಷಿದ್ಧೋಽಪಿ ತಯಾ ಭೃಶಂ ।**
**ಆಲಿಲಿಂಗ ಪ್ರಿಯಾಂ ದೈವಾತ್ಪಪಾತ ಧರಣೀತಲೇ ॥೬೦॥**

ಬೇಡಬೇಡವೆಂದು ಅವಳು ಬಹಳವಾಗಿ ತಡೆದರೂ ಸಹ ದೈವವಶದಿಂದ, ಪ್ರಿಯಳಾದ ಅವಳನ್ನು ಆಲಿಂಗಿಸಿದನು. ಕೂಡಲೇ ಹಿಂದಿನ ಮುನಿಶಾಪದಿಂದ ಪಾಂಡುವು ಭೂಮಿಯಲ್ಲಿ ಬಿದ್ದು ಮೃತನಾದನು.

**ಯಥಾ ವೃಕ್ಷಗತಾ ವಲ್ಲೀ ಛಿನ್ನೇ ಪತತಿ ವೈ ದ್ರುಮೇ ।**
**ತಥಾ ಸಾ ಪತಿತಾ ಬಾಲಾ ಕುರ್ವಂತೀ ರೋದನಂ ಬಹು ॥೬೦॥**

ಒಂದು ಮರವನ್ನು ಕತ್ತರಿಸಿದ ಕೂಡಲೇ ಆ ಮರವನ್ನು ಆಶ್ರಯಿಸಿ ಹಬ್ಬಿರ ತಕ್ಕ ಬಳ್ಳಿಯೂ ಹೇಗೆ ನೆಲಕ್ಕೆ ಬೀಳುತ್ತದೆಯೋ ಹಾಗೆಯೇ ಆ ಬಾಲೆಯಾದ ಮಾದ್ರಿಯೂ ಸಹ ಬಹಳವಾಗಿ ಅಳುತ್ತಾ ನೆಲದಮೇಲೆ ಬಿದ್ದಳು.

**ಪ್ರತ್ಯಾಗತಾ ತದಾ ಕುಂತೀ ರುದತೀ ಬಾಲಕಾಸ್ತಥಾ ।**
**ಮುನಯಶ್ಚ ಮಹಾಭಾಗಾಃ ಶ್ರುತ್ವಾ ಕೋಲಾಹಲಂ ತದಾ ॥೬೨॥**

ಆಗ ಕುಂತಿಯೂ, ಹಾಗೆಯೇ ಮಕ್ಕಳೂ ಅಳುತ್ತಾ ಅಲ್ಲಿಗೆ ಬಂದರು. ಆ ಗದ್ದಲವನ್ನು ಕೇಳಿ ಪೂಜ್ಯರಾದ ಮುನಿಗಳೂ ಅಲ್ಲಿಗೆ ಬಂದರು.

**ಮೃತಃ ಪಾಂಡುಸ್ತದಾ ಸರ್ವೇ ಮುನಯಃ ಶಂಸಿತವ್ರತಾಃ ।**
**ಸಹಾಗ್ನಿಭಿರ್ವಿಧಿಂ ಕೃತ್ವಾ ಮುನಯಸ್ತತ್ರ ವಾಸಿನಃ । ॥೬೩॥**

ಪಾಂಡುವು ಸತ್ತಮೇಲೆ ಶ್ಲಾಘಿಸುವಷ್ಟು ನಿಯಮನಿಷ್ಠರಾದ ಆ ಎಲ್ಲ ಮುನಿಗಳೂ ಕೂಡ ಶಾಸ್ತ್ರದಲ್ಲಿ ಹೇಳಿರುವಪ್ರಕಾರವಾಗಿ ಅಗ್ನಿಯಿಂದ ಗಂಗೆಯ ದಡದಲ್ಲಿ ಅವನ ಶರೀರವನ್ನು ದಹನಮಾಡಿಸಿ ಉತ್ತರಕ್ರಿಯಾದಿಗಳನ್ನು ನೆರವೇರಿಸಿದರು.

**ಚಕ್ರೇ ಸಹೈವ ಗಮನಂ ಮಾದ್ರೀ ದತ್ವಾ ಸುತೌ ಶಿಶೂ ।**
**ಕುಂತ್ಯೈ ಧರ್ಮಂ ಪುರಸ್ಕೃತ್ಯ ಸತೀನಾಂ ಸತ್ಯಕಾಮುತಃ ॥೬೪॥**

ಮಾದ್ರಿಯು ತನ್ನ ಚಿಕ್ಕ ಮಕ್ಕಳನ್ನು ಕುಂತಿಯ ವಶಕ್ಕೆ ಒಪ್ಪಿಸಿ, ಸತಿಯರು ಆಚರಿಸುವ ಸಹಗಮನ ಧರ್ಮವನ್ನು ಮುಂದುಮಾಡಿಕೊಂಡು, ಸತ್ಯವಾದ ಪಾತಿವ್ರತ್ಯ ಧರ್ಮವನ್ನು ನೆರವೇರಿಸಿದಳು.

**ಜಲದಾನಾದಿಕಂ ಕೃತ್ವಾ ಮುನಯಸ್ತತ್ರ ವಾಸಿನಃ ।**
**ಪಂಚಪುತ್ರಯುತಾಂ ಕುಂತೀಮನಯನ್ ಹಸ್ತಿನಾಪುರಂ ॥೬೫॥**

ಅಲ್ಲಿದ್ದ ಮುನಿಗಳು ಧರ್ಮೋದಕ ಮತ್ತು ತರ್ಪಣವೇ ಮೊದಲಾದ ಉತ್ತರ ಕ್ರಿಯೆಗಳನ್ನು ನೆರವೇರಿಸಿ ಐದು ಜನ ಮಕ್ಕಳುಗಳಿಂದ ಕೂಡಿದ ಆ ಕುಂತಿಯನ್ನು ಹಸ್ತಿನಾಪುರಕ್ಕೆ ಕರೆತಂದರು.

**ತಾಂ ಪ್ರಾಪ್ತಾಂ ಚ ಸಮಾಜ್ಞಾಯ ಗಾಂಗೇಯೋ ವಿದುರಸ್ತಥಾ ।**
**ನಾಗರಾ ಧೃತರಾಷ್ಟ್ರಸ್ಯ ಸರ್ವೇ ತತ್ರ ಸಮಾಯಯುಃ ॥೬೬॥**

ಆ ಕುಂತೀದೇವಿಯು ಮಕ್ಕಳೊಡನೆ ಬಂದಿರುವುದನ್ನು ತಿಳಿದು ಗಂಗಾಪುತ್ರನಾದ ಭೀಷ್ಮನೂ, ವಿದುರನೂ, ಧೃತರಾಷ್ಟ್ರನೂ ಮತ್ತು ಅವನ ರಾಜಧಾನಿಯಲ್ಲಿದ್ದ ಎಲ್ಲ ನಾಗರಿಕರೂ ಅಲ್ಲಿಗೆ ಎದುರುಗೊಳ್ಳಲು ಬಂದರು.

**ಪಪ್ರಚ್ಛುಶ್ಚ ಜನಾಃ ಸರ್ವೇ ಕಸ್ಯ ಪುತ್ರಾ ವರಾನನೇ ।**
**ಪಾಂಡೋಃ ಶಾಪಂ ಸಮಾಜ್ಞಾಯ ಕುಂತೀ ದುಃಖಾನ್ವಿತಾ ತದಾ ॥೬೭॥**

ಆ ಎಲ್ಲ ಪುರಜನರು ಪಾಂಡುವಿಗೆ ಬಂದಿದ್ದ ಶಾಪವನ್ನು ತಿಳಿದಿದ್ದುದರಿಂದ ಕುಂತೀದೇವಿಯನ್ನು ಕುರಿತು, ಓ ಸುಂದರವಾದ ಮುಖವುಳ್ಳ ಕುಂತೀದೇವಿಯೇ, ಈ ಮಕ್ಕಳು ಯಾರ ಪುತ್ರರು ? ಎಂದು ಕೇಳಿದರು. ಆಗ ಕುಂತಿಯು ಬಹಳ ದುಃಖದಿಂದ ಕೂಡಿದವಳಾಗಿ,

**ತಾನುವಾಚ ಸುರಾಣಾಂ ವೈ ಪುತ್ರಾಃ ಕುರುಕುಲೋದ್ಭವಾಃ ।**
**ವಿಶ್ವಾಸಾರ್ಥೇ ಸಮಾಹೂತಾಃ ಕುಂತ್ಯಾ ಸರ್ವೇ ಸುರಾಸ್ತದಾ ॥೬೮॥**

ಆ ಜನರನ್ನು ಕುರಿತು ಕುಂತಿಯು, ಕುರುವಂಶದಲ್ಲಿ ಇವರು ದೇವತೆಗಳ ಅನುಗ್ರಹದಿಂದ ಹುಟ್ಟಿದ ಮಕ್ಕಳೆಂದು ಹೇಳಿದಳು. ಮತ್ತು ಅನಂತರದಲ್ಲಿ ಆ ಪುರಜನರಲ್ಲಿ ನಂಬಿಕೆಯನ್ನುಂಟುಮಾಡುವುದಕ್ಕೋಸ್ಕರ ಆಗ ಅವಳು ಆ ಅನುಗ್ರಹಿಸಿದ್ದ ಎಲ್ಲಾ ದೇವತೆಗಳನ್ನೂ ಧ್ಯಾನಿಸಿ ಬರಮಾಡಿದಳು.

**ಆಗತ್ಯ ಖೇ ತದಾ ತೈಸ್ತು ಕಥಿತಂ ನಃ ಸುತಾಃ ಕಿಲ ।**
**ಭೀಷ್ಮೇಣ ಸತ್ಕೃತಂ ವಾಕ್ಯಂ ದೇವಾನಾಂ ಸತ್ಕೃತಾಃ ಸುತಾಃ ॥೬೯॥**

ಆಗ ದೇವತೆಗಳು ಆಕಾಶದಲ್ಲಿ ಪ್ರತ್ಯಕ್ಷವಾಗಿ ಬಂದು ಈ ಬಾಲಕರು ನಮ್ಮ ಪುತ್ರರೆಂದು ಹೇಳಿದರು. ಭೀಷ್ಮನು ಆ ಮಾತನ್ನು ಒಪ್ಪಿದನು. ಮತ್ತು ಆ ದೇವತೆಗಳ ಮಕ್ಕಳನ್ನು ಪಾಂಡವರೆಂದು ಗೌರವಿಸಿದನು.

**ಗತಾ ನಾಗಪುರಂ ಸರ್ವೇ ತಾನಾದಾಯ ಸುತಾನ್ ವಧೂಂ ।**
**ಭೀಷ್ಮಾದಯಃ ಪ್ರೀತಚಿತ್ತಾಃ ಪಾಲಯಾಮಾಸುರರ್ಥತಃ ॥೭೦॥**

ಅನಂತರದಲ್ಲಿ ಎಲ್ಲರೂ ಆ ಪುತ್ರರನ್ನೂ ಕುಂತಿಯನ್ನೂ ಕರೆದುಕೊಂಡು ಹಸ್ತಿನಾಪುರಕ್ಕೆ ಹೋದರು. ಭೀಷ್ಮನೇ ಮೊದಲಾದವರು ಸಂತುಷ್ಟವಾದ ಮನಸ್ಸುಳ್ಳವರಾಗಿ ಧನಾದಿಗಳಿಂದ ಆ ಮಕ್ಕಳನ್ನು ಕಾಪಾಡಿದರು.

**ಏವಂ ಪಾರ್ಥಾಃ ಸಮುತ್ಪನ್ನಾ ಗಾಂಗೇಯೇನಾಥ ಪಾಲಿತಾಃ ॥**

ಈ ರೀತಿಯಾಗಿ ಪಾಂಡವರು ಕುಂತಿಯ ಮಕ್ಕಳಾಗಿ ಜನಿಸಿದರು. ಆಮೇಲೆ ಅವರನ್ನು ಭೀಷ್ಮನು ಪೋಷಿಸಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಷಷ್ಠೋಽಧ್ಯಾಯಃ ಸಮಾಪ್ತಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

॥ ಸಪ್ತಮೋಽಧ್ಯಾಯಃ ॥

### ಏಳನೆಯ ಅಧ್ಯಾಯವು

॥ ಸೂತ ಉವಾಚ ॥

**ಪಂಚಾನಾಂ ದ್ರೌಪದೀ ಭಾರ್ಯಾ ಸಾ ಮಾನ್ಯಾ ಸಾ ಪತಿವ್ರತಾ ।**
**ಪಂಚ ಪುತ್ರಾಸ್ತು ತಸ್ಯಾಃ ಸ್ಯುರ್ಭರ್ತೃಭ್ಯೋಽತೀವ ಸುಂದರಾಃ ॥೧॥**

ಈ ಪಂಚಪಾಂಡವರಿಗೆ ಪತಿವ್ರತೆಯಾದ ಆ ದ್ರೌಪದಿಯು ಒಬ್ಬಳೇ ಹೆಂಡತಿಯಾಗಿದ್ದಳು. ಈ ಗಂಡಂದಿರಿಂದ ದ್ರೌಪದಿಯಲ್ಲಿ ಅತ್ಯಂತ ಸುಂದರರಾದ ಐವರು ಮಕ್ಕಳು ಜನಿಸಿದರು.

**ಅರ್ಜುನಸ್ಯ ತಥಾ ಭಾರ್ಯಾ ಕೃಷ್ಣಸ್ಯ ಭಗಿನೀ ಶುಭಾ ।**
**ಸುಭದ್ರಾ ಯಾ ಹೃತಾ ಪೂರ್ವಂ ಜಿಷ್ಣುನಾ ಹರಿಸಂಮತೇ ॥೨॥**

ಹಾಗೆಯೇ ಅರ್ಜುನನಿಗೆ ಕೃಷ್ಣನ ತಂಗಿಯಾದ ಸುಭದ್ರೆಯೆಂಬ ಇನ್ನೊಬ್ಬಳು ಹೆಂಡತಿಯು ಇದ್ದಳು. ಅವಳನ್ನು ಹಿಂದೆ ಅರ್ಜುನನು ಕೃಷ್ಣನ ಸಮ್ಮತಿಯಿಂದ ಅಪಹರಿಸಿದ್ದನು.

**ತಸ್ಯಾಂ ಜಾತೋ ಮಹಾವೀರೋ ನಿಹತೋಽಸೌ ರಣಾಜಿರೇ ।**
**ಅಭಿಮನ್ಯುರ್ಹತಾಸ್ತತ್ರ ದ್ರೌಪದ್ಯಾಶ್ಚ ಸುತಾಃ ಕಿಲ ॥೩॥**

ಆ ಸುಭದ್ರೆಯಲ್ಲಿ ಅತ್ಯಂತ ಶೂರನಾದ ಅಭಿಮನ್ಯು ಎಂಬ ಮಗನು ಜನಿಸಿದನು. ಈ ಅಭಿಮನ್ಯುವೂ ಮತ್ತು ದ್ರೌಪದಿಯ ಮಕ್ಕಳೂ ಸಹ ಯುದ್ಧದಲ್ಲಿ ಕೌರವರಿಂದ ಕೊಲ್ಲಲ್ಪಟ್ಟರು.

**ಅಭಿಮನ್ಯೋರ್ವರಾ ಭಾರ್ಯಾ ವೈರಾಟೀ ಜಾತಿಸುಂದರಾ ।**
**ಕುಲಾಂತೇ ಸುಷುವೇ ಪುತ್ರಂ ಮೃತೋ ಬಾಣಾಗ್ನಿನಾ ಶಿಶುಃ ॥೪॥**

ಈ ಅಭಿಮನ್ಯುವಿಗೆ ವಿರಾಟನ ಪುತ್ರಿಯಾದ, ಅತ್ಯಂತ ಸುಂದರಿಯಾದ, ಉತ್ತರೆ ಎಂಬ ಹೆಂಡತಿಯು ಇದ್ದಳು. ಮಕ್ಕಳಿಲ್ಲದೆ ವಂಶವು ನಾಶವಾಗುತ್ತಿರಲಾಗಿ ಇವಳು ಒಂದು ಮಗುವನ್ನು ಪ್ರಸವಿಸಿದಳು. ಈ ಮಗುವನ್ನು ಅಶ್ವತ್ಥಾಮನು ಗರ್ಭದಲ್ಲಿರುವಾಗಲೇ ತನ್ನ ಬಾಣದಿಂದ ನಾಶಮಾಡಿದ್ದನು.

**ಜೀವಿತಃ ಸ ತು ಕೃಷ್ಣೇನ ಭಾಗಿನೇಯಃ ಸುತಃ ಸ್ವಯಂ ।**
**ದ್ರೌಣಿಬಾಣಾಗ್ನಿನಿರ್ದಗ್ಧಃ ಪ್ರತಾಪೇನಾದ್ಭುತೇನ ಚ ॥೫॥**

ಆದರೆ ಕೃಷ್ಣನು ತನ್ನ ತಂಗಿಯ ಮೊಮ್ಮಗನಾದ ಮತ್ತು ಅಶ್ವತ್ಥಾಮನ ಬಾಣದಿಂದ ಸುಡಲ್ಪಟ್ಟಿದ್ದ ಆ ಮಗುವನ್ನು ತನ್ನ ಆಶ್ಚರ್ಯಕರವಾದ ಪರಾಕ್ರಮದಿಂದ ಬದುಕಿಸಿದನು.

**ಪರಿಕ್ಷೀಣೇಷು ವಂಶೇಷು ಜಾತೋ ಯಸ್ಮಾದ್ವರಃ ಸುತಃ ।**
**ತಸ್ಮಾತ್ಪರೀಕ್ಷಿತೋ ನಾಮ ವಿಖ್ಯಾತಃ ಪೃಥಿವೀತಲೇ ॥೬॥**

ಹೀಗೆ ಈ ಬಾಲಕನು ಪಾಂಡವರ ಮತ್ತು ಕೌರವರ ವಂಶವು ಕ್ಷೀಣವಾಗುತ್ತಿರುವಾಗ ಹುಟ್ಟಿದುದರಿಂದ ಇವನು ಜಗತ್ತಿನಲ್ಲಿ ಪರೀಕ್ಷಿತನೆಂದು ಪ್ರಸಿದ್ಧನಾದನು.

**ನಿಹತೇಷು ಚ ಪುತ್ರೇಷು ಧೃತರಾಷ್ಟ್ರೋಽತಿದುಃಖಿತಃ ।**
**ತಸ್ಥೌ ಪಾಂಡವರಾಜ್ಯೇ ಚ ಭೀಮವಾಗ್ಬಾಣಪೀಡಿತಃ ॥೭॥**

ಧೃತರಾಷ್ಟ್ರನು ತನ್ನ ಎಲ್ಲ ಪುತ್ರರೂ ಸತ್ತುಹೋಗಲಾಗಿ, ತುಂಬ ಶೋಕವುಳ್ಳವನಾಗಿ, ಭೀಮನ ತೀಕ್ಷ್ಣವಾದ ಮಾತುಗಳಿಂದ ಇನ್ನೂ ವ್ಯಥೆಪಡುತ್ತಾ ಪಾಂಡವರ ರಾಜ್ಯದಲ್ಲೇ ವಾಸಮಾಡುತ್ತಿದ್ದನು.

**ಗಾಂಧಾರೀ ಚ ತಥಾಽತಿಷ್ಠತ್ಪುತ್ರಶೋಕಾತುರಾ ಭೃಶಂ ।**
**ಸೇವಾಂ ತಯೋರ್ದಿವಾರಾತ್ರಂ ಚಕಾರಾರ್ತೋಽ ಯುಧಿಷ್ಠಿರಃ ॥೮॥**

ಧೃತರಾಷ್ಟ್ರನ ಪತ್ನಿಯಾದ ಗಾಂಧಾರೀ ದೇವಿಯೂ, ತನ್ನ ಪುತ್ರರ ಮರಣದಿಂದ ಅತ್ಯಂತ ದುಃಖಿತಳಾಗಿದ್ದಳು. ಇವರು ದುಃಖಪಡುವುದನ್ನು ನೋಡಿ ಧರ್ಮ

ರಾಜನು ಸಹಾನುಭೂತಿಯಿಂದ ಬಹಳ ಸಂಕಟಪಟ್ಟು ಆ ಗಾಂಧಾರೀ ಮತ್ತು ಧೃತ ರಾಷ್ಟ್ರರ ಸೇವೆಯನ್ನು ಹಗಲಿರುಳೂ ಮಾಡುತ್ತಿದ್ದನು.

**ವಿದುರೋಽಪ್ಯತಿಧರ್ಮಾತ್ಮಾ ಪ್ರಜ್ಞಾನೇತ್ರಮಬೋಧಯತ್ ।**
**ಯುಧಿಷ್ಠಿರಸ್ಯಾನುಮತೇ ಭ್ರಾತೃಪಾರ್ಶ್ವೇ ವ್ಯತಿಷ್ಠತ ॥೯॥**

ಅತ್ಯಂತ ಧರ್ಮಾತ್ಮನಾದ ವಿದುರನೂ ಕೂಡ ಧೃತರಾಷ್ಟ್ರನಿಗೆ ಜ್ಞಾನ ಚಕ್ಷುಸ್ಸು ಅಂದರೆ ಅರಿವಿನ ಕಣ್ಣು ತೆರೆಯುವಂತೆ ಬೋಧಿಸುತ್ತಿದ್ದನು. ಅಲ್ಲದೆ ಯುಧಿಷ್ಠಿರನ ಅನುಮತಿಯ ಮೇರೆಗೆ ಅಣ್ಣನ ಸಮೀಪದಲ್ಲೇ ಇರುತ್ತಿದ್ದನು.

**ಧರ್ಮಪುತ್ರೋಽಪಿ ಧರ್ಮಾತ್ಮಾ ಚಕಾರ ಸೇವನಂ ಪಿತುಃ ।**
**ಪುತ್ರಶೋಕೋದ್ಭವಂ ದುಃಖೀ ತಸ್ಯಾ ವಿಸ್ಮಾರಯನ್ನಿವ ॥೧೦॥**

ಧರ್ಮಾತ್ಮನಾದ, ಭ್ರಾತೃಧರ್ಮವನ್ನು ಪಾಲಿಸುವುದರಲ್ಲಿ ಆಸಕ್ತಿಯುಳ್ಳ, ಧರ್ಮರಾಜನೂ ಕೂಡ, ಪುತ್ರರ ನಾಶದಿಂದ ಧೃತರಾಷ್ಟ್ರನಿಗೆ ಉಂಟಾಗಿದ್ದ ದುಃಖ ವನ್ನು ಹೋಗಲಾಡಿಸುವುದಕ್ಕೋ ಎಂಬಂತೆ ಅವನ ಸೇವೆಯನ್ನು ಮಾಡುತ್ತಿದ್ದನು.

**ಯಥಾ ಶೃಣೋತಿ ವೃದ್ಧೋಽಸೌ ತಥಾ ಭೀಮೋಽತಿರೋಷಿತಃ ।**
**ವಾಗ್ಬಾಣೇನಾಹನತ್ತಂ ತು ಶ್ರಾವಯನ್ ಸಂಸ್ಥಿತಾನ್ ಜನಾನ್ ॥೧೧॥**

ಭೀಮನು ಹಿಂದಿನ ಅಪಕಾರಗಳನ್ನು ಮರೆಯಲಾರದೆ ಅತ್ಯಂತ ಕೋಪ ಗೊಂಡವನಾಗಿ ಆ ಮುದುಕನಾಗಿದ್ದ ಧೃತರಾಷ್ಟ್ರನಿಗೆ ಕೇಳಿಸುವಂತೆ ಅತಿ ತೀಕ್ಷ್ಣ ವಾದ ದೂಷಣೆಯ ಮಾತುಗಳನ್ನು ಸಮೀಪದ ಜನರಿಗೂ ಕೇಳಿಸುವಂತೆಯೂ ಹೇಳುತ್ತಿದ್ದನು.

**ಮಯಾ ಪುತ್ರಾ ಹತಾಃ ಸರ್ವೇ ದುಷ್ಟಸ್ಯಾಂಧಸ್ಯ ತೇ ರಣೇ ।**
**ದುಶ್ಶಾಸನಸ್ಯ ರುಧಿರಂ ಪೀತಂ ಹೃದ್ಯಂ ತಥಾ ಭೃಶಂ ॥೧೨॥**

ಆ ತೀಕ್ಷ್ಣವಾದ ಮಾತುಗಳಾವುವೆಂದರೆ, ದುಷ್ಟನಾದ ಮತ್ತು ಕುರುಡ ನಾದಂಥ ನಿನ್ನ ಎಲ್ಲ ಮಕ್ಕಳನ್ನೂ ನಾನೇ ಯುದ್ಧದಲ್ಲಿ ಕೊಂದೆನು. ಅಲ್ಲದೆ ಪ್ರತೀಕಾರದ ಬಯಕೆಯಿಂದ ನನ್ನ ಮನಸ್ಸಿಗೆ ಅತ್ಯಂತ ಮನೋಹರವಾಗಿದ್ದ ದುಶ್ಶಾಸನನ ರಕ್ತವನ್ನೂ ಚೆನ್ನಾಗಿ ಹೀರಿ ಕುಡಿದೆನು.

**ಭುನಕ್ತಿ ಪಿಂಡಮಂಧೋಽಯಂ ಮಯಾ ದತ್ತಂ ಗತತ್ರಪಃ ।**
**ಧ್ವಾಂಕ್ಷವದ್ವಾ ಶ್ವವಚ್ಚಾಪಿ ವೃಥಾ ಜೀವತ್ಯಸೌ ಜನಃ ॥೧೩॥**

ನನ್ನಿಂದ ಕೊಡಲ್ಪಟ್ಟ ಅನ್ನವನ್ನು ಕುರುಡನಾದ ಈ ಧೃತರಾಷ್ಟ್ರನು ನಾಚಿಕೆ ಇಲ್ಲದವನಾಗಿ ತಿನ್ನುತ್ತಿದ್ದಾನೆ. ಅಲ್ಲದೆ ಕಾಗೆಯಂತೆಯೂ ನಾಯಿಯಂತೆಯೂ ವ್ಯರ್ಥವಾಗಿ ಜೀವಿಸುತ್ತಿದ್ದಾನೆ.

**ಏವಂ ವಿಧಾನಿ ರೂಕ್ಷಾಣಿ ಶ್ರಾವಯತ್ಯನುವಾಸರಂ ।**
**ಆಶ್ವಾಸಯತಿ ಧರ್ಮಾತ್ಮಾ ಮೂರ್ಖೋಽಯಮಿತಿ ಚ ಬ್ರುವನ್ ॥೧೪॥**

ಭೀಮನು ಈ ರೀತಿಯಾದ ಕಠಿನವಾದ ಮಾತುಗಳನ್ನು ಪ್ರತಿನಿತ್ಯವೂ ಧೃತರಾಷ್ಟ್ರನಿಗೆ ಕೇಳುವಂತೆ ಹೇಳುತ್ತಾನೆ. ಆದರೆ ಧರ್ಮರಾಜನು ಈ ಭೀಮನು ಕೇವಲ ಮೂರ್ಖನೆಂದು ಹೇಳುತ್ತಾ ಧೃತರಾಷ್ಟ್ರನನ್ನು ಸಂತೈಸುತ್ತಾನೆ.

**ಅಷ್ಟಾದಶೈವ ವರ್ಷಾಣಿ ಸ್ಥಿತ್ವಾ ತತ್ರೈವ ದುಃಖಿತಃ ।**
**ಧೃತರಾಷ್ಟ್ರೋ ವನೇ ಯಾನಂ ಪ್ರಾರ್ಥಯಾಮಾಸ ಧರ್ಮಜಂ ॥೧೫॥**

ಈ ರೀತಿಯಲ್ಲಿ ಹದಿನೆಂಟು ವರ್ಷಗಳ ಕಾಲವೂ ಅತ್ಯಂತ ದುಃಖದಿಂದ ಅಲ್ಲೇ ಇದ್ದು, ಅನಂತರದಲ್ಲಿ ಕಾಡಿನಲ್ಲಿರುತ್ತಾ ವಾನಪ್ರಸ್ಥಾಶ್ರಮದ ಧರ್ಮವನ್ನು ನೆರವೇರಿಸುವುದಕ್ಕೋಸ್ಕರ ಧರ್ಮರಾಜನ ಅಪ್ಪಣೆ ಅನುಮತಿಯನ್ನು ಕೇಳಿದನು.

**ಅಯಾಚತ ಧರ್ಮಪುತ್ರಂ ಧೃತರಾಷ್ಟ್ರೋ ಮಹೀಪತಿಃ ।**
**ಪುತ್ರೇಭ್ಯೋಽಹಂ ದದಾಮ್ಯದ್ಯ ನಿರ್ವಾಪಂ ವಿಧಿಪೂರ್ವಕಂ ॥೧೬॥**

ರಾಜನಾದ ಧೃತರಾಷ್ಟ್ರನು ಧರ್ಮರಾಯನನ್ನು ಕುರಿತು ಈ ರೀತಿ ಕೇಳಿದನು. ನಾನು ನನ್ನ ಪುತ್ರರಿಗೆ ಧರ್ಮಶಾಸ್ತ್ರದಲ್ಲಿ ವಿಧಿಸಿರುವಂತೆ ಜಲತರ್ಪಣ ಮುಂತಾದ ಉತ್ತರಕ್ರಿಯೆಯನ್ನು ಈಗ ಮಾಡುತ್ತೇನೆ. ಏಕೆಂದರೆ—

**ವೃಕೋದರೇಣ ಸರ್ವೇಷಾಂ ಕೃತಮೌರ್ಧ್ವದೈಹಿಕಂ ।**
**ನ ಕೃತಂ ಮಮ ಪುತ್ರಾಣಾಂ ಪೂರ್ವವೈರಮನುಸ್ಮರನ್ ॥೧೭॥**

ಹಿಂದೆ ಭೀಮನು ಮೃತರಾಗಿದ್ದ ಎಲ್ಲರಿಗೂ ಉತ್ತರಕ್ರಿಯೆಗಳನ್ನು ಮಾಡಿದನು. ಆದರೆ ಹಿಂದಿನ ದ್ವೇಷವನ್ನು ಸ್ಮರಿಸಿ ನನ್ನ ಪುತ್ರರಿಗೆ ಮಾತ್ರ ಅವನ್ನು ಮಾಡಲಿಲ್ಲವು.

**ದದಾಸಿ ಚೇದ್ಧನಂ ಮಹ್ಯಂ ಕೃತ್ವಾ ಚೈವೌರ್ಧ್ವದೈಹಿಕಂ ।**
**ಗಮಿಷ್ಯೇಽಹಂ ವನಂ ತಪ್ತುಂ ತಪಃ ಸ್ವರ್ಗಫಲಪ್ರದಂ ॥೧೮॥**

ನೀನು ಇದಕ್ಕೆ ಬೇಕಾಗುವಷ್ಟು ಹಣವನ್ನು ನನಗೆ ಕೊಡುವುದಾದರೆ, ನನ್ನ ಪುತ್ರರ ಉತ್ತರಕ್ರಿಯೆಯನ್ನು ಮಾಡಿ, ನಾನು ಸ್ವರ್ಗಫಲಕ್ಕೆ ಕಾರಣವಾದ ತಪಸ್ಸನ್ನು ಮಾಡಲು ವನಕ್ಕೆ ತೆರಳುವೆನು.

**ಏಕಾಂತೇ ವಿದುರೇಣೋಕ್ತೋ ರಾಜಾ ಧರ್ಮಸುತಃ ಶುಚಿಃ ।**
**ಧನಂ ದಾತುಂ ಮನಶ್ಚಕ್ರೇ ಧೃತರಾಷ್ಟ್ರಾಯ ಚಾರ್ಥಿನೇ ॥೧೯॥**

ಏಕಾಂತದಲ್ಲಿ ವಿದುರನು ತಿಳಿಯಹೇಳಿದ ಬುದ್ಧಿವಾದದ ಮಾತಿನ ಪ್ರಕಾರ ಧರ್ಮರಾಜನು ಯಾಚಿಸತಕ್ಕ ಧೃತರಾಷ್ಟ್ರನಿಗೆ ಧನವನ್ನು ಕೊಡಲು ಮನಸ್ಸಿನಲ್ಲಿ ನಿಶ್ಚಯಿಸಿದನು.

**ಸಮಾಹೂಯ ನಿಜಾನ್ ಸರ್ವಾನುವಾಚ ಪೃಥಿವೀಪತಿಃ ।**
**ಧನಂ ದಾಸ್ಯೇ ಮಹಾಭಾಗಾಃ ಪಿತ್ರೇ ನಿರ್ವಾಪಕಾಮಿನೇ ॥೨೦॥**

ಆಮೇಲೆ ರಾಜನಾದ ಧರ್ಮರಾಜನು ತನ್ನ ಎಲ್ಲಾ ತಮ್ಮಂದಿರನ್ನೂ ಕರೆದು ಈ ರೀತಿಯಲ್ಲಿ ಹೇಳಿದನು. ಎಲೈ ಭಾಗ್ಯಶಾಲಿಗಳಿರಾ, ಜಲತರ್ಪಣ ಮುಂತಾದ ಉತ್ತರಕ್ರಿಯೆಗಳನ್ನು ಮಾಡಲು ಇಚ್ಛಿಸುತ್ತಿರುವ ತಂದೆಗೆ ನಾನು ದ್ರವ್ಯವನ್ನು ಕೊಡುವೆನು.

**ತಚ್ಛ್ರುತ್ವಾ ವಚನಂ ಭ್ರಾತುರ್ಜ್ಯೇಷ್ಠಸ್ಯಾಮಿತತೇಜಸಃ ।**
**ಸಂಗ್ರಹೇಽಸ್ಯ ಮಹಾಬಾಹುರ್ಮಾರುತಿಃ ಕುಪಿತೋಽಬ್ರವೀತ್ ॥೨೧॥**

ಅತ್ಯಂತ ತೇಜಸ್ವಿಯಾದ ತನ್ನ ಅಣ್ಣನ ಆ ಮಾತುಗಳನ್ನು ಕೇಳಿ ವಾಯುಪುತ್ರನಾದ ಮಹಾಪರಾಕ್ರಮಶಾಲಿಯಾದ ಭೀಮನು ಅವನ ಒಪ್ಪಿಗೆಯಲ್ಲಿ ಕೋಪಗೊಂಡವನಾಗಿ ಅವನನ್ನು ತನ್ನ ಪಕ್ಷಕ್ಕೆ ತಿರುಗಿಸಲು ಹೀಗೆ ಪ್ರತಿಯಾಗಿ ಹೇಳಿದನು.

**ಧನಂ ದೇಯಂ ಮಹಾಭಾಗ ದುರ್ಯೋಧನಹಿತಾಯ ಕಿಂ ।**
**ಅಂಧೋಽಪಿ ಸುಖಮಾಪ್ನೋತಿ ಮೂರ್ಖತ್ವಂ ಕಿಮುತಃಪರಂ ॥೨೨॥**

ಎಲೈ ಭಾಗ್ಯಶಾಲಿಯೇ, ದುರ್ಯೋಧನನ ಶ್ರೇಯಸ್ಸಿಗಾಗಿ ಹಣವನ್ನು ಕೊಡಬೇಕೇ? ಇದರಿಂದ ಕುರುಡನಾದ ಧೃತರಾಷ್ಟ್ರನೂ ಕೂಡ ಸುಖವನ್ನು ಹೊಂದುವನು. ಆದುದರಿಂದ ನೀನು ಈ ರೀತಿ ಮಾಡುವುದಕ್ಕಿಂತಲೂ ಹೆಚ್ಚಿನ ದಡ್ಡತನವು ಬೇರೊಂದಿದೆಯೇ?

**ತವ ದುರ್ಮಂತ್ರಿತೇನಾಥ ದುಃಖಂ ಪ್ರಾಪ್ತಾ ವನೇ ವಯಂ ।**
**ದ್ರೌಪದೀ ಚ ಮಹಾಭಾಗಾ ಸಮಾನೀತಾ ದುರಾತ್ಮನಾ ॥೨೩॥**

ಓ ಧರ್ಮರಾಯನೇ, ನಿನ್ನ ಇಂಥಾ ಅನುಚಿತವಾದ ಮತ್ತು ಕೆಟ್ಟದಾದ ಆಲೋಚನೆಗಳಿಂದಲೇ ನಾವು ವನವಾಸದುಃಖವನ್ನು ಹೊಂದಿದೆವು. ಅಲ್ಲದೆ ದುಷ್ಟನಾದ ದುಶ್ಶಾಸನನು ಭಾಗ್ಯಶಾಲಿನಿಯಾದ ಗೌರವಾರ್ಹಳಾದ ದ್ರೌಪದಿಯನ್ನು ಸಭೆಗೆ ಎಳೆದುತಂದು ಅವಮಾನಪಡಿಸಿದನು.

**ವಿರಾಟಭವನೇ ವಾಸಃ ಪ್ರಸಾದಾತ್ತವ ಸುವ್ರತ ।**
**ದಾಸತ್ವಂ ಚ ಕೃತಂ ಸರ್ವೈರ್ಮತ್ಸ್ಯಸ್ಯಾಮಿತವಿಕ್ರಮೈಃ ॥೨೪॥**

ನಿಯಮವನ್ನು ಪಾಲಿಸುವ ಧರ್ಮರಾಯನೇ, ನಿನ್ನ ಅನುಗ್ರಹದ ದೆಸೆಯಿಂದಲೇ ಅಲ್ಲವೇ ನಾವು ವಿರಾಟನ ಮನೆಯಲ್ಲಿ ನಾನಾಬಗೆಯ ಸೇವಕರಂತೆ ಅಜ್ಞಾತವಾಸಮಾಡಿದವು! ಅಲ್ಲದೆ, ನಾವು ಅತ್ಯಂತ ಪರಾಕ್ರಮಶಾಲಿಗಳಾಗಿದ್ದರೂ ಮತ್ಸ್ಯರಾಜನ ದಾಸ್ಯವೃತ್ತಿಯನ್ನು ಮಾಡಿದೆವು.

**ದೇವಿತಾ ತ್ವಂ ನ ಚೇಜ್ಜ್ಯೇಷ್ಠಃ ಪ್ರಭವೇತ್ಸಂಕ್ಷಯಃ ಕಥಂ ।**
**ಸೂಪಕಾರೋ ವಿರಾಟಸ್ಯ ಹತ್ವಾ ಭೂಪಂ ತು ಮಾಗಧಂ ॥೨೫॥**

ನಮ್ಮೆಲ್ಲರಿಗೂ ಹಿರಿಯನಾದ ನೀನು ಜೂಜಾಡುವುದರಲ್ಲಿ ಆಸಕ್ತಿಯುಳ್ಳವನಾಗದಿದ್ದಲ್ಲಿ ಮಗಧದೇಶಕ್ಕೆ ದೊರೆಯಾದ ಜರಾಸಂಧನನ್ನು ಕೊಂದು ಕೀರ್ತಿ ಸಂಪಾದಿಸಿದ ನನಗೆ ಐಶ್ವರ್ಯವನ್ನು ಕಳೆದುಕೊಂಡು ವಿರಾಟನಲ್ಲಿ ಅಡಿಗೆಯವನಾಗುವ ಹೀನಸ್ಥಿತಿಯು ಹೇಗೆ ಬರುತ್ತಿತ್ತು?

**ಬೃಹನ್ನಲಾ ಕಥಂ ಜಿಷ್ಣುರ್ಭವೇದ್ಬಾಲಸ್ಯ ನರ್ತಕಃ ।**
**ಕೃತ್ವಾ ವೇಷಂ ಮಹಾಬಾಹುರ್ಯೋಷಾಯಾ ವಾಸವಾತ್ಮಜಃ ॥೨೬॥**

ಅಲ್ಲದೆ ಪರಾಕ್ರಮಶಾಲಿಯಾದಂಥ, ಶತ್ರುಗಳನ್ನು ಜಯಿಸುವ, ಇಂದ್ರನ ಪುತ್ರನಾದ ಅರ್ಜುನನೂ ನಪುಂಸಕನ ವೇಷವನ್ನು ಧರಿಸಿ ಹುಡುಗರಿಗೆ ಸಂಗೀತ ನರ್ತನಗಳನ್ನು ಬೋಧಿಸುವುದಕ್ಕೋಸ್ಕರ ಬೃಹನ್ನಲೆಯಾಗಿ ಹೇಗೆತಾನೇ ಆಗುತ್ತಿದ್ದನು ?

**ಗಾಂಡೀವಶೋಭಿತೌ ಹಸ್ತೌ ಕೃತೌ ಕಂಕಣಶೋಭಿತೌ ।**
**ಮಾನುಷಂ ಚ ವಪುಃ ಪ್ರಾಪ್ಯ ಕಿಂ ದುಃಖಂ ಸ್ಯಾದತಃ ಪರಂ ॥೨೭॥**

ಗಾಂಡೀವಧನುಸ್ಸಿನಿಂದ ತೇಜಸ್ವಿಯಾಗಿ ಬೆಳಗುತ್ತಿದ್ದ ಅರ್ಜುನನ ಕೈಗಳು ಬಳೆಗಳಿಂದ ಅಲಂಕೃತವಾದುವು. ಮನುಷ್ಯಶರೀರವನ್ನು ಹೊಂದಿದವರು ಇದಕ್ಕಿಂತಲೂ ಹೆಚ್ಚಿನ ದುಃಖವಿನ್ನಾವುದನ್ನು ಪಡೆಯಬಹುದು?

**ದೃಷ್ಟ್ವಾ ವೇಣೀಂ ಕೃತಾಂ ಮೂರ್ಧ್ನಿ ಕಜ್ಜಲಂ ಲೋಚನೇ ತಥಾ ।**
**ಅಸಿಂ ಗೃಹೀತ್ವಾ ತರಸಾ ಛೇದ್ಮ್ಯಹಂ ನಾನ್ಯಥಾ ಸುಖಂ ॥೨೮॥**

ತಲೆಯಲ್ಲಿ ಅಲಂಕಾರವಿಲ್ಲದ ಏಕಾಕಾರವಾಗಿ ತಿರಿಚಿರುವ ಕೇಶವನ್ನೂ ಮತ್ತು ಕಾಡಿಗೆಯನ್ನೂ ಕಣ್ಣುಗಳಲ್ಲಿ ಧರಿಸಿರತಕ್ಕ ಅರ್ಜುನನನ್ನು ನೋಡಿ ಉಂಟಾದ ನನ್ನ ದುಃಖವು ಶಾಂತವಾಗಬೇಕಾದರೆ ಕೈಯ್ಯಲ್ಲಿ ಕತ್ತಿಯನ್ನು ಧರಿಸಿ ಆ ಧೃತರಾಷ್ಟ್ರನ ಶಿರಸ್ಸನ್ನು ಕತ್ತರಿಸುತ್ತೇನೆ. ಹಾಗಲ್ಲದೆ ನನಗೆ ಮತ್ತೆ ಯಾವ ಬಗೆಯಿಂದಲೂ ಸುಖವಿಲ್ಲವು.

**ಅಪೃಷ್ಟ್ವಾ ಚ ಮಹೀಪಾಲಂ ನಿಕ್ಷಿಪ್ತೋಽಗ್ನಿರ್ಮಯಾ ಗೃಹೇ ।**
**ದಗ್ಧುಕಾಮಶ್ಚ ಪಾಪಾತ್ಮಾ ನಿರ್ದಗ್ಧೋಽಸೌ ಪುರೋಚನಃ ॥೨೯॥**

ಓ ಧರ್ಮರಾಜನೇ, ದೂರೆಯಾದ ನಿನ್ನನ್ನು ಕೇಳಿ ಆಲೋಚನೆಯನ್ನಾಗಲೀ ಬುದ್ಧಿವಾದವನ್ನಾಗಲೀ ಪಡೆಯದೆ ನಾನು ಭೀಷ್ಮ, ವಿದುರ ಇವರೊಡನೆ ಆಲೋಚಿಸದೆ ದುರ್ಯೋಧನನು ಏರ್ಪಡಿಸಿದ್ದ ಆ ಅರಗಿನ ಮನೆಗೆ ಬೆಂಕಿಯನ್ನು ಹಚ್ಚಿದೆನು. ಆದರಿಂದ ನಮ್ಮನ್ನು ಸುಡಲು ಅಪೇಕ್ಷಿಸಿದ್ದ ಪಾಪಿಯಾದ ಆ ಪುರೋಚನನನ್ನೇ ಸುಟ್ಟುಬಿಟ್ಟೆನು.

**ಕೀಚಕಾ ನಿಹತಾಃ ಸರ್ವೇ ತ್ವಾಮಪೃಷ್ಟ್ವಾ ಜನಾಧಿಪ ।**
**ನ ತಥಾ ನಿಹತಾಃ ಸರ್ವೇ ಸಭಾರ್ಯಾ ಧೃತರಾಷ್ಟ್ರಜಾಃ ॥೩೦॥**

ಎಲೈ ಪ್ರಜೆಗಳಿಗೆ ಒಡೆಯನಾದ ಧರ್ಮರಾಜನೇ, ನಿನ್ನನ್ನು ಕೇಳದೆ ಕೀಚಕರೆಲ್ಲರನ್ನೂ ನಾನೇ ಕೊಂದೆನು. ಆದರೆ ಆ ರೀತಿಯಲ್ಲಿ ನಾನು ಧೃತರಾಷ್ಟ್ರನ ಪುತ್ರರನ್ನು ಆ ಜೂಜಿನ ಸಭೆಯಲ್ಲಿಯೇ ಕೊಲ್ಲಲಿಲ್ಲವು. ಇದಕ್ಕೆ ನಿನ್ನ ಆಲೋಚನೆ ಅಪ್ಪಣೆಗಳೇ ಅಡ್ಡಿಗಳಾದುವು.

**ಮೂರ್ಖತ್ವಂ ತವ ರಾಜೇಂದ್ರ ಗಂಧರ್ವೇಭ್ಯಶ್ಚ ಮೋಚಿತಾಃ ।**
**ದುರ್ಯೋಧನಾದಯಃ ಕಾಮಂ ಶತ್ರವೋ ನಿಗಡೀಕೃತಾಃ ॥೩೧॥**

ಹಿಂದೆ ಚಿತ್ರಾಂಗದನೆಂಬ ಗಂಧರ್ವರಾಜನು ನಮ್ಮ ಶತ್ರುಗಳಾದ ದುರ್ಯೋಧನನೇ ಮೊದಲಾದವರನ್ನು ಬಂಧಿಸಿದ್ದನು. ಆ ಸಮಯದಲ್ಲಿ ನೀನು ಅವರನ್ನು ಬಿಡಿಸಿದೆ! ಎಲೈ ರಾಜಶ್ರೇಷ್ಠನೇ, ಇದು ನಿನ್ನ ಮೂರ್ಖತನವು!

**ದುರ್ಯೋಧನಹಿತಾಯಾದ್ಯ ಧನಂ ದಾತುಂ ತ್ವಮಿಚ್ಛಸಿ ।**
**ನಾಹಂ ದದೇ ಮಹೀಪಾಲ ಸರ್ವಥಾ ಪ್ರೇರಿತಸ್ತ್ವಯಾ ॥೩೨॥**

ಈಗ ನೀನು ಅಂತಹ ದುರ್ಯೋಧನನ ಸದ್ಗತಿಯ ಸುಖಕ್ಕೋಸ್ಕರ ಹಣವನ್ನು ಕೊಡಲು ಇಚ್ಛಿಸುತ್ತಿರುವೆ. ಆದರೆ ನೀನು ನನ್ನನ್ನು ಎಲ್ಲ ಬಗೆಗಳಿಂದ ಪ್ರೇರಿಸಿದರೂ ಈ ದ್ರವ್ಯವನ್ನು ನಾನು ಕೊಡಲಾರೆನು.

**ಇತ್ಯುಕ್ತ್ವಾ ನಿರ್ಗತೇ ಭೀಮೇ ತ್ರಿಭಿಃ ಪರಿವೃತೋ ನೃಪಃ ।**
**ದದೌ ವಿತ್ತಂ ಸುಬಹುಲಂ ಧೃತರಾಷ್ಟ್ರಾಯ ಧರ್ಮಜಃ ॥೩೩॥**

ಹೀಗೆಂದು ಹೇಳಿ ಭೀಮನು ಹೊರಟುಹೋಗಲು, ಆ ಬಳಿಕ ಧರ್ಮರಾಜನು ಅರ್ಜುನ ಮತ್ತು ನಕುಲಸಹದೇವರಿಂದ ಕೂಡಿದವನಾಗಿ ಧೃತರಾಷ್ಟ್ರನಿಗೆ ಬಹಳ ಹೆಚ್ಚಾದ ದ್ರವ್ಯವನ್ನು ಕೊಟ್ಟನು.

**ಕಾರಯಾಮಾಸ ವಿಧಿವತ್ಪುತ್ರಾಣಾಂ ಚೌರ್ಧ್ವದೈಹಿಕಂ ।**
**ದದೌ ದಾನಾನಿ ವಿಪ್ರೇಭ್ಯೋ ಧೃತರಾಷ್ಟ್ರೋಽಂಬಿಕಾಸುತಃ ॥೩೪॥**

ಅಂಬಿಕಾದೇವಿಯ ಮಗನಾದ ಧೃತರಾಷ್ಟ್ರನು ಶಾಸ್ತ್ರಪ್ರಕಾರವಾಗಿ ತನ್ನ ಪುತ್ರರ ಮುಂದಿನ ಲೋಕದಲ್ಲಿ ಪಡೆಯುವ ದೇಹಕ್ಕೆ ತಕ್ಕ ಉತ್ತರಕ್ರಿಯೆಯನ್ನು ಮಾಡಿಸಿದನು. ಅಲ್ಲದೆ ಬ್ರಾಹ್ಮಣರಿಗೆ ಅನೇಕದಾನಗಳನ್ನೂ ಕೊಟ್ಟನು.

**ಕೃತ್ವೌರ್ಧ್ವದೈಹಿಕಂ ಸರ್ವಂ ಗಾಂಧಾರೀಸಹಿತೋ ನೃಪಃ ।**
**ಪ್ರವಿವೇಶ ವನಂ ತೂರ್ಣಂ ಕುಂತ್ಯಾ ಚ ವಿದುರೇಣ ಚ ॥೩೫॥**

ರಾಜನಾದ ಧೃತರಾಷ್ಟ್ರನು ಎಲ್ಲಾ ಉತ್ತರಕ್ರಿಯೆಯನ್ನೂ ನೆರವೇರಿಸಿ, ತನ್ನ ಪತ್ನಿಯಾದ ಗಾಂಧಾರೀಸಮೇತನಾಗಿ ಕುಂತೀದೇವಿ ಮತ್ತು ವಿದುರರೊಡನೆ ಅರಣ್ಯಕ್ಕೆ ತೆರಳಿದನು.

**ಸಂಜಯೇನ ಪರಿಜ್ಞಾತೋ ನಿರ್ಗತೋಽಸೌ ಮಹಾಮತಿಃ ।**
**ಪುತ್ರೈರ್ನಿವಾರ್ಯಮಾಣಾಪಿ ಶೂರಸೇನಸುತಾ ಗತಾ ॥೩೬॥**

ಯಾವಾಗ ಸಂಜಯನಿಗೆ ಈ ವಿಷಯವು ತಿಳಿಯಿತೋ ಆಗಲೇ ಅತಿಬುದ್ಧಿಶಾಲಿಯಾದ ಅವನೂ ಕೂಡ ಅವರ ಜೊತೆಯಲ್ಲಿ ಹೊರಟುಹೋದನು. ಅಲ್ಲದೆ ಶೂರಸೇನನ ಪುತ್ರಿಯಾದ ಕುಂತಿಯೂ ಸಹ ಪುತ್ರರು ತಡೆದಾಗ್ಯೂ ನಿಲ್ಲದೆ ಹೊರಟುಹೋದಳು.

**ವಿಲಪನ್ ಭೀಮಸೇನೋಽಪಿ ತಥಾನ್ಯೇ ಚಾಪಿ ಕೌರವಾಃ ।**
**ಗಂಗಾತೀರಾತ್ಪರಾವೃತ್ಯ ಯಯುಃ ಸರ್ವೇ ಗಜಾಹ್ವಯಂ ॥೩೭॥**

ಭೀಮನು ಮತ್ತು ಇತರರೂ ಕೂಡ ಅತ್ಯಂತವಾಗಿ ರೋದಿಸುತ್ತಾ ಗಂಗಾತೀರಪರ್ಯಂತವಾಗಿ ಸಾಗಕಳುಹಿಸಲು ಹೋದರು. ಅಲ್ಲಿಂದ ಅವರನ್ನು ಹಿಂತಿರುಗಿ ಕಳುಹಿಸಿ ಎಲ್ಲರೂ ಗಜ ಎಂದು ಹೆಸರುಳ್ಳ ತೀರ್ಥಕ್ಷೇತ್ರದ ಸ್ಥಾನಕ್ಕೆ ತೆರಳಿದರು.

**ತೇ ಗತ್ವಾ ಜಾಹ್ನವೀತೀರೇ ಶತಯೂಪಾಶ್ರಮಂ ಶುಭಂ ।**
**ಕೃತ್ವಾ ತೃಣೈಃ ಕುಟೀಂ ತತ್ರ ತಪಸ್ತೇಪುಃ ಸಮಾಹಿತಾಃ ॥೩೮॥**

ಅನಂತರದಲ್ಲಿ ಆ ಧೃತರಾಷ್ಟ್ರಾದಿಗಳು ಗಂಗಾತೀರದಲ್ಲಿರತಕ್ಕ ಶತಯೂಪಾಶ್ರಮನ್ನು ಸೇರಿ ಅಲ್ಲಿ ಹುಲ್ಲುಗಳಿಂದ ಒಂದು ಗುಡಿಸಲನ್ನು ರಚಿಸಿ ಅಚಂಚಲವಾದ ಮನಸ್ಸಿನಿಂದ ತಪವಂಗೈದರು.

**ಗತಾನ್ಯಬ್ದಾನಿ ಷಟ್ ತೇಷಾಂ ಯದಾ ಯಾತಾ ಹಿ ತಾಪಸಾಃ ।**
**ಯುಧಿಷ್ಠಿರಸ್ತು ವಿರಹಾದನುಜಾನಿದಮಬ್ರವೀತ್ ॥೩೯॥**

ಯಾವಾಗ ಈ ಪ್ರಕಾರ ಅವರು ತಪಸ್ಸಿನಲ್ಲಿ ಆಸಕ್ತಿಯುಳ್ಳವರಾಗಿ ಹೊರಟು ಹೋದಮೇಲೆ ಆರುವರ್ಷಗಳು ಕಳೆದವೋ ಆವಾಗ ಯುಧಿಷ್ಠಿರನು ಅವರ ಅಗಲು ವಿಕೆಯಿಂದ ದುಃಖಿತನಾಗಿ ತನ್ನ ತಮ್ಮಂದಿರನ್ನು ಕುರಿತು ಈರೀತಿಯಾಗಿ ಹೇಳಿದನು.

**ಸ್ವಪ್ನೇ ದೃಷ್ಟ್ವಾ ಮಯಾ ಕುಂತೀ ದುರ್ಬಲಾ ವನಸಂಸ್ಥಿತಾ ।**
**ಮನೋ ಮೇ ಜಾಯತೇ ದ್ರಷ್ಟುಂ ಮಾತರಂ ಪಿತರೌ ತಥಾ ॥೪೦॥**

ನಾನು ಸ್ವಪ್ನದಲ್ಲಿ ಕಾಡಿನಲ್ಲಿರತಕ್ಕ ನಮ್ಮ ತಾಯಿಯಾದ ಕುಂತಿಯನ್ನು ಅತ್ಯಂತ ಕೃಶಳಾಗಿರುವಂತೆ ನೋಡಿದೆನು. ಈಗ ನನ್ನ ಮನಸ್ಸು ಆ ನಮ್ಮ ತಾಯಿ ಯನ್ನೂ, ತಾಯಿತಂದೆಗಳಂತಿರುವ ಧೃತರಾಷ್ಟ್ರಗಾಂಧಾರೀದೇವೀ ಇವರನ್ನೂ ನೋಡಲು ತವಕಪಡುತ್ತಿದೆ.

**ವಿದುರಂ ಚ ಮಹಾತ್ಮಾನಂ ಸಂಜಯಂ ಚ ಮಹಾಮತಿಂ ।**
**ರೋಚತೇ ಯದಿ ವಃ ಸರ್ವಾನ್ ವ್ರಜಾಮ ಇತಿ ಮೇ ಮತಿಃ ॥೪೧॥**

ಅಲ್ಲದೆ ಮಹಾತ್ಮನಾದ ವಿದುರನನ್ನು ಮತ್ತು ಬುದ್ಧಿಶಾಲಿಯಾದ ಸಂಜಯು ನನ್ನೂ ಸಹ ನೋಡಲು ನನ್ನ ಮನಸ್ಸು ತ್ವರೆಗೊಳ್ಳುತ್ತಿದೆ. ನಿಮಗೆಲ್ಲರಿಗೂ ಸಮ್ಮತ ವಾಗಿದ್ದಲ್ಲಿ ನಾವೆಲ್ಲರೂ ಹೋಗೋಣವೆಂದು ನನ್ನ ಮತವಾಗಿದೆ.

**ತತಸ್ತೇ ಭ್ರಾತರಃ ಸರ್ವೇ ಸುಭದ್ರಾ ದ್ರೌಪದೀ ತಥಾ ।**
**ವೈರಾಟೀ ಚ ಮಹಾಭಾಗಾ ತಥಾ ನಾಗರಿಕೋ ಜನಃ ॥೪೨॥**

**ಪ್ರಾಪ್ತಃ ಸರ್ವಜನೈಃ ಸಾರ್ಧಂ ಪಾಂಡವಾ ದರ್ಶನೋತ್ಸುಕಾಃ ।**
**ಶತಯೂಪಾಶ್ರಮಂ ಪ್ರಾಪ್ಯ ದದೃಶುಃ ಸರ್ವ ಏವ ತೇ ॥೪೩॥**

ಯುಧಿಷ್ಠಿರನ ಮಾತನ್ನು ಕೇಳಿದ ಅನಂತರದಲ್ಲಿ ಆ ಎಲ್ಲ ಸಹೋದರರೂ, ಸುಭದ್ರೆಯೂ, ದ್ರೌಪದಿಯೂ, ಉತ್ತರೆಯೂ, ಮತ್ತು ನಗರದ ಜನರೂ ಸಹ ಎಲ್ಲ ರಿಂದೊಡಗೂಡಿಕೊಂಡು, ಧೃತರಾಷ್ಟ್ರಾದಿಗಳನ್ನು ನೋಡಲು ಅಭಿಲಾಷೆಯಿಂದ ಆ ಶತಯೂಪಾಶ್ರಮಕ್ಕೆ ಬಂದರು. ಅಲ್ಲಿಗೆ ಬಂದು ಧೃತರಾಷ್ಟ್ರಾದಿಗಳನ್ನು ನೋಡಿದರು.

**ವಿದುರೋ ನ ಯದಾ ದೃಷ್ಟೋ ಧರ್ಮಸ್ತಂ ಪೃಷ್ಟವಾಂಸ್ತದಾ ।**
**ಕ್ವಾಸ್ತೇ ಸ ವಿದುರೋ ಧೀಮಾಂಸ್ತಮುವಾಚಾಂಬಿಕಾಸುತಃ ॥೪೪॥**

ಆದರೆ ಅಲ್ಲಿ ವಿದುರನು ಕಾಣಿಸಲಿಲ್ಲವು. ಆಗ ಧರ್ಮರಾಜನು ಅಂಬಿಕಾ ದೇವಿಯ ಪುತ್ರನಾದ ಧೃತರಾಷ್ಟ್ರನನ್ನು ಕುರಿತು ಆ ಬುದ್ಧಿಶಾಲಿಯಾದ ವಿದುರನೆಲ್ಲಿರುವನೆಂದು ಪ್ರಶ್ನೆಮಾಡಿದನು. ಅದಕ್ಕೆ ಧೃತರಾಷ್ಟ್ರನು ಈ ರೀತಿಯಲ್ಲಿ ಉತ್ತರಕೊಟ್ಟನು.

**ವಿರಕ್ತಶ್ಚರತೇ ಕ್ಷತ್ತಾ ನಿರೀಹೋ ನಿಷ್ಪರಿಗ್ರಹಃ ।**
**ಕುತ್ರಾಪ್ಯೇಕಾಂತಸಂವಾಸೀ ಧ್ಯಾಯತೇಽನ್ತಃ ಸನಾತನಂ ॥೪೫॥**

ಓ ಧರ್ಮರಾಜನೇ, ಅಂತಃಪುರದಲ್ಲಿನ ದೂತಿಯ ಮತ್ತು ವ್ಯಾಸಮುನಿಯ ಮಗನಾದ ವಿದುರನು, ಜ್ಞಾನಿಯಾಗಿ, ಯಾವ ವಸ್ತುವಿನಲ್ಲಿಯೂ ಆಶೆ ಇಲ್ಲದವನಾಗಿ, ಯಾವ ವಸ್ತುವನ್ನೂ ತನ್ನದೆಂದು ಸ್ವೀಕರಿಸದೆ, ಎಲ್ಲಿಯೋ ಗುಪ್ತಸ್ಥಳದಲ್ಲಿ ವಾಸಮಾಡುತ್ತಾ ಮನಸ್ಸಿನಲ್ಲಿ ಆದಿಪುರುಷನಾದ ಪರಮಾತ್ಮನ ಪಾರಮಾರ್ಥಿಕವೂ ನಿತ್ಯವೂ ಆದ ತತ್ತ್ವವನ್ನು ಧ್ಯಾನಿಸುತ್ತಿರುತ್ತಾನೆ.

**ಗಂಗಾಂ ಗಚ್ಛನ್ ದ್ವಿತೀಯೇಽಹ್ನಿ ವನೇ ರಾಜಾ ಯುಧಿಷ್ಠಿರಃ ।**
**ದದರ್ಶ ವಿದುರಂ ಕ್ಷಾಮಂ ತಪಸಾ ಸಂಶಿತವ್ರತಂ ॥೪೬॥**

ಮಾರನೆಯ ದಿನ ರಾಜನಾದ ಧರ್ಮಪುತ್ರನು ಆ ಅರಣ್ಯದಲ್ಲಿ ಗಂಗಾನದಿಗೆ ಹೋಗುತ್ತಿದ್ದನು. ಆಗ ಕಠಿನವಾದ ವ್ರತೋಪವಾಸಗಳಲ್ಲಿ ನಿರತನಾಗಿದ್ದ ಮತ್ತು ತಪಸ್ಸಿನಿಂದ ಕೃಶನಾಗಿದ್ದ ವಿದುರನನ್ನು ನೋಡಿದನು.

**ದೃಷ್ಟ್ವೋವಾಚ ಮಹೀಪಾಲೋ ವಂದೇಽಹಂ ತ್ವಾಂ ಯುಧಿಷ್ಠಿರಃ ।**
**ತಸ್ಥೌ ಶ್ರುತ್ವಾ ಚ ವಿದುರಃ ಸ್ಥಾಣುಭೂತ ಇವಾನಘಃ ॥೪೭॥**

ವಿದುರನನ್ನು ರಾಜನಾದ ಧರ್ಮಪುತ್ರನು ನೋಡಿ, ಯುಧಿಷ್ಠಿರನಾದ ನಾನು ನಮಸ್ಕರಿಸುತ್ತೇನೆ ಎಂದನು. (ನಮಸ್ಕರಿಸುವಾಗ ತನ್ನ ಕುಲನಾಮ ಮುಂತಾದ ಪ್ರವರ, ವಿವರಗಳನ್ನು ಹೇಳಿಕೊಳ್ಳುವುದು ಶಾಸ್ತ್ರದ ಪದ್ಧತಿಯು.) ಪರಿಶುದ್ಧನಾದ ವಿದುರನು ಧರ್ಮರಾಯನ ಧ್ವನಿಯನ್ನು ಕೇಳಿ ಆಶ್ಚರ್ಯಸಂತೋಷಗಳಿಂದ ಪರವಶನಾಗಿ ಬೊಂಬೆಯಂತೆ ಸುಮ್ಮನೆ ನಿಂತನು.

**ಕ್ಷಣೇನ ವಿದುರಸ್ಯಾಸ್ಯಾನ್ನಿಃಸೃತಂ ತೇಜ ಅದ್ಭುತಂ**
**ಲೀನಂ ಯುಧಿಷ್ಠಿರಸ್ಯಾಸ್ಯೇ ಧರ್ಮಾಂಶತ್ವಾತ್ಪರಸ್ಪರಂ ॥೪೮॥**

ಒಂದು ಕ್ಷಣದೊಳಗೆ ಈ ವಿದುರನ ಮುಖದಿಂದ ಆಶ್ಚರ್ಯಕರವಾದ ತೇಜಸ್ಸು ಹೊರಹೊರಟು ಯುಧಿಷ್ಠಿರನ ಮುಖದಲ್ಲಿ ಅಡಗಿಹೋಯಿತು. ಅದೇಕೆಂದರೆ, ಅವರಿಬ್ಬರೂ ಅನ್ಯೋನ್ಯವಾಗಿ ಯಮಧರ್ಮರಾಯನ ಅಂಶದಿಂದ ಜನಿಸಿದವರು.

**ಕ್ಷತ್ತಾ ಜಹೌ ತದಾ ಪ್ರಾಣಾನ್ ಶುಶೋಚಾತಿ ಯುಧಿಷ್ಠಿರಃ ।**
**ದಾಹಾರ್ಥಂ ತಸ್ಯ ದೇಹಸ್ಯ ಕೃತವಾನುದ್ಯಮಂ ನೃಪಃ ॥೪೯॥**

ಆಗ ವಿದುರನು ತನ್ನ ಪ್ರಾಣಗಳನ್ನು ಬಿಟ್ಟನು. ಅದನ್ನು ನೋಡಿ ಯುಧಿಷ್ಠಿರನು ಅತ್ಯಂತವಾಗಿ ದುಃಖಿಸಿದನು. ಅನಂತರದಲ್ಲಿ ಅವನ ದೇಹವನ್ನು ಸುಡಲು ದಹನ ಮುಂತಾದ ಉತ್ತರಕ್ರಿಯೆಗಳನ್ನು ನೆರವೇರಿಸಲು ದೊರೆಯಾದ ಧರ್ಮರಾಯನು ಪ್ರಯತ್ನವನ್ನು ಮಾಡಿದನು.

**ಶೃಣ್ವತಸ್ತು ತದಾ ರಾಜ್ಞೋ ವಾಗುವಾಚಾಶರೀರಿಣೀ ।**
**ವಿರಕ್ತೋಽಯಂ ನ ದಾಹಾರ್ಹೋ ಯಥೇಷ್ಟಂ ಗಚ್ಛ ಭೂಪತೇ ॥೫೦॥**

ಆ ಸಮಯದಲ್ಲಿ ರಾಜನು ಕೇಳುತ್ತಿರುವ ಹಾಗೆಯೇ ಒಂದು ಅಶರೀರ ವಾಣಿಯು ಈ ರೀತಿಯಲ್ಲಿ ಹೇಳಿತು—ಎಲೈ ಮಹಾರಾಜನೇ, ಇವನು ವೈರಾಗ್ಯ ಶಾಲಿಯೂ, ಜ್ಞಾನಿಯೂ ಆದುದರಿಂದ ಇವನ ಶರೀರವನ್ನು ಸುಡುವುದು ಯೋಗ್ಯ ವಲ್ಲವು. ನೀನು ಇಷ್ಟಬಂದಂತೆ ಹಿಂತಿರುಗಿ ಹೋಗು.

**ಶ್ರುತ್ವಾ ತೇ ಭ್ರಾತರಃ ಸರ್ವೇ ಸಸ್ನುರ್ಗಂಗಾಜಲೇಽಮಲೇ ।**
**ಗತ್ವಾ ನಿವೇದಯಾಮಾಸುರ್ಧೃತರಾಷ್ಟ್ರಾಯ ವಿಸ್ತರಾತ್ ॥೫೧॥**

ಈ ವಿಷಯವನ್ನು ಆ ಸಹೋದರರೆಲ್ಲರೂ ಕೇಳಿದಮೇಲೆ, ಅವರೆಲ್ಲರೂ ಶುದ್ಧವಾದ ಗಂಗಾಜಲದಲ್ಲಿ ಸ್ನಾನವನ್ನು ಮಾಡಿದರು. ಅನಂತರದಲ್ಲಿ ಹಿಂತಿರುಗಿ ಹೋಗಿ ಈ ವಿಷಯವನ್ನು ಧೃತರಾಷ್ಟ್ರನಿಗೆ ವಿಸ್ತಾರವಾಗಿ ಹೇಳಿದರು.

**ಸ್ಥಿತಾಸ್ತತ್ರಾಶ್ರಮೇ ಸರ್ವೇ ಪಾಂಡವಾ ನಾಗರೈಃ ಸಹ ।**
**ತತ್ರ ಸತ್ಯವತೀಸೂನುರ್ನಾರದಶ್ಚ ಸಮಾಗತಃ ॥೫೨॥**

ಆ ಶತಯೂಪಾಶ್ರಮದಲ್ಲಿ ಪಾಂಡವರೆಲ್ಲರೂ ನಾಗರಿಕರೊಡನೆ ಇದ್ದರು. ಆಗ ಅಲ್ಲಿಗೆ ಸತ್ಯವತಿಯ ಪುತ್ರನಾದ ವ್ಯಾಸಮಹರ್ಷಿಯೂ, ನಾರದನೂ ಬಂದರು.

**ಮುನಯೋಽನ್ಯೇ ಮಹಾತ್ಮಾನಶ್ಚಾಗತಾ ಧರ್ಮನಂದನಂ ।**
**ಕುಂತೀ ಪ್ರಾಹ ತದಾ ವ್ಯಾಸಂ ಸಂಸ್ಥಿತಂ ಶುಭದರ್ಶನಂ ॥೫೩॥**

ಇನ್ನಿತರಮುನಿಗಳೂ ಕೂಡ ಧರ್ಮರಾಜನ ಸಮೀಪಕ್ಕೆ ಬಂದರು. ಆಗ ಕುಂತಿಯು ಸೌಮ್ಯಸ್ವರೂಪನಾಗಿರತಕ್ಕ ವ್ಯಾಸನನ್ನು ಕುರಿತು ಈ ರೀತಿಯಾಗಿ ಹೇಳಿದಳು.

**ಕೃಷ್ಣ ಕರ್ಣಸ್ತು ಪುತ್ರೋ ಮೇ ಜಾತಮಾತ್ರಸ್ತು ವೀಕ್ಷಿತಃ ।**
**ಮನೋ ಮೇ ತಪ್ಯತೇ ಸರ್ವಂ ದರ್ಶಯಸ್ವ ತಪೋಧನ ॥೫೪॥**

ಕೃಷ್ಣನೆಂಬ ಹೆಸರುಳ್ಳ ಮತ್ತು ದ್ವೀಪದಲ್ಲಿ ಹುಟ್ಟಿದ ಓ ವ್ಯಾಸನೇ, ನಾನು ನನ್ನ ಹಿರಿಯ ಮಗನಾದ ಕರ್ಣನನ್ನು ಹುಟ್ಟಿದ ಕೂಡಲೇ ಮಾತ್ರ ನೋಡಿರುವೆನು. ಈಗ ಅವನನ್ನು ನೋಡಲು ನನ್ನ ಮನಸ್ಸು ವ್ಯಾಕುಲಪಡುತ್ತಿದೆ. ಆದುದರಿಂದ ಎಲೈ ತಪೋನಿಧಿಯಾದ ವ್ಯಾಸನೇ, ಅವೆಲ್ಲವನ್ನೂ ನನಗೆ ತೋರಿಸು.

**ಸಮರ್ಥೋಽಸಿ ಮಹಾಭಾಗ ಕುರು ಮೇ ವಾಂಛಿತಂ ಪ್ರಭೋ ॥**

ಓ ಭಾಗ್ಯಶಾಲಿಯೇ, ನೀನು ನನ್ನ ಕೋರಿಕೆಯನ್ನು ಸಲ್ಲಿಸಲು ಸಮರ್ಥನಾಗಿದ್ದೀಯೆ. ಆದುದರಿಂದ ಓ ಪ್ರಭುವೇ, ಈ ನನ್ನ ಇಷ್ಟಾರ್ಥವನ್ನು ನೆರವೇರಿಸು.

॥ ಗಾಂಧಾರ್ಯುವಾಚ ॥

**ದುರ್ಯೋಧನೋ ರಣೇ ಗಚ್ಛನ್ವೀಕ್ಷಿತೋ ನ ಮಯಾ ಮುನೇ ॥೫೫॥**
**ತಂ ದರ್ಶಯ ಮುನಿಶ್ರೇಷ್ಠ ಪುತ್ರಂ ಮೇ ತ್ವಂ ಸಹಾನುಜಂ ।**

ಓ ಮುನಿವರ್ಯನೇ, ದುರ್ಯೋಧನನು ಯುದ್ಧಮಾಡಲು ಹೊರಟು ಹೋದನು. ಅವನನ್ನು ನಾನು ಪುನಃ ನೋಡಲಿಲ್ಲವು. ಆದುದರಿಂದ ನೀನು ಆ ನನ್ನ ಪುತ್ರನನ್ನೂ ಅವನ ಇತರ ತಮ್ಮಂದಿರನ್ನೂ ನನಗೆ ತೋರಿಸು.

॥ ಸುಭದ್ರೋವಾಚ ॥

**ಅಭಿಮನ್ಯುಂ ಮಹಾವೀರಂ ಪ್ರಾಣಾದಪ್ಯಧಿಕಂ ಪ್ರಿಯಂ ॥೫೬॥**
**ದ್ರಷ್ಟುಕಾಮಾಸ್ಮಿ ಸರ್ವಜ್ಞ ದರ್ಶಯಾದ್ಯ ತಪೋಧನ ।**

ಓ ಎಲ್ಲವನ್ನೂ ತಿಳಿದಿರತಕ್ಕ ತಪಸ್ವಿಯೇ, ಅತ್ಯಂತ ಶೂರನಾದ ಮತ್ತು ನನ್ನ ಪ್ರಾಣಗಳಿಂತಲೂ ಹೆಚ್ಚುಪ್ರೀತಿಪಾತ್ರನಾದ ಅಭಿಮನ್ಯುವನ್ನು ನಾನು ನೋಡಲು ಬಯಸುತ್ತೇನೆ. ಆದುದರಿಂದ ನನಗೆ ಅವನನ್ನು ತೋರಿಸು.

|| ಸೂತ ಉವಾಚ ||

**ಏವಂ ವಿಧಾನಿ ವಾಕ್ಯಾನಿ ಶ್ರುತ್ವಾ ಸತ್ಯವತೀಸುತಃ ॥ ॥೫೭॥**

**ಪ್ರಾಣಾಯಾಮಂ ತತಃ ಕೃತ್ವಾ ದಧ್ಯೌ ದೇವೀಂ ಸನಾತನೀಂ ।**
**ಸಂಧ್ಯಾಕಾಲೇಽಥ ಸಂಪ್ರಾಪ್ತೇ ಗಂಗಾಯಾಂ ಮುನಿಸತ್ತಮಃ ॥೫೮॥**

ಈ ರೀತಿಯಾದ ಪ್ರಾರ್ಥನೆಯ ಮಾತುಗಳನ್ನು ಕೇಳಿದ ಮೇಲೆ, ಮುನಿಗಳಲ್ಲಿ ಶ್ರೇಷ್ಠನಾದ, ಸತ್ಯವತಿಯ ಮಗನಾದ ವ್ಯಾಸನು, ಸಂಧ್ಯಾಕಾಲವು ಬರುತ್ತಿರಲು, ಆ ಗಂಗಾನದಿಯ ತೀರದಲ್ಲಿ ಪ್ರಾಣಾಯಾಮವನ್ನು ಮಾಡಿ, ಯಾವಾಗಲೂ ಇರುವ ಎಂದರೆ ನಿತ್ಯಳಾದ, ಸ್ವಪ್ರಕಾಶರೂಪಳಾದ ದೇವಿಯನ್ನು ಧ್ಯಾನಮಾಡಿದನು.

**ಸರ್ವಾಂಸ್ತಾಂಶ್ಚ ಸಮಾಹೂಯ ಯುಧಿಷ್ಠಿರಪುರೋಗಮಾನ್ ।**
**ತುಷ್ಟಾವ ವಿಶ್ವಜನನೀಂ ಸ್ನಾತ್ವಾ ಪುಣ್ಯಸರಿಜ್ಜಲೇ ॥೫೯॥**

ಆ ಧರ್ಮರಾಜನೇ ಮೊದಲಾದ ಅವರೆಲ್ಲರನ್ನೂ ಕರೆದು, ಪರಿಶುದ್ಧವಾದ ಗಂಗಾನದಿಯಲ್ಲಿ ಸ್ನಾನವನ್ನು ಮಾಡಿ, ಲೋಕಕ್ಕೆ ತಾಯಿಯಾದ ದೇವಿಯನ್ನು ಸ್ತೋತ್ರಮಾಡಿ ಸಂತೋಷಗೊಳಿಸಿದನು.

**ಪ್ರಕೃತಿಂ ಪುರುಷಾರಾಮಾಂ ಸಗುಣಾಂ ನಿರ್ಗುಣಾಂ ತಥಾ ।**
**ದೇವದೇವೀಂ ಬ್ರಹ್ಮರೂಪಾಂ ಮಣಿದ್ವೀಪಾಧಿವಾಸಿನೀಂ ॥೬೦॥**

ದೇವಿಯು ಪ್ರಕೃತಿರೂಪಳು. ಎಂದರೆ, ಸತ್ತ್ವರಜಸ್ತಮಸ್ ಎಂಬ ಮೂರು ಗುಣಗಳೂ ಒಂದೇಸಮನಾಗಿರುವ ಸ್ಥಿತಿಯಲ್ಲಿರುವಾಗ ಪ್ರಕೃತಿ ಎಂದು ವ್ಯವಹಾರವಿದೆ. ಈ ಪ್ರಕೃತಿಯೇ ಎಲ್ಲ ಬಗೆಯ ತೇಜಸ್ಸು ಅಥವಾ ಶಕ್ತಿಸ್ವರೂಪವಾದುದು. ಈ ಪ್ರಕೃತಿಯು ಚೈತನ್ಯರೂಪನಾದ ಪುರುಷನ ಸಾನ್ನಿಧ್ಯಮಹಿಮೆಯಿಂದ ಈ ಪ್ರಪಂಚಾಕಾರವಾಗಿ ಪರಿಣಮಿಸುತ್ತಿರುತ್ತದೆ. ಆದುದರಿಂದ ಎಲ್ಲಕ್ಕೂ ಕಾರಣಭೂತಳಾದ, ಚೈತನ್ಯಸ್ವರೂಪನಾದ ಪುರುಷನನ್ನು ಆಶ್ರಯಿಸಿರುವವಳಾದ, ಸೃಷ್ಟಿಸ್ಥಿತಿಲಯ

ರೂಪವಾದ ವ್ಯವಹಾರದಶೆಯಲ್ಲಿ ಸಮಸ್ತ ಗುಣಗಳಿಂದ ಕೂಡಿರುವಂತೆ ತೋರು ತ್ತಿರುವ, ಮತ್ತು ಪಾರಮಾರ್ಥಿಕಸ್ಥಿತಿಯಲ್ಲಿ ಸರ್ವಗುಣರಹಿತಳಾದ, ದೇವತೆಗಳಿಗೂ ಕೂಡ ಒಡೆಯಳಾದ, ಬ್ರಹ್ಮಸ್ವರೂಪಳಾಗಿರತಕ್ಕ ಮತ್ತು ಮಣಿದ್ವೀಪದಲ್ಲಿ ವಾಸ ಮಾಡತಕ್ಕ, ಪ್ರಕಾಶಸ್ವರೂಪಳಾದ ದೇವಿಯನ್ನು ಸ್ತೋತ್ರಧ್ಯಾನಗಳಿಂದ ವ್ಯಾಸನು ಸಂತೋಷಪಡಿಸಿದನು.

**ಯದಾ ನ ವೇಧಾ ನ ಚ ವಿಷ್ಣುರೀಶ್ವರೋ**
**ನ ವಾಸವೋ ನೈವ ಜಲಾಧಿಪಸ್ತಥಾ ।**
**ನ ವಿತ್ತಪೋ ನೈವ ಯಮಶ್ಚ ಪಾವಕ-**
**ಸ್ತದಾಸಿ ದೇವಿ ತ್ವಮಹಂ ನಮಾಮಿ ತಾಂ** ॥೬೦॥

ಓ ದೇವಿಯೇ, ಯಾವಾಗ, ಈ ಪ್ರಂಚದ ಸೃಷ್ಟಿ ಸ್ಥಿತಿ ಲಯಗಳೆಂಬ ಮಹಾ ಕಾರ್ಯಗಳನ್ನು ನೆರವೇರಿಸುವ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ರುದ್ರರೂ, ದಿಕ್ಪಾಲಕ ರಾದ ಇಂದ್ರ ವರುಣ ಕುಬೇರ ಯಮ ಅಗ್ನಿ ಮುಂತಾದವರೂ ಕೂಡ ಉಂಟಾಗಿರು ವುದಿಲ್ಲವೋ ಆಗಲೂ ನೀನು ಇರುತ್ತೀಯೆ. ಅಂಥಾ ನಿನ್ನನ್ನು ನಾನು ನಮಸ್ಕರಿಸು ತ್ತೇನೆ.

**ಜಲಂ ನ ವಾಯುರ್ನ ಧರಾ ನ ಚಾಂಬರಂ**
**ಗುಣಾ ನ ತೇಷಾಂ ಚ ನ ಚೇಂದ್ರಿಯಾಣ್ಯಹಂ ।**
**ಮನೋ ನ ಬುದ್ಧಿರ್ನ ಚ ತಿಗ್ಮಗುಃ ಶಶೀ**
**ತದಾಽಸಿ ದೇವಿ ತ್ವಮಹಂ ನಮಾಮಿ ತಾಂ** ॥೬೨॥

ಓ ದೇವಿಯೇ, ಯಾವಾಗ, ಪಂಚಮಹಾಭೂತಗಳಾದ ಬೆಳಕುಶಾಖಗಳನ್ನೂ ಕೊಡುವ ತೇಜಸ್ಸು, ನೀರು, ಗಾಳಿ, ಭೂಮಿ, ಆಕಾಶಗಳು ಇವುಗಳಾವವೂ ಇರುವು ದಿಲ್ಲವೋ, ಅಲ್ಲದೆ ಕ್ರಮವಾಗಿ ರೂಪ,ರಸ, ಸ್ಪರ್ಶ, ಗಂಧ, ಶಬ್ದಗಳೆಂಬ ಆ ಭೂತಗಳ ಗುಣಗಳೂ, ಗುಣಗಳನ್ನು ಗ್ರಹಿಸಲು ಸಾಧನವಾದ ಕಣ್ಣು, ನಾಲಗೆ, ಚರ್ಮ, ಮೂಗು, ಕಿವಿಗಳೆಂಬ ಐದು ಜ್ಞಾನೇಂದ್ರಿಯಗಳೂ, ಇವೆಲ್ಲವನ್ನೂ ತಿಳಿಯುವ ಜೀವನೂ, ಮನಸ್ಸೂ, ಬುದ್ಧಿಯೂ, ಮತ್ತು ತೇಜೋರೂಪರಾದ ಸೂರ್ಯ ಚಂದ್ರರೂ ಇರುವುದಿಲ್ಲವೋ ಆಗಲೂ ನೀನು ಇರುತ್ತೀಯೆ. ಅಂಥಾ ನಿನ್ನನ್ನು ನಾನು ನಮಸ್ಕರಿಸುತ್ತೇನೆ.

**ಇಮಂ ಜೀವಲೋಕಂ ಸಮಾಧಾಯ ಚಿತ್ತೇ**
**ಗುಣೈರ್ಲಿಂಗಕೋಶಂ ಚ ನೀತ್ವಾ ಸಮಾಧೌ ।**
**ಸ್ಥಿತಾ ಕಲ್ಪಕಾಲಂ ನಯಸ್ಯಾತ್ಮತಂತ್ರಾ**
**ನ ಕೋಽಪ್ಯಸ್ತಿ ವೇತ್ತಾ ವಿವೇಕಂ ಗತೋಽಪಿ ॥೬೩॥**

ಈಗ ಪ್ರಳಯಕಾಲದಲ್ಲಿನ ಗುಣತ್ರಯದ ಸಾಮ್ಯಾವಸ್ಥೆಯನ್ನು ವರ್ಣಿಸುತ್ತಾರೆ. ಓ ದೇವಿಯೇ, ನೀನು ಈ ಜೀವಸಮುದಾಯವನ್ನು ಪ್ರಳಯಕಾಲದಲ್ಲಿ ಜೀವಸಮಷ್ಟಿರೂಪವಾದ ನಿನ್ನ ಹೃದಯದಲ್ಲಿ ಏಕೀಭವಿಸಿರುವಂತೆ ಸ್ಥಾಪಿಸಿ, ಆ ಜೀವರ ಲಿಂಗಶರೀರ ಸಮಷ್ಟಿಸ್ವರೂಪವಾದ, ಸತ್ತ್ವರಜಸ್ತಮೋಗುಣರೂಪವಾದ, ಮಾಯೆ ಎಂಬ ಉಪಾಧಿಯಿಂದ ಕೂಡಿದ, ಹಿರಣ್ಯಗರ್ಭನನ್ನು ಸಾಮ್ಯಾವಸ್ಥಾರೂಪವಾದ ಸಮಾಧಿಯಲ್ಲಿ ಸುಷುಪ್ತಿಯ ಮೂಲಕ ಹೊಂದಿ ಇತರತಕ್ರವಳಾಗಿ ಪ್ರಳಯದ ಕೊನೆಯವರೆಗೂ ಸ್ವತಂತ್ರಳಾಗಿ ಅವರನ್ನು ಒಯ್ಯುತ್ತಿರುವೆ. ಆ ಸಮಯದಲ್ಲಿ ಈ ರೀತಿಯಾಗಿರುವ, ನಿನ್ನನ್ನು ತಿಳಿಯಬಲ್ಲ ಯಾವ ಜ್ಞಾನಿಯೂ ಇರುವುದಿಲ್ಲವು. ಈ ಪ್ರಪಂಚದ ಸೃಷ್ಟಿಸ್ಥಿತಿಗಳಿಗೆ ಎಷ್ಟು ಕಾಲಪರಿಮಾಣವು ಕ್ಲೃಪ್ತವಾಗಿದೆಯೋ ಅಷ್ಟೇ ಪ್ರಳಯಕ್ಕೂ ಕ್ಲೃಪ್ತವಾಗಿದೆ. ಎಂದು ಪುರಾಣಗಳಲ್ಲಿ ವಿವರಿಸಿರುತ್ತದೆ.

**ಪ್ರಾರ್ಥಯತ್ಯೇಷ ಮಾಂ ಲೋಕೋ ಮೃತಾನಾಂ ದರ್ಶನಂ ಪುನಃ ।**
**ನಾಹಂ ಕ್ಷಮೋಽಸ್ಮಿ ಮಾತಸ್ತ್ವಂ ದರ್ಶಯಾಶು ಜನಾನ್ಮೃತಾನ್ ॥೬೪॥**

ಪಾಂಡವರೇ ಮೊದಲಾದ ಈ ಜನರು ಸತ್ತುಹೋದ ಅವರ ಬಂಧುಮಿತ್ರರ ಪುನಃ ದರ್ಶನವನ್ನು ಪಡೆಯಬೇಕೆಂದು ನನ್ನನ್ನು ಪ್ರಾರ್ಥಿಸುತ್ತಾರೆ. ಆದರೆ, ಓ ತಾಯಿಯೇ, ನಾನು ಇವರಿಗೆ ಅವರನ್ನು ತೋರಿಸಲು ಸಮರ್ಥನಲ್ಲವು. ಆದುದರಿಂದ ನೀನು ಬೇಗನೆ ಸತ್ತುಹೋಗಿರುವ ಆ ದುರ್ಯೋಧನಾದಿಗಳನ್ನು ಇವರಿಗೆ ತೋರಿಸುವ ಅನುಗ್ರಹವನ್ನು ಮಾಡು.

॥ ಸೂತ ಉವಾಚ ॥

**ಏವಂ ಸ್ತುತಾ ತದಾ ದೇವೀ ಮಾಯಾ ಶ್ರೀಭುವನೇಶ್ವರೀ ।**
**ಸ್ವರ್ಗಾದಾಹೂಯ ಸರ್ವಾನ್ಸ್ತೈ ದರ್ಶಯಾಮಾಸ ಪಾರ್ಥಿವಾನ್ ॥೬೫॥**

ಸೂತಮುನಿಯು ಹೇಳಿದನು- ವ್ಯಾಸನು ಈ ರೀತಿಯಾಗಿ ಸ್ತೋತ್ರಮಾಡಿದ ಮೇಲೆ, ಲೋಕಕ್ಕೆ ಒಡೆಯಳಾದ, ಮತ್ತು ಮಾಯಾಸ್ವರೂಪಿಣಿಯಾದ, ಆದಿಲಕ್ಷ್ಮಿ

ಸ್ವರೂಪಳಾದ ದೇವಿಯು ಆ ಎಲ್ಲಾ ರಾಜರೇ ಮುಂತಾದವರನ್ನು ಸ್ವರ್ಗದಿಂದ ಕರೆದು ತೋರಿಸಿದಳು. ಆಗ

**ದೃಷ್ಟ್ವಾ ಕುಂತೀ ಚ ಗಾಂಧಾರೀ ಸುಭದ್ರಾ ಚ ವಿರಾಟಜಾ ।**
**ಪಾಂಡವಾ ಮುಮುದುಃ ಸರ್ವೇ ವೀಕ್ಷ್ಯ ಪ್ರತ್ಯಾಗತಾನ್ ಸ್ವಕಾನ್ ॥೬೬॥**

ಕುಂತಿಯೂ, ಗಾಂಧಾರಿಯೂ, ಸುಭದ್ರೆಯೂ, ವಿರಾಟನ ಮಗಳಾದ ಉತ್ತರೆಯೂ ಮತ್ತು ಎಲ್ಲ ಪಾಂಡವರೂ ಕೂಡ ತಮ್ಮ ಮುಂದೆ ಸ್ವರ್ಗದಿಂದ ಹಿಂತಿರುಗಿ ಬಂದಿರತಕ್ಕ ತಮ್ಮ ಬಂಧುಗಳನ್ನು ನೋಡಿ ಆನಂದಪಟ್ಟರು.

**ಪುನರ್ವಿಸರ್ಜಿತಾಸ್ತೇನ ವ್ಯಾಸೇನಾಮಿತತೇಜಸಾ ।**
**ಸ್ಮೃತ್ವಾ ದೇವೀಂ ಮಹಾಮಾಯಾಮಿಂದ್ರಜಾಲಮಿವೋದ್ಧೃತಂ ॥೬೭॥**

ಅನಂತರದಲ್ಲಿ ಅತ್ಯಂತ ತೇಜಸ್ವಿಯಾದ ವ್ಯಾಸನು, ಮಾಯಾಸ್ವರೂಪಳಾದ ದೇವಿಯನ್ನು ಸ್ಮರಿಸಿ, ಇಂದ್ರಜಾಲವಿದ್ಯೆಯಂತೆ, ವಿಸ್ತಾರವಾಗಿಯೂ, ವಿಶದವಾಗಿಯೂ ಎಷ್ಟು ತೋರುತ್ತಿದ್ದ ಅವರೆಲ್ಲರನ್ನೂ ಹಿಂದಕ್ಕೆ ಕಳುಹಿಸಿದನು.

**ತದಾ ಪೃಷ್ಟ್ವಾ ಯಯುಃ ಸರ್ವೇ ಪಾಂಡವಾ ಮುನಯಸ್ತಥಾ ।**
**ರಾಜಾ ನಾಗಪುರಂ ಪ್ರಾಪ್ತಃ ಕುರ್ವನ್ ವ್ಯಾಸಕಥಾಂ ಪಥಿ ॥೬೮॥**

ಆಗ ಎಲ್ಲ ಪಾಂಡವರೂ ಮುನಿಗಳೂ ಸಹ ಅಲ್ಲಿಂದ ಹೊರಟುಹೋದರು. ಧರ್ಮರಾಜನು ವ್ಯಾಸನಲ್ಲಿ ಭುವನೇಶ್ವರೀದೇವಿಯ ಅನುಗ್ರಹರೂಪವಾದ ಕಥೆಯನ್ನು ದಾರಿಯಲ್ಲಿ ಸ್ಮರಿಸುತ್ತಾ ನಾಗಪುರಕ್ಕೆ ತೆರಳಿದನು.

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಸಪ್ತಮೋಽಧ್ಯಾಯಃ

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ ಏಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

### || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ಸೂತ ಉವಾಚ ||

**ತತೋ ದಿನೇ ತೃತೀಯೇ ಚ ಧೃತರಾಷ್ಟ್ರಃ ಸ ಭೂಪತಿಃ ।**
**ದಾವಾಗ್ನಿನಾ ವನೇ ದಗ್ಧಃ ಸಭಾರ್ಯಃ ಕುಂತಿಸಂಯುತಃ ॥೧॥**

ಪಾಂಡವರು ವನದಿಂದ ಹಸ್ತಿನಾಪುರಕ್ಕೆ ತೆರಳಿದ ಮೇಲೆ, ಮೂರನೇ ದಿನ ರಾಜನಾದ ಧೃತರಾಷ್ಟ್ರನೂ, ಅವನ ಹೆಂಡತಿಯಾದ ಗಾಂಧಾರಿಯೂ ಮತ್ತು ಕುಂತಿಯೂ ಸಹ ಕಾಡ್ಗಿಚ್ಚಿನಿಂದ ಸುಟ್ಟುಹೋದರು.

**ಸಂಜಯಸ್ತೀರ್ಥಯಾತ್ರಾಯಾಂ ಗತಸ್ತ್ಯಕ್ತ್ವಾ ಮಹೀಪತಿಂ ।**
**ಶ್ರುತ್ವಾ ಯುಧಿಷ್ಠಿರೋ ರಾಜಾ ನಾರದಾದ್ದುಃಖಮಾಪ್ತವಾನ್ ॥೨॥**

ಸಂಜಯನು ರಾಜನಾದ ಧೃತರಾಷ್ಟ್ರನನ್ನು ಬಿಟ್ಟು ತೀರ್ಥಯಾತ್ರೆಯಲ್ಲಿರುವಾಗ ಸತ್ತುಹೋದನು. ಈ ವಿಷಯವನ್ನು ಯುಧಿಷ್ಠಿರನು ನಾರದಮುನಿಯಿಂದ ಕೇಳಿ ಬಹಳ ದುಃಖಪಟ್ಟನು.

**ಷಟ್ತ್ರಿಂಶೇಽಥ ಗತೇ ವರ್ಷೇ ಕೌರವಾಣಾಂ ಕ್ಷಯಾತ್ಪುನಃ ।**
**ಪ್ರಭಾಸೇ ಯಾದವಾಃ ಸರ್ವೇ ವಿಪ್ರಶಾಪಾತ್ ಕ್ಷಯಂ ಗತಾಃ ॥೩॥**

ಕೌರವರು ಈ ರೀತಿಯಾಗಿ ನಾಶವಾದ ಮೇಲೆ ಮೂವತ್ತಾರು ವರ್ಷಗಳು ಕಳೆದ ಅನಂತರದಲ್ಲಿ ಯಾದವರೆಲ್ಲರೂ ಸಹ ಬ್ರಾಹ್ಮಣನ ಶಾಪದಿಂದ ಪ್ರಭಾಸನದಿಯ ಕ್ಷೇತ್ರದಲ್ಲಿ ನಾಶವನ್ನು ಹೊಂದಿದರು.

**ತೇ ಪೀತ್ವಾ ಮದಿರಂ ಮತ್ತಾಃ ಕೃತ್ವಾ ಯುದ್ಧಂ ಪರಸ್ಪರಂ ।**
**ಕ್ಷಯಂ ಪ್ರಾಪ್ತಾ ಮಹಾತ್ಮಾನಃ ಪಶ್ಯತೋ ರಾಮಕೃಷ್ಣಯೋಃ ॥೪॥**

ಆ ಯಾದವರು ತುಂಬ ಗಟ್ಟಿಗರಾದರೂ ಮದ್ಯವನ್ನು ಕುಡಿದು ವಿವೇಕ ಶೂನ್ಯರಾಗಿ ತಾವೇ ಪರಸ್ಪರವಾಗಿ ಹೊಡೆದಾಡುತ್ತಾ ಬಲರಾಮ, ಮತ್ತು ಕೃಷ್ಣರು ನೋಡುತ್ತಿರುವಾಗಲೇ ಮೃತಪಟ್ಟರು.

**ದೇಹಂ ತತ್ಯಾಜ ರಾಮಸ್ತು ಕೃಷ್ಣಃ ಕಮಲಲೋಚನಃ ।**
**ವ್ಯಾಧಬಾಣಹತಃ ಶಾಪಂ ಪಾಲಯನ್ ಭಗವಾನ್ ಹರಿಃ ॥೫॥**

ಆಮೇಲೆ ಬಲರಾಮನೂ ಸಹ ತನ್ನ ದೇಹವನ್ನು ಬಿಟ್ಟನು. ಕಮಲದಂತೆ ದೊಡ್ಡದಾಗಿಯೂ ಸುಂದರವಾಗಿಯೂ ಇರುವ ಕಣ್ಣುಗಳುಳ್ಳ ಭಗವಂತನಾದ ಶ್ರೀಕೃಷ್ಣನೂ ಮುನಿಶಾಪವನ್ನು ಪಾಲಿಸಲೋಸುಗ ಬೇಡನ ಬಾಣದಿಂದ ಮರಣ ವನ್ನು ಹೊಂದಿದನು.

**ವಸುದೇವಸ್ತು ತಚ್ಛ್ರುತ್ವಾ ದೇಹತ್ಯಾಗಂ ಹರೇರಥ ।**
**ಜಹೌ ಪ್ರಾಣಾನ್ ಶುಚೀನ್ ಕೃತ್ವಾ ಚಿತ್ತೇ ಶ್ರೀಭುವನೇಶ್ವರೀಂ ॥೬॥**

ಅನಂತರದಲ್ಲಿ ವಸುದೇವನು ಶ್ರೀಕೃಷ್ಣನ ಮರಣವಾರ್ತೆಯನ್ನು ಕೇಳಿ, ಲೋಕಕ್ಕೆ ಒಡೆಯಳಾದ ದೇವಿಯನ್ನು ಹೃದಯದಲ್ಲಿ ಧ್ಯಾನಿಸುತ್ತಾ ಪವಿತ್ರವಾದ ತನ್ನ ಪ್ರಾಣವನ್ನು ಬಿಟ್ಟನು.

**ಅರ್ಜುನಸ್ತು ತತೋ ಗತ್ವಾ ಪ್ರಭಾಸೇ ಚಾತಿದುಃಖಿತಃ ।**
**ಸಂಸ್ಕಾರಂ ತತ್ರ ಸರ್ವೇಷಾಂ ಯಥಾಯೋಗ್ಯಂ ಚಕಾರ ಹ ॥೭॥**

ಅನಂತರದಲ್ಲಿ ಅರ್ಜುನನಾದರೋ ಪ್ರಭಾಸತೀರ್ಥಕ್ಕೆ ಹೋಗಿ ಅತ್ಯಂತ ವ್ಯಸನ ಗೊಂಡವನಾಗಿ ಅವರೆಲ್ಲರ ಉತ್ತರಕ್ರಿಯೆಗಳೆಂಬ ಸಂಸ್ಕಾರವನ್ನು ಅವರವರಿಗೆ ತಕ್ಕಂತೆ ಸರಿಯಾಗಿ ಮಾಡಿದನು.

**ಸಮೀಕ್ಷ್ಯಾಥ ಹರೇರ್ದೇಹಂ ಕೃತ್ವಾ ಕಾಷ್ಠಸ್ಯ ಸಂಚಯಂ ।**
**ಅಷ್ಟಾಭಿಃ ಸಹ ಪತ್ನೀಭಿರ್ದಾಹಯಾಮಾಸ ಪಾರ್ಥಿವಃ ॥೮॥**

ಆ ಮೇಲೆ ಶ್ರೀಕೃಷ್ಣನ ಮೃತಶರೀರವನ್ನು ನೋಡಿ ಅರ್ಜುನನು ಕಟ್ಟಿಗೆಗಳನ್ನು ಒಟ್ಟುಗೂಡಿಸಿ ಆ ಕೃಷ್ಣನ ಎಂಟುಜನ ಹೆಂಡತಿಯರಿಂದ ಕೂಡಿರುವ ಅದನ್ನು ಸುಡಿಸಿದನು.

**ದೇಹಂ ರಾಮಸ್ಯ ರೇವತ್ಯಾ ಸಹ ದಗ್ಧ್ವಾ ವಿಭಾವಸೌ ।**
**ಅರ್ಜುನೋ ದ್ವಾರಕಾಮೇತ್ಯ ಪುರಾನ್ನಿಷ್ಕ್ರಾಮಯಜ್ಜನಂ ॥೯॥**

ಬಲರಾಮನ ಶರೀರವನ್ನು ಅವನ ಹೆಂಡತಿಯಾದ ರೇವತಿಯೊಡನೆ ಬೆಂಕಿಯಲ್ಲಿ ಸುಟ್ಟು ಎಲ್ಲರಿಗೂ ದಹನಾದಿಕ್ರಿಯೆಗಳನ್ನು ನೆರವೇರಿಸಿದನು. ಮತ್ತು ಅರ್ಜುನನು ದ್ವಾರಕೆಗೆ ಹೋದನು. ಅಲ್ಲಿ ಹೋಗಿ ಜನರೆಲ್ಲರನ್ನೂ ಅಪಾಯಕ್ಕೆ ಗುರಿಯಾಗದಂತೆ ಕಾಪಾಡಲು ಆ ಪಟ್ಟಣದಿಂದ ಹೊರಡಲು ಪ್ರೇರಿಸಿದನು. ಕೃಷ್ಣನ ಮಹಿಮೆಯಿಂದ ಸಮುದ್ರಮಧ್ಯದಲ್ಲಿದ್ದ ಆ ದ್ವಾರಕಾನಗರವು ರಕ್ಷಿತವಾಗಿತ್ತು. ಅವನ ಮರಣವಾದ ಮೇಲೆ ಸಾಗರವು ಅದನ್ನು ಮುಳುಗಿಸಿಬಿಡುವುದೆಂದು ತಿಳಿದು ಅರ್ಜುನನು ಹಾಗೆ ಮಾಡಿದನು.

**ಪುರೀ ಸಾ ವಾಸುದೇವಸ್ಯ ಪ್ಲಾವಿತೋದಧಿನಾ ತತಃ ।**
**ಅರ್ಜುನಃ ಸರ್ವಲೋಕಾನ್ಸ್ವೈ ಗೃಹೀತ್ವಾ ನಿರ್ಗತಸ್ತದಾ ॥೧೦॥**

ಆಮೇಲೆ ಅರ್ಜುನನು ನಿರೀಕ್ಷಿಸಿದ್ದಂತೆಯೇ ಶ್ರೀಕೃಷ್ಣನ ಪಟ್ಟಣವಾದ ದ್ವಾರಕೆಯು ಸಮುದ್ರದಲ್ಲಿ ಮುಳುಗಿಹೋಯಿತು. ಅರ್ಜುನನು ಆಗ ಎಲ್ಲ ಜನರನ್ನೂ ಕರೆದುಕೊಂಡು ಆ ಪಟ್ಟಣದಿಂದ ಹೊರಟನು.

**ಕೃಷ್ಣಪತ್ನ್ಯಸ್ತದಾ ಮಾರ್ಗೇ ಚೌರಾಭೀರೈಶ್ಚ ಲುಂಠಿತಾಃ ।**
**ಧನಂ ಸರ್ವಂ ಗೃಹೀತಂ ಚ ನಿಸ್ತೇಜಾಶ್ಚಾರ್ಜುನೋಽಭವತ್ ॥೧೧॥**

ಹೊರಟುಬರುತ್ತಿರುವಾಗ ದಾರಿಯಲ್ಲಿ ಕೃಷ್ಣನ ಹೆಂಡಿರನ್ನು ಕಳ್ಳರು ಮತ್ತು ಗೋಪಾಲಕರೂ ಮೋಸಗೊಳಿಸಿ ಎಲ್ಲಾ ಹಣವನ್ನೂ ದೋಚಿಕೊಂಡುಹೋದರು. ಅಲ್ಲದೆ ಅರ್ಜುನನೂ ಶ್ರೀಕೃಷ್ಣನ ಬೆಂಬಲವಿಲ್ಲದ್ದರಿಂದ ತೇಜಸ್ಸಿಲ್ಲದವನಾಗಿ ಅವರನ್ನು ಕಾಪಾಡಲಾರದೆ ಹೋದನು.

**ಇಂದ್ರಪ್ರಸ್ಥೇ ಸಮಾಗಮ್ಯ ವಜ್ರೋ ರಾಜಾ ಕೃತಸ್ತದಾ ।**
**ಅನಿರುದ್ಧಸುತೋ ನಾಮ್ನಾ ಪಾರ್ಥೇನಾಮಿತತೇಜಸಾ ॥೧೨॥**

ಇಂದ್ರಪ್ರಸ್ಥಕ್ಕೆ ಬಂದಮೇಲೆ ತೇಜಸ್ವಿಯಾದ ಅರ್ಜುನನು, ಅನಿರುದ್ಧನ ಪುತ್ರನಾದ ವಜ್ರನೆಂಬವನನ್ನು ಯಾದವರ ಅಧಿಪತಿಯನ್ನಾಗಿ ಮಾಡಿದನು.

**ವ್ಯಾಸಾಯ ಕಥಿತಂ ದುಃಖಂ ತೇನೋಕ್ತೋಽಸೌ ಮಹಾರಥಃ ।**
**ಪುನರ್ಯದಾ ಹರಿಸ್ತ್ವಂ ಚ ಭವಿತಾಽಸಿ ಮಹಾಮತೇ ॥೧೩॥**

ಅರ್ಜುನನು ತಾನು ಶಕ್ತಿಹೀನನಾಗಿರುವುದನ್ನು ನೋಡಿ ಬಹಳ ವ್ಯಸನಪಟ್ಟು ಈ ದುಃಖವನ್ನು ವ್ಯಾಸನಿಗೆ ತಿಳಿಸಿದನು. ವ್ಯಾಸನು ಅರ್ಜುನನಿಗೆ ಈ ಪ್ರಕಾರವಾಗಿ ಹೇಳಿದನು. ಎಲೈ ಅತ್ಯಂತ ಬುದ್ಧಿಶಾಲಿಯಾದ ಅರ್ಜುನನೇ, ಇನ್ನು ಮುಂದೆ ಪುನಃ ನೀನೂ ಮತ್ತು ಶ್ರೀಕೃಷ್ಣನೂ ಯಾವಾಗ ಅವತರಿಸುವಿರೋ,

**ತದಾ ತೇಜಸ್ತವಾತ್ಯುಗ್ರಂ ಭವಿಷ್ಯತಿ ಪುನರ್ಯುಗೇ ।**
**ತಚ್ಛ್ರುತ್ವಾ ವಚನಂ ಪಾರ್ಥೋ ಗತ್ವಾ ನಾಗಪುರೇಽರ್ಜುನಃ ॥೧೪॥**

ಆಗ ಮುಂದಿನ ಯುಗದಲ್ಲಿ ನಿನ್ನ ತೇಜಸ್ಸು ಅತ್ಯಂತ ಪ್ರಖರವಾಗಿ ನಿನ್ನಲ್ಲಿ ಮರಳಿ ಉಂಟಾಗುವುದು. ಅರ್ಜುನನು ಆ ಮಾತನ್ನು ಕೇಳಿ ಅನಂತರದಲ್ಲಿ ನಾಗ ಪುರಕ್ಕೆ ಹೋದನು.

**ದುಃಖಿತೋ ಧರ್ಮರಾಜಾನಂ ವೃತ್ತಾಂತಂ ಸರ್ವಮಬ್ರವೀತ್ ।**
**ದೇಹತ್ಯಾಗಂ ಹರೇಃ ಶ್ರುತ್ವಾ ಯಾದವಾನಾಂ ಕ್ಷಯಂ ತಥಾ ॥೧೫॥**

ಅರ್ಜುನನು ಅತ್ಯಂತ ದುಃಖದಿಂದ ಧರ್ಮರಾಜನಿಗೆ ಈ ಎಲ್ಲ ಸಮಾಚಾರ ವನ್ನು ತಿಳಿಸಿದನು. ಶ್ರೀಕೃಷ್ಣನ ಮರಣವನ್ನೂ ಹಾಗೆಯೇ ಯದುಕುಲದವರ ನಾಶವನ್ನೂ ಸಹ ಕೇಳಿ,

**ಗಮನಾಯ ಮತಿಂ ಚಕ್ರೇ ರಾಜಾ ಹೈಮಾಚಲಂ ಪ್ರತಿ ।**
**ಷಟ್ತ್ರಿಂಶದ್ವಾರ್ಷಿಕಂ ರಾಜ್ಯೇ ಸ್ಥಾಪಯಿತ್ವೋತ್ತರಾಸುತಂ ॥೧೬॥**

ರಾಜನಾದ ಯುಧಿಷ್ಠಿರನು ಹಿಮವತ್ಪರ್ವತಕ್ಕೆ ಹೋಗಲು ಇಚ್ಛಿಸಿದನು. ಅನಂತರದಲ್ಲಿ ಮೂವತ್ತಾರು ವರ್ಷ ವಯಸ್ಸಿನವನಾಗಿದ್ದ ಉತ್ತರೆಯ ಮಗನಾದ ಪರೀಕ್ಷಿತನನ್ನು ರಾಜ್ಯಭಾರನಿರ್ವಾಹದ ಕಾರ್ಯದಲ್ಲಿ ಅನುಭವ ಬರುವವರೆಗೆ ಯುವ ರಾಜನಂತೆ ಪಟ್ಟಾಭಿಷೇಕಮಾಡಿಸಿ ನಿಲ್ಲಿಸಿದನು.

**ನಿರ್ಜಗಾಮ ವನಂ ರಾಜಾ ದ್ರೌಪದ್ಯಾ ಭ್ರಾತೃಭಿಃ ಸಹ ।**
**ಷಟ್ತ್ರಿಂಶಚ್ಚೈವ ವರ್ಷಾಣಿ ಕೃತ್ವಾ ರಾಜ್ಯಂ ಗಜಾಹ್ವಯೇ ॥೧೭॥**

ಹೀಗೆ ಆ ಹಸ್ತಿನಾಪುರದಲ್ಲಿ ಮೂವತ್ತಾರು ವರ್ಷಗಳವರೆಗೆ ರಾಜ್ಯಭಾರದ ಮೇಲುಸ್ತುವಾರಿಯನ್ನು ನೋಡುತ್ತಿದ್ದು, ಆ ಮೇಲೆ ಯುಧಿಷ್ಠಿರನು ದ್ರೌಪದಿಯಿಂದಲೂ ಸಹೋದರರಿಂದಲೂ ಕೂಡಿದವನಾಗಿ ಅರಣ್ಯಕ್ಕೆ ಹೊರಟುಹೋದನು.

**ಗತ್ವಾ ಹಿಮಾಚಲೇ ಷಟ್ ತೇ ಜಹುಃ ಪ್ರಾಣಾನ್ ಪೃಥಾಸುತಾಃ ।**
**ಪರೀಕ್ಷಿದಪಿ ರಾಜರ್ಷಿಃ ಪ್ರಜಾಃ ಸರ್ವಾಃ ಸುಧಾರ್ಮಿಕಃ ॥೧೮॥**

ಆ ಮೇಲೆ ಕುಂತಿಯ ಮಕ್ಕಳಾದ ಆ ಐವರು ಪಾಂಡವರೂ ಮತ್ತು ದ್ರೌಪದಿಯೂ ಸಹ ಹಿಮವತ್ಪರ್ವತಕ್ಕೆ ಹೋಗಿ, ಆ ಯಾತ್ರೆಯಲ್ಲಿ ತಮ್ಮ ಪ್ರಾಣಗಳನ್ನು ಬಿಟ್ಟರು. ಧಾರ್ಮಿಕನಾದ ಮತ್ತು ರಾಜಶ್ರೇಷ್ಠನಾದ ಪರೀಕ್ಷಿತನೂ ಸಹ ಎಲ್ಲ ಪ್ರಜೆಗಳನ್ನೂ,

**ಅಪಾಲಯಚ್ಚ ರಾಜೇಂದ್ರಃ ಷಷ್ಟಿವರ್ಷಾಣ್ಯತಂದ್ರಿತಃ ।**
**ಬಭೂವ ಮೃಗಯಾಶೀಲೋ ಜಗಾಮ ಚ ವನಂ ಮಹತ್ ॥೧೯॥**

ಅರವತ್ತು ವರ್ಷಗಳ ಕಾಲವೂ ಆಲಸ್ಯವಿಲ್ಲದೆ ಆಸಕ್ತಿಯಿಂದ ಕಾಪಾಡುತ್ತಿದ್ದನು. ಆಮೇಲೆ ಬೇಟೆಯನ್ನು ಆಡಲು ಇಚ್ಛೆಯುಳ್ಳವನಾಗಿ ಒಂದುದಿನ ದೊಡ್ಡ ಕಾಡಿಗೆ ಹೋದನು.

**ವಿದ್ಧಂ ಮೃಗಂ ವಿಚಿನ್ವಾನೋ ಮಧ್ಯಾಹ್ನೇ ಭೂಪತಿಃ ಸ್ವಯಂ ।**
**ತೃಷಿತಶ್ಚ ಪರಿಶ್ರಾಂತಃ ಕ್ಷುಧಿತಶ್ಚೋತ್ತರಾಸುತಃ ॥೨೦॥**

ಉತ್ತರೆಯ ಮಗನಾದ ಆ ಪರೀಕ್ಷಿತರಾಜನು ಕಾಡಿನಲ್ಲಿ ಒಂದು ಹರಿಣಮೃಗವನ್ನು ಹೊಡೆದು ಆ ಮೃಗವನ್ನು ಹುಡುಕುತ್ತಾ ಹೋಗುತ್ತಿರುವಾಗ ಮಧ್ಯಾಹ್ನವಾಗಲು, ಬಾಯಾರಿಕೆಯಿಂದಲೂ, ಹಸಿವಿನಿಂದಲೂ ಬಹಳವಾಗಿ ಬಳಲಿದನು.

**ರಾಜಾ ಘರ್ಮೇಣ ಸಂತಪ್ತೋ ದದರ್ಶ ಮುನಿಮಂತಿಕೇ ।**
**ಧ್ಯಾನೇ ಸ್ಥಿತಂ ಮುನಿಂ ರಾಜಾ ಜಲಂ ಪಪ್ರಚ್ಛ ಚಾತುರಃ ॥೨೧॥**

ಈ ರೀತಿಯಾಗಿ ಬಿಸಲಿನಿಂದ ಬಳಲಿದ ರಾಜನು ಸಮೀಪದಲ್ಲಿ ಒಬ್ಬ ಋಷಿಯನ್ನು ನೋಡಿದನು. ಆ ಮುನಿಯು ಧ್ಯಾನಮಗ್ನನಾಗಿರುವಾಗಲೇ ರಾಜನು ಆತುರನಾಗಿದ್ದುದರಿಂದ ಅವನನ್ನು ಕುರಿತು ಕುಡಿಯುವುದಕ್ಕೆ ನೀರನ್ನು ಕೇಳಿದನು.

**ನೋವಾಚ ಕಿಂಚಿನ್ಮೌನಸ್ಥಶ್ಚುಕೋಪ ನೃಪತಿಸ್ತದಾ ।**
**ಮೃತಂ ಸರ್ಪಂ ತದಾಽಽದಾಯ ಧನುಷ್ಕೋಟ್ಯಾ ತೃಷಾತುರಃ ॥೨೨॥**

ಆದರೆ ಆ ಮುನಿಯು ಧ್ಯಾನಮಗ್ನನಾಗಿದ್ದುದರಿಂದ ಏನನ್ನೂ ಹೇಳದೆ ಸುಮ್ಮನಿದ್ದನು. ಆಗ ರಾಜನು ಬಾಯಾರಿಕೆಯಿಂದ ಪೀಡಿತನಾಗಿದ್ದುದರಿಂದ ಕೋಪಗೊಂಡು ತನ್ನ ಧನುಸ್ಸಿನ ತುದಿಯಿಂದ ಅಲ್ಲಿ ಬಿದ್ದಿದ್ದ ಒಂದು ಸತ್ತಹಾವನ್ನು ತೆಗೆದುಕೊಂಡು,

**ಕಲಿನಾಽಽವಿಷ್ಟಚಿತ್ತಸ್ತು ಕಂಠೇ ತಸ್ಯ ನ್ಯವೇಶಯತ್ ।**
**ಆರೋಪಿತೇ ತಥಾ ಸರ್ಪೇ ನೋವಾಚ ಮುನಿಸತ್ತಮಃ ॥೨೩॥**

ಕಲಿಯಿಂದ ಆವರಿಸಲ್ಪಟ್ಟ ಮನಸ್ಸುಳ್ಳವನಾಗಿದ್ದುದರಿಂದ ಆ ಋಷಿಯ ಕಂಠದಲ್ಲಿ ಆ ಹಾವನ್ನು ಹಾರದಂತೆ ಹಾಕಿದನು. ಆದರೂ ಆ ಮುನಿಶ್ರೇಷ್ಠನು ಸಮಾಧಿಯಲ್ಲಿದ್ದುದರಿಂದ ಯಾವ ಮಾತನ್ನೂ ಆಡಲಿಲ್ಲ.

**ನ ಚಚಾಲ ಸಮಾಧಿಸ್ಥೋ ರಾಜಾಪಿ ಸ್ವಗೃಹಂ ಗತಃ ।**
**ತಸ್ಯ ಪುತ್ರೋಽತಿತೇಜಸ್ವೀ ಗವಿಜಾತೋ ಮಹಾತಪಾಃ ॥೨೪॥**

ಅಲ್ಲದೆ ಧ್ಯಾನಮಗ್ನನಾಗಿದ್ದ ಆ ಮುನಿಯು ಸ್ವಲ್ಪವೂ ಅಲುಗಾಡಲಿಲ್ಲವು. ರಾಜನು ಸಹ ತನ್ನ ಮನೆಗೆ ಹಿಂತಿರುಗಿ ಬಂದನು. ಆ ಮುನಿಗೆ ಮಹಾತಪಸ್ವಿಯಾದ ಗವಿಜಾತನೆಂಬ ಒಬ್ಬ ಮಗನಿದ್ದನು.

**ಮಹಾಶಾಕ್ತೋಽಥ ಶುಶ್ರಾವ ಕ್ರೀಡಮಾನೋ ವನಾಂತಿಕೇ ।**
**ಮಿತ್ರಾಣ್ಯಾಹುಶ್ಚ ತತ್ಪುತ್ರಂ ಪಿತುಃ ಕಂಠೇ ತವಾಧುನಾ ॥೨೫॥**

ಶಕ್ತ್ಯುಪಾಸಕನಾದ ಆ ಗವಿಜಾತನು ಈ ವಿಷಯವನ್ನು ಕೇಳಿದನು. ಅವನು ಕಾಡಿನ ಸಮೀಪದಲ್ಲಿ ಆಟವಾಡುತ್ತಿರುವ ಸಮಯದಲ್ಲಿ ಅವನ ಸ್ನೇಹಿತರು ಆ ಮುನಿಪುತ್ರನಾದ ಗವಿಜಾತನನ್ನು ಕುರಿತು, ಓ ಮುನೀಶ್ವರನೇ, ನಿನ್ನ ತಂದೆಯು ಕೊರಳಲ್ಲಿ ಈಗ

**ಲಂಬಿತೋಽಸ್ತಿ ಮೃತಃ ಸರ್ಪಃ ಕೇನಾಪೀತಿ ಮುನೀಶ್ವರ ।**
**ತೇಷಾಂ ತದ್ವಚನಂ ಶ್ರುತ್ವಾ ಚುಕೋಪಾತಿಶಯಂ ತದಾ ॥೨೬॥**

ಯಾವನಿಂದಲೋ ಒಂದು ಸತ್ತಹಾವು ತೂಗುಹಾಕಲ್ಪಟ್ಟಿದೆ ಎಂದು ಹೇಳಿದರು. ಅವರ ಆ ಮಾತನ್ನು ಕೇಳಿ ಗವಿಜಾತನು ಆಗ ಅತ್ಯಂತ ಕೋಪಗೊಂಡನು.

**ಶಶಾಪ ನೃಪತಿಂ ಕ್ರುದ್ಧೋ ಗೃಹೀತ್ವಾಶು ಕರೇ ಜಲಂ ।**
**ಪಿತುಃ ಕಂಠೇಽದ್ಯ ಮೇ ಯೇನ ವಿನಿಕ್ಷಿಪ್ತೋ ಮೃತೋರಗಃ ॥೨೭॥**

ಹೀಗೆ ಕೋಪಗೊಂಡವನಾಗಿ ಕೈಯ್ಯಲ್ಲಿ ನೀರನ್ನು ತೆಗೆದುಕೊಂಡು ರಾಜನನ್ನು ಈ ರೀತಿಯಾಗಿ ಶಪಿಸಿದನು—ಯಾವ ಮನುಷ್ಯನು ನನ್ನ ತಂದೆಯ ಕುತ್ತಿಗೆಯಲ್ಲಿ ಸತ್ತಹಾವನ್ನು ಹಾಕಿದನೋ,

**ತಕ್ಷಕಃ ಸಪ್ತರಾತ್ರೇಣ ತಂ ದಶೇತ್ಪಾಪಪೂರುಷಂ ।**
**ಮುನೇಃ ಶಿಷ್ಯೋಽಥ ರಾಜಾನಂ ಸಮುಪೇತ್ಯ ಗೃಹೇ ಸ್ಥಿತಂ ॥೨೮॥**

ಆ ಪಾಪಿಯನ್ನು ಇನ್ನು ಏಳು ರಾತ್ರಿಯ ಒಳಗೆ ತಕ್ಷಕ ಎಂಬ ಸರ್ಪವು ಕಚ್ಚಲಿ ಎಂದು ಶಾಪವನ್ನು ಕೊಟ್ಟನು. ಅನಂತರ ಆ ಮುನಿಶಿಷ್ಯರಲ್ಲೊಬ್ಬನು ಅರಮನೆಯಲ್ಲಿರುವ ರಾಜನ ಸಮೀಪಕ್ಕೆ ಬಂದು,

**ಶಾಪಂ ನಿವೇದಯಾಮಾಸ ಮುನಿಪುತ್ರೇಣ ಚಾರ್ಪಿತಂ ।**
**ಅಭಿಮನ್ಯುಸುತಃ ಶ್ರುತ್ವಾ ಶಾಪಂ ದತ್ತಂ ದ್ವಿಜೇನ ವೈ ॥೨೯॥**

ಮುನಿಯ ಮಗನಾದ ಗವಿಜಾತನಿಂದ ಕೊಡಲ್ಪಟ್ಟ ಶಾಪದ ವಿಚಾರವನ್ನು ರಾಜನಿಗೆ ತಿಳಿಸಿದನು. ಅಭಿಮನ್ಯುವಿನ ಮಗನಾದ ಪರೀಕ್ಷಿತನು ಬ್ರಾಹ್ಮಣನಿಂದ ಕೊಡಲ್ಪಟ್ಟ ಶಾಪವನ್ನು ಕೇಳಿ,

**ಅನಿವಾರ್ಯಂ ಚ ವಿಜ್ಞಾಯ ಮಂತ್ರಿವೃದ್ಧಾನುವಾಚ ಹ ।**
**ಶಪ್ತೋಽಹಂ ದ್ವಿಜರೂಪೇಣ ಮಮ ದ್ವೇಷಾದಸಂಶಯಂ ॥೩೦॥**

ಈ ಶಾಪವನ್ನು ಹೋಗಲಾಡಿಸಲು ಅಸಾಧ್ಯವೆಂದು ತಿಳಿದು ಪರೀಕ್ಷಿತನು ಮಂತ್ರಿಗಳನ್ನು ಕುರಿತು ಈ ರೀತಿಯಾಗಿ ಹೇಳಿದನು. ನನ್ನ ಅಪರಾಧದಿಂದ ಉಂಟಾದ ನನ್ನ ದ್ವೇಷವೇ ಆ ಬ್ರಾಹ್ಮಣರೂಪದಿಂದ ಬಂದು ನನಗೆ ಶಾಪವನ್ನು ಕೊಟ್ಟಿದೆ. ಇದರಲ್ಲಿ ಸಂದೇಹವಿಲ್ಲವು.

**ಕಿಂ ವಿಧೇಯಂ ಮಯ್ಯಾಽಮಾತ್ಯಾ ಉಪಾಯಶ್ಚಿಂತ್ಯತಾಮಿಹ ।**
**ಮೃತ್ಯುಃಕಿಲಾನಿವಾರ್ಯೋಽಸೌ ವದಂತಿ ವೇದವಾದಿನಃ ॥೩೦॥**

ಎಲೈ ಮಂತ್ರಿಗಳಿರಾ, ನಾನು ಏನನ್ನು ಮಾಡಲಿ? ಈ ವಿಷಯದಲ್ಲಿ ನೀವು ತಕ್ಕುದಾದ ಯಾವುದಾದರೂ ಒಂದು ಉಪಾಯವನ್ನು ಯೋಚಿಸಿರಿ. ಏಕೆಂದರೆ, ಋಷಿಯ ಶಾಪವು ವ್ಯರ್ಥವಾಗುವುದಿಲ್ಲವೆಂದೂ, ಅದರಿಂದ ಸಾವು ತಪ್ಪದೆಂದೂ ವೇದವನ್ನು ಬಲ್ಲವರು ಹೇಳುತ್ತಾರೆ.

**ಯತ್ನಸ್ತಥಾಪಿ ಶಾಸ್ತ್ರೋಕ್ತಃ ಕರ್ತವ್ಯಃ ಸರ್ವಥಾ ಬುಧೈಃ ।**
**ಉಪಾಯವಾದಿನಃ ಕೇಚಿತ್ಪ್ರವದಂತಿ ಮನೀಷಿಣಃ ॥೩೧॥**

ಆದರೂ ಪಂಡಿತನಾದವನು ಶಾಸ್ತ್ರದಲ್ಲಿ ಹೇಳಿರುವ ರಕ್ಷಣೆಯ ಪ್ರಯತ್ನವನ್ನು ಮಾಡಬೇಕೆಂದು ಉಪಾಯಗಳನ್ನು ತಿಳಿಯಬಲ್ಲ ಬುದ್ಧಿಶಾಲಿಗಳು ಹೇಳುತ್ತಾರೆ.

**ವಿಜ್ಞೋಪಾಯೇನ ಸಿಧ್ಯಂತಿ ಕಾರ್ಯಾಣಿ ನೇತರಸ್ಯ ಚ ।**
**ಮಣಿಮಂತ್ರೌಷಧೀನಾಂ ವೈ ಪ್ರಭಾವಾಃ ಖಲು ದುರ್ವಿದಃ ॥೩೩॥**

ಅನುಭವ ತಿಳಿವಳಿಕೆಗಳುಳ್ಳ ಪಂಡಿತರು ಮಾಡುವ ಉಪಾಯದಿಂದ ಕೆಲಸಗಳ ಫಲಗಳು ಸಿದ್ಧಿಸುತ್ತವೆ. ಬೇರೆಯವರ ಸಹಾಯದಿಂದ ಇದು ನೆರವೇರುವುದಿಲ್ಲವು. ಅಲ್ಲದೆ, ಮಣಿಮಂತ್ರ ಔಷಧಿಗಳ ಮಹಿಮೆಸಾಮರ್ಥ್ಯಗಳನ್ನೂ ಸುಲಭವಾಗಿ ತಿಳಿಯಲಾಗುವುದಿಲ್ಲವು.

**ನ ಭವೇದಿತಿ ಕಿಂ ತೈಸ್ತು ಮಣಿಮದ್ಭಿಃ ಸುಸಾಧಿತೈಃ ।**
**ಸರ್ಪದಷ್ಟಾ ಪುರಾ ಭಾರ್ಯಾ ಮುನೇಃ ಸಂಜೀವಿತಾ ಮೃತಾ ॥೩೪॥**

ಆದಕಾರಣದಿಂದ ಆ ಮಣಿಮಂತ್ರಾದಿಗಳ ಸಾಧನೆಯಿಂದ ನಮ್ಮ ಕೆಲಸವು ಎಂದರೆ ಹಾವು ಕಡಿದವರನ್ನು ಬದುಕಿಸುವಿಕೆಯು ಏಕೆ ಆಗಲಾರದು? ಏಕೆಂದರೆ ಪೂರ್ವಕಾಲದಲ್ಲಿ ಹಾವು ಕಡಿದು ಸತ್ತುಹೋಗಿದ್ದ ಮುನಿಯ ಹೆಂಡತಿಯನ್ನು ತಿರುಗಿ ಬದುಕಿಸಲಾಯಿತು ಎಂದು ತಿಳಿಯಬರುತ್ತದೆ.

**ದತ್ತ್ವಾರ್ಧಮಾಯುಷಸ್ತೇನ ಮುನಿನಾ ಸಾ ವರಾಪ್ಸರಾಃ ।**
**ಭವಿತವ್ಯೇ ನ ವಿಶ್ವಾಸಃ ಕರ್ತವ್ಯಃ ಸರ್ವಥಾ ಬುಧೈಃ ॥೩೫॥**

ಅಲ್ಲದೆ ಪ್ರಸಿದ್ಧನಾದ ಒಬ್ಬ ಮುನಿಯು ತನ್ನ ಆಯುಸ್ಸಿನ ಅರ್ಧವನ್ನು ಕೊಟ್ಟು ಆ ದೇವಸ್ತ್ರೀಯನ್ನು ಬದುಕಿಸಿದನು ಎಂದೂ ಐತಿಹ್ಯವಿದೆ. ಆದುದರಿಂದ ಪಂಡಿತರು ಹೇಗೂ ಕೇವಲ ದೈವದಲ್ಲಿ, ಮುಂದೆ ಆಗಬೇಕಾಗಿರುವುದು ಆಗಿಯೇ ತೀರುತ್ತದೆಂದು ನಂಬಿಕೆಯನ್ನಿಟ್ಟುಕೊಂಡಿದ್ದರೂ ರಕ್ಷಣೆಗಾಗಿ ಮಾಡಬೇಕಾದ ಪ್ರಯತ್ನಗಳನ್ನು ಮಾಡದೆ ಸುಮ್ಮನಿರಬಾರದು.

**ಪ್ರತ್ಯಕ್ಷಂ ತತ್ರ ದೃಷ್ಟಾಂತಂ ಪಶ್ಯಂತು ಸಚಿವಾಃ ಕಿಲ ।**
**ದಿವಿ ಕೋಽಪಿ ಪೃಥಿವ್ಯಾಂ ವಾ ದೃಶ್ಯತೇ ಪುರುಷಃ ಕ್ವಚಿತ್ ॥೩೬॥**

ಎಲೈ ಮಂತ್ರಿಗಳಿರಾ, ಈ ವಿಷಯದಲ್ಲಿ ನೀವು, ನಾನು ಹೇಳುವ ಪ್ರತ್ಯಕ್ಷವಾಗಿರುವ ಉದಾಹರಣೆಯನ್ನು ನೋಡಿರಿ. ಆದುದರಿಂದ ನೀವು ವಿಚಾರಿಸಿ ಸ್ವರ್ಗದಲ್ಲಿಯೋ ಅಥವಾ ಭೂಲೋಕದಲ್ಲಿಯೋ ಯಾರಾದರೂ ಹಾವು ಕಡಿದು ಸತ್ತವರನ್ನು ಬದುಕಿಸಬಲ್ಲಂಥಾ ಮನುಷ್ಯನಿದ್ದರೆ ಅವನನ್ನು ಕರೆತನ್ನಿರಿ.

**ದೈವೇ ಮತಿಂ ಸಮಾಧಾಯ ಯಸ್ತಿಷ್ಠೇತ್ತು ನಿರುದ್ಯಮಃ ।**
**ವಿರಕ್ತಸ್ತು ಯತಿರ್ಭೂತ್ವಾ ಭಿಕ್ಷಾರ್ಥಂ ಯಾತಿ ಸರ್ವಥಾ ॥೩೭॥**

ಹಾಗಲ್ಲದೆ ಯಾವ ಮನುಷ್ಯನು ಕೇವಲ ದೈವವನ್ನೇ ನಂಬಿ ಪುರುಷ ಪ್ರಯತ್ನದ ಉದ್ಯೋಗವನ್ನು ಬಿಟ್ಟಿರುತ್ತಾನೆಯೋ ಅಂಥ ವೈರಾಗ್ಯವುಳ್ಳವನು ಎಲ್ಲಾ ಇಚ್ಛೆಯನ್ನೂ ತೊರೆದು ಹೇಗೂ ಸನ್ಯಾಸಿಯಾಗಿ ಭಿಕ್ಷೆಬೇಡಲು ಹೋಗುತ್ತಾನೆ.

**ಗೃಹಸ್ಥಾನಾಂ ಗೃಹೇ ಕಾಮಮಾಹೂತೋಽಪ್ಯಥವಾನ್ಯಥಾ ।**
**ಯದೃಚ್ಛಯೋಪಪನ್ನಂ ಚ ಕ್ಷಿಪ್ತಂ ಕೇನಾಪಿ ವಾ ಮುಖೇ ॥೩೮॥**

ಅಲ್ಲದೆ, ಸನ್ಯಾಸಿಯಾಗಿರುವವನಿಗೂ ಪ್ರಯತ್ನವು ಅವಶ್ಯಕವು. ಏಕೆಂದರೆ, ಸನ್ಯಾಸಿಯನ್ನು ಗೃಹಸ್ಥರು ಕರೆದೋ, ಅಥವಾ ಅವನೇ ಬಂದಾಗಲೋ ಅನ್ನವನ್ನು ಕೊಡುವುದುಂಟು. ಆಗ ಅವರ ಮನೆಗೆ ಹೋಗುವಷ್ಟು ಪ್ರಯತ್ನವನ್ನಾದರೂ ಮಾಡಲೇಬೇಕು. ಅಥವಾ ಆಕಸ್ಮಿಕವಾಗಿ ಅವನಿಗೆ ಅನ್ನ ದೊರೆಯುವುದುಂಟು. ಯಾವನಾದರೂ ಅವನ ಬಾಯಲ್ಲಿ ಅನ್ನವನ್ನು ಹಾಕುವುದುಂಟು.

**ಉದ್ಯಮೇನ ವಿನಾ ಚಾಸ್ಯಾದುದರೇ ಸಂವಿಶೇತ್ಕಥಂ ।**
**ಪ್ರಯತ್ನಶ್ಚೋದ್ಯಮೇ ಕಾರ್ಯೋಽ ಯದಾ ಸಿದ್ಧಿಂ ನ ಯಾತಿ ಚೇತ್ ॥೩೯॥**

ಆಗಲೂ ಆ ಆಹಾರವನ್ನು ಅಗಿದು ನುಂಗುವಷ್ಟು ಪ್ರಯತ್ನವನ್ನಾದರೂ ಯತಿಯೂ ಮಾಡಲೇಬೇಕು. ಹಾಗಿಲ್ಲದಿದ್ದರೆ ಆ ಅನ್ನವು ಪ್ರಯತ್ನವಿಲ್ಲದೆ ಅವನ ಹೊಟ್ಟೆಯೊಳಗೆ ಹೇಗೆ ಹೋದೀತು ? ಆದುದರಿಂದ ಶರೀರಯಾತ್ರಾರ್ಥವಾದ ಕೆಲಸ ದಲ್ಲಿಯೂ ಪ್ರಯತ್ನವನ್ನು ಮಾಡಲೇಬೇಕು. ಹೀಗೆ ವಿರಕ್ತನಾದ ಯತಿಗೂ ಪ್ರಯತ್ನಮಾಡುವಿಕೆಯು ಸಂಪೂರ್ಣವಾಗಿ ತಪ್ಪಿರುವುದಿಲ್ಲವು. ಗೃಹಸ್ಥರಾದ ನಾವಂತೂ ಪ್ರಯತ್ನಗಳನ್ನು ಮಾಡಲೇಬೇಕು. ಆದರೂ ಸಹ ಒಂದು ವೇಳೆ ಕೆಲಸ ಮಾಡಿದರೂ ಫಲವಾಗದಿದ್ದಲ್ಲಿ,

**ತದಾ ದೈವಂ ಸ್ಥಿತಂ ಚೇತಿ ಚಿತ್ತಮಾಲಂಬಯೇದ್ಬುಧಃ ।**

॥ ಮಂತ್ರಿಣ ಊಚುಃ ॥

**ಕೋ ಮುನಿರ್ಯೇನ ದತ್ತಾರ್ಧಮಾಯುಷೋ ಜೀವಿತಾ ಪ್ರಿಯಾ ॥**

ಹಾಗೆ ಪ್ರಯತ್ನವು ವಿಫಲವಾದಾಗ ಪಂಡಿತನಾದವನು, ದೈವವು ಪ್ರಬಲ ವಾಗಿದೆ ಎಂದು ಊಹಿಸಿ ಮನಸ್ಸಿನಲ್ಲಿ ಸಮಾಧಾನವನ್ನು ತಂದುಕೊಳ್ಳಬೇಕು. ಈ ಮಾತನ್ನು ಕೇಳಿ ಮಂತ್ರಿಗಳು ಪ್ರಶ್ನೆಮಾಡಿದರು. ತನ್ನ ಆಯುಸ್ಸಿನ ಅರ್ಧಭಾಗವನ್ನು ಕೊಟ್ಟು ಹೆಂಡತಿಯನ್ನು ಬದುಕಿಸಿದ ಆ ಮುನಿಯು ಯಾರು ?

**ಕಥಂ ಮೃತಾ ಮಹಾರಾಜ ತನ್ನೋ ಬ್ರೂಹಿ ಸವಿಸ್ತರಾತ್ ।**

ಎಲೈ ಮಹಾರಾಜನೇ, ಅವಳು ಹೇಗೆ ಸತ್ತಳು ? ಆ ವಿಷಯವನ್ನು ನಮಗೆ ವಿಸ್ತಾರವಾಗಿ ಹೇಳು.

॥ ರಾಜೋವಾಚ ॥

**ಭೃಗೋರ್ಭಾರ್ಯಾ ವರಾರೋಹಾ ಪುಲೋಮಾ ನಾಮಸುಂದರೀ ॥೪೧॥**

**ತಸ್ಯಾಂ ತು ಚ್ಯವನೋ ನಾಮ ಮುನಿರ್ಜಾತೋऽತಿವಿಶ್ರುತಃ ।**
**ಚ್ಯವನಸ್ಯ ಚ ಶರ್ಯಾತೇಃ ಸುಕನ್ಯಾ ನಾಮ ಸುಂದರೀ ॥೪೨॥**

ರಾಜನು ಹೇಳಿದನು—ಭೃಗುಮಹರ್ಷಿಗೆ ಪುಲೋಮಳೆಂಬ ಸುಂದರಸ್ತ್ರೀಯು ಹೆಂಡತಿಯಾಗಿದ್ದಳು. ಆ ಪುಲೋಮಳಲ್ಲಿ ಅತ್ಯಂತ ಪ್ರಸಿದ್ಧನಾದ ಚ್ಯವನನೆಂಬ

ಮುನಿಯು ಹುಟ್ಟಿದನು. ಆ ಚ್ಯವನಋಷಿಗೆ ಶರ್ಯಾತಿಯ ಮಗಳಾದ ಮತ್ತು ಸುಂದರಿಯಾದ ಸುಕನ್ಯಾ ಎಂಬ ಹೆಂಡತಿ ಇದ್ದಳು.

**ತಸ್ಯಾಂ ಜಜ್ಞೇ ಸುತಃ ಶ್ರೀಮಾನ್ಪ್ರಮತಿರ್ನಾಮ ವಿಶ್ರುತಃ ।**
**ಪ್ರಮತೇಸ್ತು ಪ್ರಿಯಾ ಭಾರ್ಯಾ ಪ್ರತಾಪೀ ನಾಮ ವಿಶ್ರುತಾ ॥೪೩॥**

ಅವಳಲ್ಲಿ ಪ್ರಸಿದ್ಧನಾದ, ತೇಜಸ್ವಿಯಾದ ಪ್ರಮತಿಯೆಂಬ ಮಗನು ಹುಟ್ಟಿದನು. ಆ ಪ್ರಮತಿಗೆ ಪ್ರಸಿದ್ಧಳಾದ ಪ್ರತಾಪೀ ಎಂದು ಹೆಸರುಳ್ಳ ಪ್ರೀತಿಪಾತ್ರಳಾದ ಹೆಂಡತಿಯು ಇದ್ದಳು.

**ರುರುರ್ನಾಮ ಸುತೋ ಜಾತಸ್ತಥಾ ಪರಮತಾಪಸಃ ।**
**ತಸ್ಮಿಂಶ್ಚ ಸಮಯೇ ಕಶ್ಚಿತ್ಸ್ಥೂಲಕೇಶಶ್ಚ ವಿಶ್ರುತಃ ॥೪೪॥**

ಆ ಪ್ರತಾಪೀ ಎಂಬವಳಿಗೆ ಮಹಾತಪಸ್ವಿಯಾದ ರುರು ಎಂಬ ಮಗನು ಹುಟ್ಟಿದನು. ಅದೇ ಸಮಯದಲ್ಲಿ ಪ್ರಸಿದ್ಧನಾದ ಮತ್ತು ಸ್ಥೂಲಕೇಶ ಎಂಬ ಹೆಸರುಳ್ಳ,

**ಬಭೂವ ತಪಸಾ ಯುಕ್ತೋ ಧರ್ಮಾತ್ಮಾ ಸತ್ಯಸಂಮತಃ ।**
**ಏತಸ್ಮಿನ್ನಂತರೇ ಮಾನ್ಯಾ ಮೇನಕಾ ಚ ವರಾಪ್ಸರಾಃ ॥೪೫॥**

ಧರ್ಮಶೀಲನಾದ ಮತ್ತು ಸತ್ಯಸಂಧನೆಂದು ಜನರು ಒಪ್ಪಿದ್ದ ಒಬ್ಬ ತಪಸ್ವಿಯು ಇದ್ದನು. ಈ ಸಮಯದ ಮಧ್ಯದಲ್ಲಿ ಗೌರವಕ್ಕೆ ಅರ್ಹಳಾದ ಮೇನಕೆ ಎಂಬ ಅಪ್ಸರಸ್ತ್ರೀಯು

**ಕ್ರೀಡಾಂ ಚಕ್ರೇ ನದೀತೀರೇ ಸರ್ವಲೋಕಾತಿಸುಂದರೀ ।**
**ಗರ್ಭಂ ವಿಶ್ವಾವಸೋಃ ಪ್ರಾಪ್ಯ ನಿರ್ಗತಾ ವರವರ್ಣಿನೀ ॥೪೬॥**

ಬಹಳ ಸುಂದರಿಯಾದವಳೆಂದು ಪ್ರಸಿದ್ಧಳಾಗಿರುತ್ತಾ ಅಲ್ಲಿದ್ದ ಒಂದು ನದಿಯ ದಡದಲ್ಲಿ ಕ್ರೀಡಿಸುತ್ತಿದ್ದಳು. ಅನಂತರದಲ್ಲಿ ಉತ್ತಮಸ್ತ್ರೀಯಾದ ಆ ಮೇನಕೆಯು ವಿಶ್ವಾವಸು ಎಂಬ ಗಂಧರ್ವನಿಂದ ಗರ್ಭಧಾರಣಮಾಡಿ ಅಲ್ಲಿಂದ ಹೊರಟಳು.

**ಸ್ಥೂಲಕೇಶಾಶ್ರಮೇ ಗತ್ವಾ ವಿಸಸರ್ಜ ವರಾಪ್ಸರಾಃ ।**
**ಕನ್ಯಕಾಂ ಚ ನದೀತೀರೇ ತ್ರಿಷು ಲೋಕೇಷು ಸುಂದರೀಂ ॥೪೭॥**

ಆ ದೇವತಾಸ್ತ್ರೀಯು ಸ್ಥೂಲಕೇಶಾಶ್ರಮಕ್ಕೆ ಹೋಗಿ, ಮೂರು ಲೋಕದಲ್ಲಿಯೂ ಬಹಳ ಸುಂದರಿಯಾದ ಕನ್ನಿಕೆಯನ್ನು ನದೀದಡದಲ್ಲಿ ಪ್ರಸವಿಸಿ, ಆ ಮಗುವನ್ನು ಅಲ್ಲಿಯೇ ಬಿಟ್ಟುಹೋದಳು.

**ದೃಷ್ಟ್ವಾಽನಾಥಾಂ ತದಾ ಕನ್ಯಾಂ ಜಗ್ರಾಹ ಮುನಿಸತ್ತಮಃ ।**
**ಪುಪೋಷ ಸ್ಥೂಲಕೇಶಸ್ತು ನಾಮ್ನಾ ಚಕ್ರೇ ಪ್ರಮದ್ವರಾಂ ॥೪೮॥**

ಆಗ ಮುನಿಶ್ರೇಷ್ಠನಾದ ಸ್ಥೂಲಕೇಶನು ಅನಾಥೆಯಾಗಿದ್ದ ಆ ಕನ್ನಿಕೆಯನ್ನು ನೋಡಿ ತೆಗೆದುಕೊಂಡು ಬಂದು ಸಾಕಿದನು. ಅಲ್ಲದೆ ಅವಳಿಗೆ ಪ್ರಮದ್ವರಾ ಎಂದು ಹೆಸರಿಟ್ಟನು.

**ಸಾ ಕಾಲೇ ಯೌವನಂ ಪ್ರಾಪ್ತಾ ಸರ್ವಲಕ್ಷಣಸಂಯುತಾ ।**
**ರುರುರ್ದೃಷ್ಟ್ವಾಽಥ ತಾಂ ಬಾಲಾಂ ಕಾಮಬಾಣಾರ್ದಿತೋಽಭ್ಯಭೂತ್ ॥೪೯॥**

ಸಮಸ್ತ ಲಕ್ಷಣಗಳಿಂದ ಕೂಡಿದ ಆ ಕನ್ನಿಕೆಯು, ಯೌವನವನ್ನು ಪಡೆದಳು. ಅನಂತರ ರುರು ಎಂಬ ಮುನಿಪುತ್ರನು ಅವಳನ್ನು ನೋಡಿ ಮನ್ಮಥನ ಬಾಣಗಳಿಗೆ ಗುರಿಯಾದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ**
**ಅಷ್ಟಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ದ್ವಿತೀಯಸ್ಕಂಧೇ

### || ನವಮೋಽಧ್ಯಾಯಃ ||

### ಒಂಬತ್ತನೆಯ ಅಧ್ಯಾಯವು

|| ಪರೀಕ್ಷಿದುವಾಚ ||

**ಕಾಮಾರ್ತಃ ಸ ಮುನಿರ್ಗತ್ವಾ ರುರುಃ ಸುಪ್ತೋ ನಿಜಾಶ್ರಮೇ ।**
**ಪಿತಾ ಪಪ್ರಚ್ಛ ದೀನಂ ತಂ ಕಿಂ ರುರೋ ವಿಮನಾ ಅಸಿ ||೧||**

ಪರೀಕ್ಷಿದ್ರಾಜನು ಹೇಳಿದನು—ಈ ರೀತಿಯಲ್ಲಿ ಕಾಮಪೀಡಿತನಾದ ಆ ರುರುಮುನಿಯು ತನ್ನ ಆಶ್ರಮಕ್ಕೆ ಹೋಗಿ ಚಿಂತೆಯಿಂದ ಮಲಗಿರುವುದನ್ನು ಅವನ ತಂದೆಯು ಕಂಡು, ಎಲೈ ರುರುಕುಮಾರನೆ, ಏತಕ್ಕೆ ಖಿನ್ನಮನಸ್ಕನಾಗಿರುವೆ ? ಎಂದು ಕೇಳಿದನು.

**ಸ ತಮಾಹಾತಿಕಾಮಾರ್ತಃ ಸ್ಥೂಲಕೇಶಸ್ಯ ಚಾಶ್ರಮೇ ।**
**ಕನ್ಯಾ ಪ್ರಮದ್ವರಾ ನಾಮ ಸಾ ಮೇ ಭಾರ್ಯಾ ಭವೇದಿತಿ ||೨||**

ಸ್ಥೂಲಕೇಶಋಷಿಯ ಆಶ್ರಮದಲ್ಲಿ ಪ್ರಮದ್ವರಾ ಎಂಬ ಹೆಸರಿನ ಕನ್ಯೆ ಇರುವಳು. ಅವಳು ನನಗೆ ಪತ್ನಿಯಾಗುವ ಬಗೆ ಹೇಗೆಂದು ಕಾಮಾತುರನಾಗಿರುವ ನಾನು ವಿಷಣ್ಣನಾಗಿದ್ದೇನೆಂದು ಆ ರುರುಮುನಿಯು ತನ್ನ ತಂದೆಗೆ ಪ್ರತ್ಯುತ್ತರವನ್ನು ಹೇಳಿದನು.

**ಸ ಗತ್ವಾ ಪ್ರಮತಿಸ್ತೂರ್ಣಂ ಸ್ಥೂಲಕೇಶಂ ಮಹಾಮುನಿಂ ।**
**ಪ್ರಮುಹ್ಯ ಸುಮುಖಂ ಕೃತ್ವಾ ಯಯಾಚೇ ತಾಂ ವರಾನನಾಂ ||೩||**

ತುಂಬ ಬುದ್ಧಿಯುಳ್ಳ ಆ ಪ್ರಮತಿಋಷಿಯು ಸ್ಥೂಲಕೇಶಮುನಿಯ ಆಶ್ರಮಕ್ಕೆ ಹೋಗಿ ಅವನನ್ನು ಮೃದುಮಧುರಸಂಭಾಷಣೆಯಿಂದ ಪ್ರಸನ್ನಚಿತ್ತನನ್ನಾಗಿ ಮಾಡಿ

ಆ ಪ್ರಮದ್ವರಾಕನ್ಯೆಯನ್ನು ತನ್ನ ಪುತ್ರನಿಗೆ ಮದುವೆಮಾಡಿಕೊಡುವಂತೆ ಪ್ರಾರ್ಥಿಸಿದನು.

**ದದೌ ವಾಚಂ ಸ್ಥೂಲಕೇಶಃ ಪ್ರದಾಸ್ಯಾಮಿ ಶುಭೇಽಹನಿ ।**
**ವಿವಾಹಾರ್ಥಂ ಚ ಸಂಭಾರಂ ರಚಯಾಮಾಸತುರ್ವನೇ ॥೪॥**

ಸ್ಥೂಲಕೇಶಋಷಿಯು ಅವನ ಪ್ರಾರ್ಥನೆಯನ್ನು ಮನ್ನಿಸಿ ಶುಭದಿನದಲ್ಲಿ ಕನ್ಯಾಪ್ರದಾನವನ್ನು ಮಾಡುವೆನೆಂದು ಹೇಳಿದನು. ಅನಂತರದಲ್ಲಿ ಆ ಕನ್ಯೆಯ ಮತ್ತು ವರನ ಸಂಬಂಧಿಗಳು ಆ ವನದಲ್ಲಿ ವಿವಾಹಾರ್ಥವಾಗಿ ಸಾಮಗ್ರಿಗಳನ್ನು ಸಿದ್ಧಮಾಡಿದರು.

**ಪ್ರಮತಿಃ ಸ್ಥೂಲಕೇಶಶ್ಚ ವಿವಾಹಾರ್ಥಂ ಸಮುದ್ಯತೌ ।**
**ಬಭೂವತುರ್ಮಹಾತ್ಮಾನೌ ಸಮೀಪಸ್ಥೌ ತಪೋವನೇ ॥೫॥**

ಮಹಾತಪಸ್ವಿಗಳಾದ ಪ್ರಮತಿ ಮತ್ತು ಸ್ಥೂಲಕೇಶಮುನಿಗಳು ಆ ತಪೋವನದಲ್ಲಿ ಒಂದು ಕಡೆ ಸೇರಿದವರಾಗಿ ವಿವಾಹಕ್ಕಾಗಿ ಸಂಭಾರಾದಿಗಳನ್ನು ಒದಗಿಸಿಕೊಂಡು ವಿವಾಹೋದ್ಯುಕ್ತರಾದರು.

**ತಸ್ಮಿನ್ನವಸರೇ ಕನ್ಯಾ ರಮಮಾಣಾ ಗೃಹಾಂಗಣೇ ।**
**ಪ್ರಸುಪ್ತಂ ಪನ್ನಗಂ ಪಾದೇನಾಸ್ಪೃಶಚ್ಚಾರುಲೋಚನಾ ॥೬॥**

ಆ ಸಮಯದಲ್ಲಿ ಮನೋಹರವಾದ ಕಣ್ಣುಗಳುಳ್ಳ ಆ ಕನ್ಯೆಯು ಮನೆಯ ಅಂಗಳದಲ್ಲಿ ಆಟವಾಡುತ್ತಾ ಇರುವಾಗ ಅಲ್ಲಿ ಮಲಗಿರುವ ಹಾವನ್ನು ಕಾಣದೆ ಕಾಲಿನಿಂದ ತುಳಿದಳು.

**ದಷ್ಟಾ ತು ಪನ್ನಗೇನಾಥ ಸಾ ಮಮಾರ ವರಾಂಗನಾ ।**
**ಕೋಲಾಹಲಸ್ತದಾ ಜಾತೋ ಮೃತಾಂ ದೃಷ್ಟ್ವಾ ಪ್ರಮದ್ವರಾಂ ॥೭॥**

ಆ ಶೋಭನಾಂಗಿಯು ಹಾವಿನಿಂದ ಕಚ್ಚಲ್ಪಟ್ಟು ಮೃತಳಾದಳು. ಮತ್ತು ಪ್ರಮದ್ವರೆಯು ಮೃತಳಾದುದನ್ನು ನೋಡಿ ಅಲ್ಲಿ ಬಹಳ ಕೋಲಾಹಲವುಂಟಾಯಿತು.

**ಮಿಲಿತಾ ಮುನಯಸ್ಸರ್ವೇ ಚುಕ್ರುಶುಃ ಶೋಕಸಂಯುತಾಃ ।**
**ಭೂಮೌ ತಾಂ ಪತಿತಾಂ ದೃಷ್ಟ್ವಾ ಪಿತಾ ತಸ್ಯಾತಿದುಃಖಿತಃ ॥೮॥**

ಅಲ್ಲಿದ್ದ ಮುನಿಗಳೆಲ್ಲರೂ ಸೇರಿ ಶೋಕಾಕುಲರಾಗಿ ದುಃಖದಿಂದ ರೋದನ ಮಾಡಿದರು. ಭೂಮಿಯಲ್ಲಿ ಮೃತಳಾಗಿ ಬಿದ್ದಿರುವ ಆ ಕನ್ಯೆಯನ್ನು ನೋಡಿ ಅವಳ ತಂದೆಯು ಅತ್ಯಂತ ದುಃಖಪಟ್ಟನು.

**ರುರೋದ ವಿಗತಪ್ರಾಣಾಂ ದೀಪ್ಯಮಾನಾಂ ಸುತೇಜಸಾ ।**
**ರುರುಃ ಶ್ರುತ್ವಾ ತದಾ ಕ್ರಂದನ್ ದರ್ಶನಾರ್ಥಂ ಸಮಾಗತಃ ॥೯॥**

ಬಹಳ ತೇಜಸ್ಸಿನಿಂದ ಶೋಭಿಸುವ ಆ ಪ್ರಮದ್ವರಾಕನ್ಯೆಯು ಮೃತಳಾದ ವಿಚಾರವನ್ನು ಕೇಳಿ ಕನ್ಯೆಯನ್ನು ನೋಡಲು ಬಂದ ರುರುಕುಮಾರನು, ದುಃಖಿತ ನಾಗಿ ಗಟ್ಟಿಯಾಗಿ ರೋದನಮಾಡಿದನು.

**ದದರ್ಶ ಪತಿತಾಂ ತತ್ರ ಸಜೀವಾಮಿವ ಕಾಮಿನೀಂ ।**
**ರುದಂತಂ ಸ್ಥೂಲಕೇಶಂ ಚ ದೃಷ್ಟ್ವಾಽನ್ಯಾನೃಷಿಸತ್ತಮಾನ್ ॥೧೦॥**

ಅಲ್ಲಿ ಭೂಮಿಯ ಮೇಲೆ ಬದುಕಿರುವಳೋ ಎಂಬಂತೆ ತೋರುವ ಹಾಗೆ ಮಲಗಿರುವ ಆ ಕುಮಾರಿಯನ್ನೂ ಮತ್ತು ಅಳುತ್ತಿರುವ ಸ್ಥೂಲಕೇಶಮುನಿಯನ್ನೂ, ಇತರ ಮುನಿಶ್ರೇಷ್ಠರನ್ನೂ ನೋಡಿದನು.

**ರುರುಃ ಸ್ಥಾನಾದ್ಬಹಿರ್ಗತ್ವಾ ರುರೋದ ವಿರಹಾಕುಲಃ ।**
**ಅಹೋ ದೈವೇನ ಸರ್ಪೋಽಯಂ ಪ್ರೇಷಿತಃ ಪರಮಾದ್ಭುತಃ ॥೧೧॥**

ಅಯ್ಯೋ, ಈ ಸರ್ಪವು ವಿಧಿಯಿಂದಲೇ ಚೋದಿತವಾಗಿ ಕಳುಹಿಸಲ್ಪಟ್ಟಿರು ವುದು. ಇದು ಬಹಳ ಆಶ್ಚರ್ಯವಾಗಿರುವುದು ಹೀಗೆಂದು ವಿರಹವೇದನೆಯಿಂದ ದುಃಖಿಸುತ್ತಾ ಆ ರುರುಕುಮಾರನು ಮನೆಯಿಂದ ಹೊರಗೆ ಬಂದು ರೋದನ ಮಾಡಿದನು.

**ಮಮ ಶರ್ಮವಿಘಾತಾಯ ದುಃಖಹೇತುರಯಂ ಕಿಲ ।**
**ಕಿಂ ಕರೋಮಿ ಕ್ವ ಗಚ್ಛಾಮಿ ಮೃತಾ ಮೇ ಪ್ರಾಣವಲ್ಲಭಾ ॥೧೨॥**

ನನ್ನ ಸುಖವನ್ನು ಹಾಳುಮಾಡುವುದಕ್ಕೂ, ದುಃಖಕಾರಣವನ್ನು ಉಂಟು ಮಾಡುವುದಕ್ಕೂ ನನ್ನ ಪ್ರಾಣಕಾಂತೆಯಾದ ಈ ಕನ್ಯೆಯು ಮೃತಳಾದಳು. ನಾನು ಏನನ್ನು ಮಾಡಲಿ, ಎಲ್ಲಿಗೆ ಹೋಗಲಿ ? ಒಂದೂ ತೋರದಾಗಿದೆ.

**ನ ನೈ ಜೀವಿತುಮಿಚ್ಛಾಮಿ ವಿಯುಕ್ತಃ ಪ್ರಿಯಯಾಽನಯಾ ।**
**ನಾಲಿಂಗಿತಾ ವರಾರೋಹಾ ನ ಮಯಾ ಚುಂಬಿತಾ ಮುಖೇ ॥೧೩॥**

ಈ ನನ್ನ ಪ್ರಿಯಕಾಂತೆಯನ್ನು ಅಗಲಿದವನಾಗಿ ನಾನು ಜೀವಿಸಿರಲು ಇಷ್ಟ ಪಡುವುದಿಲ್ಲ. ಆ ಶೋಭನಾಂಗಿಯನ್ನು ನಾನು ಆಲಿಂಗನವನ್ನೂ ಮಾಡಲಿಲ್ಲ. ಆಕೆಯ ಮುಖವನ್ನು ಚುಂಬಿಸಲೂ ಇಲ್ಲ.

**ನ ಪಾಣಿಗ್ರಹಣಂ ಪ್ರಾಪ್ತಂ ಮಂದಭಾಗ್ಯೇನ ಸರ್ವಥಾ ।**
**ಲಾಜಾಹೋಮಸ್ತಥಾ ಚಾಗ್ನೌ ನ ಕೃತಸ್ತ್ವನಯಾ ಸಹ ॥೧೪॥**

ಆ ವರಾಂಗಿಯನ್ನು ಮದುವೆಯಾಗುವಷ್ಟು ಪುಣ್ಯವಿಲ್ಲದ ನಾನು ಅವಳ ಪಾಣಿಗ್ರಹಣವನ್ನು ಪಡೆಯಲಿಲ್ಲ. ವಿವಾಹದ ಅಗ್ನಿಯಲ್ಲಿ ಆ ಕನ್ಯೆಯೊಡಗೂಡಿ ಲಾಜಾಹೋಮವನ್ನು ಮಾಡಲೂ ನನಗೆ ಅವಕಾಶವಾಗಲಿಲ್ಲ.

**ಮಾನುಷ್ಯಂ ಧಿಗಿದಂ ಕಾಮಂ ಗಚ್ಛಂತ್ವದ್ಯ ಮಮಾಸವಃ ।**
**ದುಃಖಿತಸ್ಯ ನ ವಾ ಮೃತ್ಯುರ್ವಾಂಛಿತಃ ಸಮುಪೈತಿ ಹಿ ॥೧೫॥**

ಮನುಷ್ಯರು ಬಯಸುವ ಕಾಮಸುಖಕ್ಕೆ ಮತ್ತು ಅಲ್ಪವಾದ ಈ ಮನುಷ್ಯ ಜನ್ಮಕ್ಕೆ ತುಂಬ ಧಿಕ್ಕಾರವಿರಲಿ! ನನ್ನ ಪ್ರಾಣಗಳು ಈಗಲೇ ಹೋಗಲಿ! ದುಃಖ ದಿಂದ ತಪಿಸುತ್ತಿರುವ ನನಗೆ ಮರಣವು ಇಷ್ಟವಾದರೂ ಅದು ನನ್ನನ್ನು ಪಡೆಯು ವುದಿಲ್ಲವು.

**ಸುಖಂ ತರ್ಹಿ ಕಥಂ ದಿವ್ಯಮಾಪ್ಯತೇ ಭುವಿ ವಾಂಛಿತಂ ।**
**ಪ್ರಪತಾಮಿ ಹ್ರದೇ ಘೋರೇ ಪಾವಕೇ ಪ್ರಪತಾಮ್ಯಹಂ ॥೧೬॥**

ಆ ನನ್ನ ಮನೋವಲ್ಲಭೆಯು ಇಲ್ಲದ ಮೇಲೆ ನನಗೆ ಭೂಮಿಯಲ್ಲಿ ಬಯಸ ಬಹುದಾದ ಸುಖವಾಗಲೀ, ಸ್ವರ್ಗಸುಖವಾಗಲೀ ಹೇಗೆ ಉಂಟಾಗುವುದು? ಆದುದ ರಿಂದ ನಾನು ಭಯಂಕರವಾದ ಮಡುವಿನಲ್ಲಿ ಬೀಳುವೆನು ಅಥವಾ ದಾರುಣವಾದ ಅಗ್ನಿಯಲ್ಲಿಯಾದರೂ ಬೀಳುವೆನು.

**ವಿಷಮುದ್ಧಿ ಗಲೇ ಪಾಶಂ ಕೃತ್ವಾ ಪ್ರಾಣಾಂಸ್ತ್ಯಜಾಮ್ಯಹಂ ।**
**ವಿಲಪ್ಯೈವಂ ರುರುಸ್ತತ್ರ ವಿಚಾರ್ಯ ಮನಸಾ ಪುನಃ ॥೧೭॥**

ವಿಷವನ್ನು ಕುಡಿದಾದರೂ, ಕತ್ತಿನಲ್ಲಿ ನೇಣುಹಾಕಿಕೊಂಡಾದರೂ ಪ್ರಾಣವನ್ನು ಬಿಡುವೆನು. ಹೀಗೆ ದುಃಖಪಟ್ಟು ಆಮೇಲೆ ಆ ರುರುಕುಮಾರನು ಪುನಃ ಹಾಗೆಯೇ ಮನಸ್ಸಿನಲ್ಲಿ ವಿಚಾರಮಾಡತೊಡಗಿದನು.

**ಉಪಾಯಂ ಚಿಂತಯಾಮಾಸ ಸ್ಥಿತಸ್ತಸ್ಮಿನ್ನದೀತಟೇ ।**
**ಮರಣಾತ್ಕಿಂ ಫಲಂ ಮೇ ಸ್ಯಾದಾತ್ಮಹತ್ಯಾ ದುರತ್ಯಯಾ ॥೧೮॥**

ಆ ರುರುಮುನಿಯು ಆ ನದೀತೀರದಲ್ಲಿ ಕೂತುಕೊಂಡು, ಹೀಗೆ ಯೋಚಿಸಿದನು. ಮರಣವಾದರೆ ಅದರಿಂದ ನನಗೇನು ಪ್ರಯೋಜನವು ಉಂಟಾದಹಾಗಾಯಿತು ? ಎಂದಿಗೂ ನಾಶವಾಗದ ಆತ್ಮಹತ್ಯಾದೋಷಮಾತ್ರ ನನಗೆ ಗಂಟುಬಿದ್ದ ಹಾಗಾಗುವುದು. ಆದುದರಿಂದ ಇದಕ್ಕೇನು ಉಪಾಯಮಾಡಬೇಕು ?

**ದುಃಖಿತಶ್ಚ ಪಿತಾ ಮೇ ಸ್ಯಾಜ್ಜನನೀ ಚಾತಿದುಃಖಿತಾ ।**
**ದೈವಸ್ತುಷ್ಟೋ ಭವೇತ್ಕಾಮಂ ದೃಷ್ಟ್ವಾ ಮಾಂ ತ್ಯಕ್ತಜೀವಿತಂ ॥೧೯॥**

ಅಲ್ಲದೆ ನಾನು ಸತ್ತರೆ ನನ್ನ ತಂದೆಯು ನನ್ನ ಮರಣದಿಂದ ದುಃಖಿತನಾಗುವನು. ನನ್ನ ತಾಯಿಯೂ ಅತಿಯಾಗಿ ವ್ಯಸನಪಡುವಳು. ಪ್ರಾಣಬಿಟ್ಟ ನನ್ನನ್ನು ನೋಡಿ ವಿಧಿಗೆ ಮಾತ್ರ ತುಂಬ ಸಂತೋಷವಾಗಬಹುದು.

**ಸರ್ವೇ ಪ್ರಮುದಿತಶ್ಚ ಸ್ಯಾನ್ಮೃತ್ಕ್ಷಯೇ ನಾತ್ರ ಸಂಶಯಃ ।**
**ಉಪಕಾರಃ ಪ್ರಿಯಾಯಾಃ ಕಃ ಪರಲೋಕೇ ಭವೇದಪಿ ॥೨೦॥**

ನನ್ನ ಮರಣದಿಂದ ನನಗೆ ಅಹಿತರಾದ ಸರ್ವರಿಗೂ ಸಂತೋಷವುಂಟಾಗಬಹುದು. ಇದರಲ್ಲೇನೂ ಸಂಶಯವಿಲ್ಲ. ಅಲ್ಲದೆ, ನನ್ನ ಮರಣದಿಂದ ನನ್ನ ಪ್ರಿಯಕಾಂತೆಗೆ ಪರಲೋಕದಲ್ಲಿಯಾದರೂ ಏನು ಉಪಕಾರಮಾಡಿದ ಹಾಗಾಯಿತು ?

**ಮೃತೇ ಮಯ್ಯಾತ್ಮಘಾತೇನ ವಿರಹಾತ್ಪೀಡಿತೋಽಪಿ ಚ ।**
**ಪರಲೋಕೇ ಪ್ರಿಯಾ ಸಾಪಿ ನ ಮೇ ಸ್ಯಾದಾತ್ಮಘಾತಿನಃ ॥೨೧॥**

ಆ ಪ್ರಿಯಾವಿರಹದಿಂದ ದುಃಖಿತನಾಗಿದ್ದರೂ ಆತ್ಮಹತ್ಯೆಯಿಂದ ನಾನು ಪಾಪಿಯಾಗಿ ಮೃತನಾದರೆ ಪರಲೋಕದಲ್ಲಿಯೂ ಸಹ ಆತ್ಮಘಾತಿಯಾದ, ಪುಣ್ಯಹೀನನಾದ ನನಗೆ ಆ ವರಾಂಗನೆಯು ಲಭಿಸಲಾರಳು.

**ಏತದರ್ಥಂ ಮೃತೇ ದೋಷಾ ಮಯಿ ನೈವಾಮೃತೇ ಪುನಃ ।**
**ವಿಮೃಶ್ಯೈವಂ ರುರುಸ್ತತ್ರ ಸ್ನಾತ್ವಾಚಮ್ಯ ಶುಚಿಃ ಸ್ಥಿತಃ ॥೨೨॥**

ನಾನು ಆತ್ಮಹತ್ಯೆಯಿಂದ ಮೃತನಾದಲ್ಲಿ ಈ ಮೇಲೆ ಹೇಳಿದ ದೋಷಗಳು ನನಗೆ ಉಂಟಾಗುವವು. ಆ ರೀತಿ ಮರಣವಿಲ್ಲದೆ ಬದುಕಿದ್ದಲ್ಲಿ ಯಾವ ಹೆಚ್ಚಿನ ದೋಷವೂ ಇಲ್ಲವು. ಹೀಗೆಂದು ಚೆನ್ನಾಗಿ ವಿಮರ್ಶಿಸಿ, ನಿಷ್ಕರ್ಷಿಸಿ, ರುರುಕುಮಾರನು ಆ ನದಿಯಲ್ಲಿ ಸ್ನಾನಮಾಡಿ ಆಚಮನಾದಿಗಳಿಂದ ಶುಚಿರ್ಭೂತನಾಗಿ,

**ಅಬ್ರವೀದ್ವಚನಂ ಕೃತ್ವಾ ಜಲಂ ಪಾಣಾವಸೌ ಪುನಃ ।**
**ಯನ್ಮಯಾ ಸುಕೃತಂ ಕಿಂಚಿತ್ಕೃತಂ ದೇವಾರ್ಚನಾದಿಕಂ ॥೨೩॥**

ಬೊಗಸೆಯಲ್ಲಿ ಜಲವನ್ನು ತೆಗೆದುಕೊಂಡು ಈರೀತಿ ಹೇಳಿದನು—ದೇವತಾ ಪೂಜೆ ಮೊದಲಾದ ಸತ್ಕರ್ಮವನ್ನು ಕಿಂಚಿತ್ತಾದರೂ ನಾನು ಮಾಡಿದ್ದರೆ,

**ಗುರವಃ ಪೂಜಿತಾ ಭಕ್ತ್ಯಾ ಹುತಂ ಜಪ್ತಂ ತಪಃ ಕೃತಂ ।**
**ಅಧೀತಾಸ್ತ್ವಖಿಲಾ ವೇದಾ ಗಾಯತ್ರೀ ಸಂಸ್ಮೃತಾ ಯದಿ ॥೨೪॥**

ನನ್ನ ಗುರುಗಳನ್ನು ಭಕ್ತಿಯಿಂದ ನಾನು ಪೂಜೆಮಾಡಿದ್ದರೆ, ಅಗ್ನಿ ಕಾರ್ಯಾದಿ ಹೋಮಗಳನ್ನೂ, ಮಂತ್ರಜಪವನ್ನೂ, ತಪಸ್ಸನ್ನೂ ಮಾಡಿದ್ದರೆ, ಸಮಸ್ತ ವೇದಗಳನ್ನೂ ನಿಯಮಾನುಸಾರವಾಗಿ ಅಧ್ಯಯನಮಾಡಿದ್ದರೆ, ಮತ್ತು ಗಾಯತ್ರೀಮಹಾ ಮಂತ್ರವನ್ನು ಏಕಾಗ್ರತೆಯಿಂದ ಜಪಿಸಿದ್ದರೆ,

**ರವಿರಾರಾಧಿತಸ್ತೇನ ಸಂಜೀವತು ಮಮ ಪ್ರಿಯಾ ।**
**ಯದಿ ಜೀವೇನ್ನ ಮೇ ಕಾಂತಾ ತ್ಯಜೇ ಪ್ರಾಣಾನಹಂ ತತಃ ॥೨೫॥**

ಸೂರ್ಯನನ್ನು ನಾನು ಭಕ್ತಿಯಿಂದ ಆರಾಧಿಸಿದ್ದರೆ, ಈ ಪುಣ್ಯಕರ್ಮಗಳ ಫಲವಾಗಿ ನನ್ನ ಪ್ರಿಯೆಯು ಪುನಃ ಜೀವಿಸಲಿ; ನನ್ನ ಕಾಂತೆಯು ಪುನಃ ಜೀವಿಸದಿದ್ದಲ್ಲಿ ಅನಂತರದಲ್ಲಿ ನಾನು ಈ ಪ್ರಾಣಗಳನ್ನು ತ್ಯಜಿಸುವೆನು.

**ಇತ್ಯುಕ್ತ್ವಾ ತಜ್ಜಲಂ ಭೂಮೌ ಚಿಕ್ಷೇಪಾರಾಧ್ಯ ದೇವತಾಃ ।**

ಈ ರೀತಿಯಲ್ಲಿ, ತನ್ನ ಇಷ್ಟದೇವರನ್ನು ಧ್ಯಾನದಿಂದ ಆರಾಧಿಸಿ ಆ ಜಲವನ್ನು ಭೂಮಿಯಲ್ಲಿ ಬಿಟ್ಟನು.

|| ರಾಜೋವಾಚ ||

**ಏವಂ ವಿಲಪತಸ್ತಸ್ಯ ಭಾರ್ಯಯಾ ದುಃಖಿತಸ್ಯ ಚ ||೨೬||**
**ದೇವದೂತಸ್ತದಾಭ್ಯೇತ್ಯ ವಾಕ್ಯಮಾಹ ರುರುಂ ತತಃ ||**

ರಾಜನು ಹೇಳಿದನು—ಈರೀತಿಯಾಗಿ ಹೆಂಡತಿಯ ವಿಯೋಗದಿಂದ ದುಃಖಿಸುತ್ತಾ ಅಳುತ್ತಿರುವ ರುರುವಿನ ಸಮೀಪಕ್ಕೆ ದೇವದೂತನು ಬಂದು ಹೀಗೆ ಹೇಳಿದನು.

|| ದೇವದೂತ ಉವಾಚ ||

**ಮಾ ಕಾರ್ಷೀಃ ಸಾಹಸಂ ಬ್ರಹ್ಮನ್ ಕಥಂ ಜೀವೇನ್ಮೃತಾ ಪ್ರಿಯಾ ।**
**ಗತಾಯುರೇಷಾ ಸುಶ್ರೋಣೀ ಗಂಧರ್ವಾಪ್ಸರಸೋಃ ಸುತಾ ||೨೭||**

ದೇವದೂತನು ಹೇಳಿದನು—ಎಲೈ ಬ್ರಾಹ್ಮಣನೇ; ಈ ಸಾಹಸಕಾರ್ಯವನ್ನು ಮಾಡಬೇಡ. ಆ ಕನ್ಯೆಯು ಗಂಧರ್ವ ಮತ್ತು ಅಪ್ಸರರೆಂಬ ದೇವದಂಪತಿಗಳ ಮಗಳು. ಅವಳಿಗೆ ಆಯುಸ್ಸು ತೀರಿರುವುದು. ಮೃತಿಹೊಂದಿದ ಈ ನಿನ್ನ ಪ್ರಿಯೆಯು ಹೇಗೆ ಪುನಃ ಬದುಕಿಬಂದಾಳು ?

**ಅನ್ಯಾಂ ಕಾಮಯ ಚಾರ್ವಂಗೀಂ ಮೃತೇಯಂ ಚಾವಿವಾಹಿತಾ ।**
**ಕಿಂ ರೋದಿಷಿ ಸುದುರ್ಬುದ್ಧೇ ಕಾ ಪ್ರೀತಿಸ್ತೇಽನಯಾ ಸಹ ||**

ಮೃತಳಾದ ಈ ಕನ್ಯೆಯನ್ನು ನೀನು ವಿವಾಹಮಾಡಿಕೊಂಡಿರಲಿಲ್ಲ. ಆದುದರಿಂದ ಬೇರೆ ಸುಂದರಳಾದ ಕನ್ಯೆಯನ್ನು ವರಿಸಿ ವಿವಾಹವಾಗು. ಏಕೆ ವ್ಯರ್ಥವಾಗಿ ಅಳುತ್ತೀಯೆ? ಎಲೈ ಬುದ್ಧಿಹೀನನೇ, ಮದುವೆಯಾಗುವುದಕ್ಕಿಂತ ಮುಂಚೆಯೇ ಸತ್ತುಹೋದ ಈ ಸ್ತ್ರೀಯಲ್ಲಿ ನಿನಗೆ ಪ್ರೀತಿಯು ಹೇಗೆ ಉಂಟಾಗಿ ಬೆಳೆದಿದ್ದೀತು ?

|| ರುರುರುವಾಚ ||

**ದೇವದೂತ ನ ಚಾನ್ಯಾಂ ವೈ ವರಿಷ್ಯಾಮ್ಯಹಮಂಗನಾಂ ।**
**ಯದಿ ಜೀವೇನ್ನ ಜೀವೇದ್ವಾ ಮರ್ತವ್ಯಂ ಚಾಧುನಾ ಮಯಾ ||**

ರುರುಕುಮಾರನು ದೇವದೂತನಿಗೆ ಈರೀತಿಯಲ್ಲಿ ಹೇಳಿದನು—ಎಲೈ ದೇವದೂತನೇ, ನಾನು ಬೇರೆ ಕನ್ಯೆಯನ್ನು ವಿವಾಹವಾಗುವುದಿಲ್ಲವು. ಈ ಪ್ರಿಯೆಯು

ಬದುಕಿದ್ದರಂತೂ ನಾನು ಬೇರೆ ಹೆಂಗಸನ್ನು ಪ್ರೀತಿಸಲಾರೆನು. ಅವಳು ಬದುಕದೇ ಇದ್ದರೆ ನಾನೇನೋ ಈಗಲೇ ಮೃತನಾಗುವುದೇ ಖಂಡಿತವು.

॥ ರಾಜೋವಾಚ ॥

**ವಿದಿತ್ವೇತಿ ಹತಂ ತಸ್ಯ ದೇವದೂತೋ ಮುದಾನ್ವಿತಃ ॥೩೦॥**
**ಉವಾಚ ವಚನಂ ತಥ್ಯಂ ಸತ್ಯಂ ಚಾತಿಮನೋಹರಂ ॥**

ಪರೀಕ್ಷಿದ್ರಾಜನು ಹೇಳಿದನು—ಈ ರೀತಿಯಾಗಿ ಆ ರುರುಮುನಿಯ ವ್ಯಥವಾದ ನಿಶ್ಚಯವನ್ನು ತಿಳಿದು ಆ ದೇವದೂತನು ಸಂತೋಷಪಟ್ಟವನಾಗಿ ರುರುಮುನಿಯನ್ನು ಕುರಿತು ಹಿತವೂ, ವಾಸ್ತವವೂ, ಅವನಿಗೆ ಪ್ರಿಯವೂ ಆದ ಮಾತನ್ನು ಈ ರೀತಿಯಲ್ಲಿ ಹೇಳಿದನು—

**ಉಪಾಯಂ ಶೃಣು ವಿಪ್ರೇಂದ್ರ ವಿಹಿತಂ ಯತ್ಸುರೈಃ ಪುರಾ । ॥೩೧॥**
**ಆಯುಷೋಽರ್ಧಪ್ರದಾನೇನ ಜೀವಯಾಶು ಪ್ರಮದ್ವರಾಂ ॥**

ಎಲೈ ಬ್ರಾಹ್ಮಣೋತ್ತಮನೇ, ಹಿಂದೆ ದೇವತೆಗಳು ಇಂಥ ಸಂದರ್ಭಗಳಲ್ಲಿ ಮಾಡಿದ ಒಂದು ಉಪಾಯವಿದೆ. ಅದನ್ನು ಹೇಳುವೆನು ಕೇಳು. ನಿನ್ನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಆ ಪ್ರಮದ್ವರಾಂಗನೆಗೆ ಕೊಟ್ಟು ಅವಳನ್ನು ಶೀಘ್ರವಾಗಿ ಬದುಕಿಸು.

॥ ರುರುರುವಾಚ ॥

**ಆಯುಷೋಽರ್ಧಂ ಪ್ರಯಚ್ಛಾಮಿ ಕನ್ಯಾಯೈ ನಾತ್ರ ಸಂಶಯಃ ॥೩೨॥**
**ಅದ್ಯ ಪ್ರತ್ಯಾವೃತ್ತಪ್ರಾಣಾ ಪ್ರೋತ್ತಿಷ್ಠತು ಮಮ ಪ್ರಿಯಾ ॥**

ರುರುಮುನಿಯು ಹೇಳಿದನು---ನನ್ನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಆ ಕನ್ಯೆಗೆ ಈಗಲೇ ಕೊಡುತ್ತೇನೆ. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲವು. ಹಿಂತಿರುಗಿದ ಪ್ರಾಣಗಳೊಡನೆ ನನ್ನ ಪ್ರಿಯಕಾಂತೆಯು ಈಗಲೇ ಎದ್ದು ಕೂಡಲಿ.

**ವಿಶ್ವಾವಸುಸ್ತದಾ ತತ್ರ ವಿಮಾನೇನ ಸಮಾಗತಃ । ॥೩೩॥**
**ಜ್ಞಾತ್ವಾ ಪುತ್ರೀಂ ಮೃತಾಂ ಚಾಶು ಸ್ವರ್ಗಲೋಕಾತ್ಪ್ರಮದ್ವರಾಂ ॥**

ಆಗ ತನ್ನ ಮಗಳಾದ ಪ್ರಮದ್ವರಾಕನ್ಯೆಯು ಮೃತಳಾದ ವರ್ತಮಾನವನ್ನು ತಿಳಿದು ವಿಶ್ವಾವಸು ಎಂಬ ಗಂಧರ್ವರಾಜನು ವಿಮಾನಾರೂಢನಾಗಿ ಸ್ವರ್ಗಲೋಕದಿಂದ ಜಾಗ್ರತೆಯಾಗಿ ಅಲ್ಲಿಗೆ ಬಂದನು.

**ತತೋ ಗಂಧರ್ವರಾಜಶ್ಚ ದೇವದೂತಶ್ಚ ಸತ್ತಮಃ** ॥೩೪॥
**ಧರ್ಮರಾಜಮುಪೇತ್ಯೇದಂ ವಚನಂ ಪ್ರತ್ಯಭಾಷತಾಂ ॥**

ಅನಂತರದಲ್ಲಿ ಆ ವಿಶ್ವಾವಸು ಎಂಬ ಗಂಧರ್ವರಾಜನೂ, ಸತ್ಪುರುಷನಾದ ಆ ದೇವದೂತನೂ ಯಮಧರ್ಮರಾಜನ ಸಮೀಪಕ್ಕೆ ಹೋಗಿ ಈ ರೀತಿಯಾದ ಮಾತನ್ನು ಹೇಳಿದರು.

**ಧರ್ಮರಾಜ ರುರೋಃ ಪತ್ನೀ ಸುತಾ ವಿಶ್ವಾವಸೋಸ್ತಥಾ** ॥೩೫॥
**ಮೃತಾ ಪ್ರಮದ್ವರಾ ಕನ್ಯಾ ದಷ್ಟಾ ಸರ್ಪೇಣ ಚಾಧುನಾ ॥**

ಎಲೈ ಯಮಧರ್ಮರಾಜನೇ, ರುರುಮುನಿಕುಮಾರನು ವರಿಸಿರುವ ಹೆಂಡತಿಯೂ ವಿಶ್ವಾವಸು ಗಂಧರ್ವರಾಜನ ಮಗಳೂ ಆದ ಪ್ರಮದ್ವರಾಕನ್ಯೆಯು, ಹಾವು ಕಚ್ಚಿದ್ದರಿಂದ ಈಗತಾನೆ ಮೃತಳಾಗಿದ್ದಾಳೆ.

**ಸಾ ರುರೋರಾಯುಷೋಽರ್ಧೇನ ಮರ್ತುಕಾಮಸ್ಯ ಸೂರ್ಯಜ** ॥೩೬॥
**ಸಮುತ್ತಿಷ್ಠತು ತನ್ವಂಗೀ ವ್ರತಚರ್ಯಾಪ್ರಭಾವತಃ ॥**

ಎಲೈ ಸೂರ್ಯಪುತ್ರನಾದ ಧರ್ಮರಾಜನೇ, ಪ್ರಿಯೆಯ ವಿರಹದಿಂದ ಮೃತ್ಯುವನ್ನು ಬಯಸುತ್ತಿರುವ ಆ ರುರುಕುಮಾರನು ಅವಳಿಗೆ ಕೊಡಲಿರುವ ತನ್ನ ಅರ್ಧ ಆಯುಸ್ಸಿನಿಂದಲೂ, ಅವನು ಆಚರಿಸಿರುವ ಪುಣ್ಯಕಾರ್ಯಗಳ ಮಹಿಮೆಯಿಂದಲೂ, ಆ ಸುಂದರಯುವತಿಯು ಜೀವಸಹಿತವಾಗಿ ಎದ್ದು ಕೂಡಲಿ.

॥ ಧರ್ಮ ಉವಾಚ ॥

**ವಿಶ್ವಾವಸುಸುತಾಂ ಕನ್ಯಾಂ ದೇವದೂತ ಯದೀಚ್ಛಸಿ** ॥೩೭॥
**ಉತ್ತಿಷ್ಠತ್ವಾಯುಷೋಽರ್ಧೇನ ರುರುಂ ಗತ್ವಾ ತ್ವಮರ್ಪಯ ॥**

ಧರ್ಮರಾಜನು ಹೇಳಿದನು—ಎಲೈ ದೇವದೂತನೇ, ವಿಶ್ವಾವಸುರಾಜನ ಮಗಳು ಬದುಕಲೆಂದು ನಿನಗೆ ಈರೀತಿ ಇಚ್ಛೆ ಇದ್ದಲ್ಲಿ, ಮುನಿಕುಮಾರನ ಅರ್ಧಾ

ಯುಸ್ಸಿನಿಂದ ಅವಳು ಬದುಕಲಿ. ನೀನು ಅವಳನ್ನು ಆ ರುರುಕುಮಾರನಿಗೆ ಸಮರ್ಪಿಸುವವನಾಗು.

॥ ರಾಜೋವಾಚ ॥

**ಏವಮುಕ್ತಸ್ತತೋ ಗತ್ವಾ ಜೀವಯಿತ್ವಾ ಪ್ರಮದ್ವರಾಂ ॥೩೮॥**
**ರುರೋಃ ಸಮರ್ಪಯಾಮಾಸ ದೇವದೂತಸ್ತ್ವರಾನ್ವಿತಃ ॥**

ರಾಜನು ಹೇಳಿದನು—ಹೀಗೆ ಹೇಳಿದ ಧರ್ಮರಾಜನ ಮಾತನ್ನು ಕೇಳಿ ದೇವದೂತನು ಶೀಘ್ರವಾಗಿ ಬಂದು ಪ್ರಮದ್ವರಾಕನ್ಯೆಯನ್ನು ಬದುಕಿಸಿ ಆ ಕನ್ಯೆಯನ್ನು ರುರುಕುಮಾರನಿಗೆ ಒಪ್ಪಿಸಿದನು.

**ತತಃ ಶುಭೇಽಹ್ನಿ ವಿಧಿನಾ ರುರುಣಾಪಿ ವಿವಾಹಿತಾ ॥೩೯॥**
**ಇತ್ಥಂ ಚೋಪಾಯಯೋಗೇನ ಮೃತಾಪ್ಯುಜ್ಜೀವಿತಾ ತದಾ ॥**

ಅನಂತರದಲ್ಲಿ ಒಂದು ಶುಭದಿನದಲ್ಲಿ ಆ ರುರುಕುಮಾರನು ಆ ಕನ್ಯೆಯನ್ನು ವಿಧಿಪೂರ್ವಕವಾಗಿ ವಿವಾಹಮಾಡಿಕೊಂಡನು. ಆಗ ಮರಣವನ್ನು ಹೊಂದಿದ್ದರೂ ಆ ಕನ್ಯೆಯು ಈ ಪ್ರಕಾರವಾದ ಯುಕ್ತಿಯಿಂದ ಪುನಃ ಬದುಕಿಸಲ್ಪಟ್ಟಳು.

**ಉಪಾಯಸ್ತು ಪ್ರಕರ್ತವ್ಯಃ ಸರ್ವಥಾ ಶಾಸ್ತ್ರಸಂಮತಃ ॥೪೦॥**
**ಮಣಿಮಂತ್ರೌಷಧೀಭಿಶ್ಚ ವಿಧಿವತ್ಪ್ರಾಣರಕ್ಷಣೇ ।**

ಪ್ರಾಣರಕ್ಷಣೆವಿಷಯದಲ್ಲಿ ವಿಧಿಪೂರ್ವಕವಾಗಿ ಮಣಿಮಂತ್ರೌಷಧಾದಿಗಳನ್ನು ಉಪಯೋಗಿಸುವುದೇ ಮೊದಲಾದ ಉಪಾಯಗಳನ್ನು ಮಾಡಬೇಕು. ಒಬ್ಬರ ಪ್ರಾಣಗಳನ್ನು ಉಳಿಸಲು ಹೀಗೆ ಮಾಡುವುದು ನಿಶ್ಚಯವಾಗಿಯೂ ಶಾಸ್ತ್ರಸಮ್ಮತವು.

**ಇತ್ಯುಕ್ತ್ವಾ ಸಚಿವಾನ್ ರಾಜಾ ಕಲ್ಪಯಿತ್ವಾ ಸುರಕ್ಷಕಾನ್ ॥೪೧॥**
**ಕಾರಯಿತ್ವಾಥ ಪ್ರಾಸಾದಂ ಸಪ್ತಭೂಮಿಕಮುತ್ತಮಂ ॥**
**ಆರುರೋಹೋತ್ತರಾಸೂನುಃ ಸಚಿವೈಃ ಸಹ ತತ್ಕ್ಷಣಂ ॥೪೨॥**

ಆ ಉತ್ತರಾದೇವಿಯ ಪುತ್ರನಾದ ಪರೀಕ್ಷಿದ್ರಾಜನು, ಈ ರೀತಿಯಲ್ಲಿ ಮಂತ್ರಿಗಳಿಗೆ ಹೇಳಿ, ತನಗೆ ಒಳ್ಳೆಯ ಅಂಗರಕ್ಷಕರನ್ನು ನಿಯಮಿಸಿಕೊಂಡು, ಏಳು

ಅಂತಸ್ತು (ಮಹಡಿ)ಗಳುಳ್ಳ ದಿವ್ಯಭವನವನ್ನು ಕಟ್ಟಿಸಿ, ತನ್ನ ಮಂತ್ರಿಗಳಿಂದ ಸಹಿತನಾಗಿ ಕೂಡಲೇ ಆ ಭವನವನ್ನು ಏರಿದನು.

**ಮಣಿಮಂತ್ರಧರಾಃ ಶೂರಾಃ ಸ್ಥಾಪಿತಾಸ್ತತ್ರ ರಕ್ಷಣೇ ।**

ಆ ಪ್ರಾಸಾದದಲ್ಲಿ ಮಣಿಮಂತ್ರೌಷಧಾದಿಗಳಲ್ಲಿ ನಿಪುಣರಾದವರನ್ನೂ ಪರಾಕ್ರಮಶಾಲಿಗಳಾದ ಅಂಗರಕ್ಷಕರನ್ನೂ ತನ್ನ ರಕ್ಷಣೆಗೋಸ್ಕರ ನಿಯಮಿಸಿದನು.

**ಪ್ರೇಷಯಾಮಾಸ ಭೂಪಾಲೋ ಮುನಿಂ ಗೌರಮುಖಂ ತತಃ ॥೪೩॥**

**ಪ್ರಸಾದಾರ್ಥಂ ಸೇವಕಸ್ಯ ಕ್ಷಮಸ್ವೇತಿ ಪುನಃಪುನಃ ॥**
**ಬ್ರಾಹ್ಮಣಾನ್ ಸಿದ್ಧಮಂತ್ರಜ್ಞಾನ್ ರಕ್ಷಣಾರ್ಥಮಿತಸ್ತತಃ ॥೪೪॥**

ಅನಂತರದಲ್ಲಿ ಪರೀಕ್ಷಿದ್ರಾಜನು ತನಗೆ ಶಾಪವನ್ನಿತ್ತ ಋಷಿಪುತ್ರನನ್ನು ಕ್ಷಮಿಸಬೇಕೆಂದೂ, ಅನುಗ್ರಹಮಾಡಬೇಕೆಂದೂ ಪುನಃ ಪುನಃ ಕೇಳಿಕೊಳ್ಳುವುದಕ್ಕಾಗಿ ಗೌರಮುಖನೆಂಬ ಒಬ್ಬ ಮುನಿಯನ್ನು ಅವನಲ್ಲಿಗೆ ಕಳುಹಿಸಿದನು. ಸಿದ್ಧಮಂತ್ರಾದಿಗಳಲ್ಲಿ ಪ್ರವೀಣರಾದ ಬ್ರಾಹ್ಮಣರನ್ನು ನಾನಾಕಡೆಗಳಿಂದ ಕರೆಯಿಸಿ ತನ್ನ ರಕ್ಷಣೆಗೋಸ್ಕರ ಅವರನ್ನು ನಿಯಮಿಸಿದನು.

**ಮಂತ್ರೀಪುತ್ರಃ ಸ್ಥಿತಸ್ತತ್ರ ಸ್ಥಾಪಯಾಮಾಸ ದಂತಿನಃ ।**
**ನ ಕಶ್ಚಿದಾರುಹೇತ್ತತ್ರ ಪ್ರಸಾದೇ ಚಾತಿರಕ್ಷಿತೇ ॥೪೫॥**

ಮಂತ್ರಿಯೂ ಪುತ್ರನೂ ಕಾವಲಿಗಾಗಿ ಅಲ್ಲಿದ್ದುಕೊಂಡು ರಕ್ಷಣೆಗಾಗಿ ಆನೆಗಳನ್ನು ನಿಲ್ಲಿಸಿದನು. ಅತಿ ಜಾಗರೂಕತೆಯಿಂದ ರಕ್ಷಿತವಾದ ಆ ಭವನವನ್ನು ಯಾರೂ ಹತ್ತಿ ಹೋಗದಂತೆ ಅಜ್ಞೆಮಾಡಿದನು.

**ವಾತೋಽಪಿ ನ ಚರೇತ್ತತ್ರ ಪ್ರವೇಶೇ ವಿನಿವಾರ್ಯತೇ ।**
**ಭಕ್ಷ್ಯಭೋಜ್ಯಾದಿಕಂ ರಾಜಾ ತತ್ರಸ್ಥಶ್ಚ ಚಕಾರ ಸಃ ॥೪೬॥**

ಆ ಪ್ರಾಸಾದಕ್ಕೆ ಗಾಳಿಯು ಸಹಾ ಪ್ರವೇಶಮಾಡಲು ಸಾಧ್ಯವಿರಲಿಲ್ಲ. ಒಂದು ವೇಳೆ ಪ್ರವೇಶಿಸಿದರೂ ಅದನ್ನು ತಡೆಯಲು ಆಜ್ಞೆಯಿತ್ತು. ಆ ರಾಜನು ತಿಂಡಿ ಊಟಗಳನ್ನು ಸಹ ಆ ಭವನದಲ್ಲಿಯೇ ಇದ್ದುಕೊಂಡೇ ಮಾಡುತ್ತಿದ್ದನು.

**ಸ್ನಾನಸಂಧ್ಯಾದಿಕಂ ಕರ್ಮ ತತ್ರೈವ ವಿನಿವರ್ತ್ಯ ಚ ।**
**ರಾಜಕಾರ್ಯಾಣಿ ಸರ್ವಾಣಿ ತತ್ರಸ್ಥಶ್ಚಾಕರೋನ್ನೃಪಃ ॥೪೭॥**

ಈ ರೀತಿ ಪರೀಕ್ಷಿದ್ರಾಜನು ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ಅಲ್ಲಿಯೇ ನೆರವೇರಿಸುತ್ತಲೂ ಸಮಸ್ತ ರಾಜಕಾರ್ಯಗಳನ್ನು ಸಹ ಆ ಭವನದಲ್ಲಿದ್ದುಕೊಂಡೇ ನಿರ್ವಹಿಸುತ್ತಲೂ ಇದ್ದನು.

**ಮಂತ್ರಿಭಿಃ ಸಹ ಸಂಮಂತ್ರ್ಯ ಗಣಯನ್ ದಿವಸಾನಪಿ ।**
**ಕಶ್ಚಿಚ್ಚ ಕಶ್ಯಪೋ ನಾಮ ಬ್ರಾಹ್ಮಣೋ ಮಂತ್ರಿಸತ್ತಮಃ ॥೪೮॥**
**ಶುಶ್ರಾವ ಚ ತಥಾ ಶಾಪಂ ಪ್ರಾಪ್ತಂ ರಾಜ್ಞಾ ಮಹಾತ್ಮನಾ ॥**

ಈ ರೀತಿ ತನ್ನ ಮಂತ್ರಿಗಳೊಡನೆ ಆಲೋಚಿಸಿ ದಿನಗಳನ್ನು ಕಳೆಯುತ್ತಿರಲಾಗಿ, ಮಂತ್ರಶಾಸ್ತ್ರಜ್ಞನಾದ ಕಶ್ಯಪನೆಂಬ ಒಬ್ಬ ಬ್ರಾಹ್ಮಣನು ಮಹಾತ್ಮನಾದ ಪರೀಕ್ಷಿದ್ರಾಜನಿಗೆ ಪ್ರಾಪ್ತವಾದ ಶಾಪವಿಚಾರವನ್ನು ಜನರಿಂದ ಕೇಳಿದನು.

**ಸ ಧನಾರ್ಥೀ ದ್ವಿಜಶ್ರೇಷ್ಠಃ ಕಶ್ಯಪಃ ಸಮಚಿಂತಯತ್ ॥೪೯॥**
**ವ್ರಜಾಮಿ ತತ್ರ ಯತ್ರಾಸ್ತೇ ಶಪ್ತೋ ರಾಜಾ ದ್ವಿಜೇನ ಹ ।**

ಹಣವನ್ನು ಸಂಪಾದಿಸಬೇಕೆಂದು ಆಶೆಯುಳ್ಳ ಆ ಕಶ್ಯಪನೆಂಬ ಬ್ರಾಹ್ಮಣೋತ್ತಮನು ಋಷಿಯಿಂದ ಶಾಪಯುಕ್ತನಾದ ಆ ರಾಜನು ಇರುವ ಸ್ಥಳಕ್ಕೆ ಹೋಗುವೆನೆಂದು ಯೋಚಿಸಿದನು.

**ಇತಿ ಕೃತ್ವಾ ಮತಿಂ ವಿಪ್ರಃ ಸ್ವಗೃಹಾನ್ನಿಃಸೃತಃ ಪಥಿ ॥೫೦॥**
**ಕಶ್ಯಪೋ ಮಂತ್ರವಿದ್ವಿದ್ವಾನ್ ಧನಾರ್ಥೀ ಮುನಿಸತ್ತಮಃ ॥**

ಹೀಗೆ ಯೋಚಿಸಿ ಮಣಿಮಂತ್ರಾದಿಗಳನ್ನು ತಿಳಿದವನೂ, ವಿದ್ವಾಂಸನೂ ಆದ ಆ ಕಶ್ಯಪನೆಂಬ ಮುನಿಶ್ರೇಷ್ಠನು ದ್ರವ್ಯಾಭಿಲಾಷೆಯಿಂದ ಕೂಡಿದವನಾಗಿ ತನ್ನ ಮನೆಯಿಂದ ಹೊರಹೊರಟು ಮಾರ್ಗಾಭಿಮುಖನಾದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ**
**ನವಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

### || ದಶಮೋಽಧ್ಯಾಯಃ ||

### ಹತ್ತನೆಯ ಅಧ್ಯಾಯವು

|| ಸೂತ ಉವಾಚ ||

**ತಸ್ಮಿನ್ನೇವ ದಿನೇ ನಾಮ್ನಾ ತಕ್ಷಕಸ್ತಂ ನೃಪೋತ್ತಮಂ ।**
**ಶಪ್ತಂ ಜ್ಞಾತ್ವಾ ಗೃಹಾತ್ತೂರ್ಣಂ ನಿಃಸೃತಃ ಪುರುಷೋತ್ತಮಃ ॥೧॥**

ಸೂತನು ಹೇಳಿದನು—ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ ಕಶ್ಯಪನೆಂಬ ಮಂತ್ರಜ್ಞನು ರಾಜನ ದರ್ಶನಕ್ಕಾಗಿ ಹೊರಟ ದಿವಸದಲ್ಲಿಯೇ, ತಕ್ಷಕನೂ ಸಹ ಪರೀಕ್ಷಿದ್ರಾಜನು ಶಾಪವನ್ನು ಹೊಂದಿದ ವಿಚಾರವನ್ನು ತಿಳಿದವನಾಗಿ, ಪುರುಷ ವೇಷಧಾರಿಯಾಗಿ ಮನೆಯಿಂದ ಶೀಘ್ರವಾಗಿ ಹೊರಟನು.

**ವೃದ್ಧಬ್ರಾಹ್ಮಣವೇಷೇಣ ತಕ್ಷಕಃ ಪಥಿ ನಿರ್ಗತಃ ।**
**ಅಪಶ್ಯತ್ಕಶ್ಯಪಂ ಮಾರ್ಗೇ ವ್ರಜಂತಂ ನೃಪತಿಂ ಪ್ರತಿ ॥೨॥**

ತಕ್ಷಕನು ಮುದುಕನಾದ ಬ್ರಾಹ್ಮಣನ ವೇಷದಿಂದ ಹೊರಟು, ಮಾರ್ಗದಲ್ಲಿ ರಾಜನನ್ನು ನೋಡಲು ಹೋಗುತ್ತಿರುವ ಕಶ್ಯಪನೆಂಬ ಬ್ರಾಹ್ಮಣನನ್ನು ಕಂಡನು.

**ತಮಪೃಚ್ಛತ್ಪನ್ನಗೋಽಸೌ ಬ್ರಾಹ್ಮಣಂ ಮಂತ್ರವಾದಿನಂ ।**
**ಕ್ವ ಭವಾಂಸ್ತ್ವರಿತೋ ಯಾತಿ ಕಿಂ ಚ ಕಾರ್ಯಂ ಚಿಕೀರ್ಷತಿ ॥೩॥**

ಬ್ರಾಹ್ಮಣವೇಷದಲ್ಲಿದ್ದ ಆ ಸರ್ಪಶ್ರೇಷ್ಠನು, ಆ ಮಂತ್ರವಾದಿಯಾದ ಕಶ್ಯಪನನ್ನು ಕುರಿತು, ಎಲೈ ಬ್ರಾಹ್ಮಣನೇ, ನೀನು ಇಷ್ಟು ಆತುರವಾಗಿ ಎಲ್ಲಿಗೆ ಹೋಗುತ್ತಿದ್ದೀಯೆ ? ನೀನು ತ್ವರಿತವಾಗಿ ಹೋಗಿ ಯಾವ ಕಾರ್ಯವನ್ನು ಮಾಡಬೇಕೆಂದು ಅಪೇಕ್ಷಿಸುತ್ತೀಯೆ ? ಎಂದು ಕೇಳಿದನು.

|| ಕಶ್ಯಪ ಉವಾಚ ||

**ಪರೀಕ್ಷಿತಂ ನೃಪಶ್ರೇಷ್ಠಂ ತಕ್ಷಕಶ್ಚ ಪ್ರಧಕ್ಷ್ಯತಿ ।**
**ತತ್ರಾಹಂ ತ್ವರಿತೋ ಯಾಮಿ ನೃಪಂ ಕರ್ತುಮಪಜ್ವರಂ ॥೪॥**

ಕಶ್ಯಪನು ಈ ರೀತಿಯಲ್ಲಿ ಪ್ರತ್ಯುತ್ತರವನ್ನು ಹೇಳಿದನು — ನೃಪೋತ್ತಮನಾದ ಪರೀಕ್ಷಿದ್ರಾಜನನ್ನು ತಕ್ಷಕನೆಂಬ ಸರ್ಪಶ್ರೇಷ್ಠನು ಕಚ್ಚಿಸುಡುವನು. ಆದುದರಿಂದ ನಾನು ಅಲ್ಲಿಗೆ ಅತಿ ಶೀಘ್ರವಾಗಿ ಹೋಗಿ ಆ ರಾಜನಿಗೆ ಹಾವಿನ ಕಡಿಯುವಿಕೆಯಿಂದ ಉಂಟಾಗುವ ವಿಷದ ತಾಪವನ್ನು ಪರಿಹರಿಸಿ ಅವನನ್ನು ಸ್ವಸ್ಥನನ್ನಾಗಿ ಮಾಡುವೆನು.

**ಮಂತ್ರೋऽಸ್ತಿ ಮಮ ವಿಪ್ರೇಂದ್ರ ವಿಷನಾಶಕರಃ ಕಿಲ ।**
**ಜೀವಯಿಷ್ಯಾಮ್ಯಹಂ ತಂ ವೈ ಜೀವಿತವ್ಯೇऽಧುನಾ ಕಿಲ ॥೫॥**

ಎಲೈ ಬ್ರಾಹ್ಮಣಶ್ರೇಷ್ಠನೇ, ನನ್ನ ಹತ್ತಿರ ಸರ್ಪಾದಿವಿಷವನ್ನು ನಾಶಮಾಡಲು ಸಮರ್ಥವಾದ ಮಂತ್ರವಿರುವುದು. ಅದರಿಂದ ನಾನು ಆ ರಾಜನಿಗೆ ಆಯುಸ್ಸಿದ್ದಲ್ಲಿ ಅಪಮೃತ್ಯುವಿನಿಂದ ರಕ್ಷಿಸಿ ಬದುಕಿಸಲು ಯೋಗ್ಯನಾದ ಅವನನ್ನು ಬದುಕಿಸುವೆನು.

|| ತಕ್ಷಕ ಉವಾಚ ||

**ಅಹಂ ಸ ಪನ್ನಗೋ ಬ್ರಹ್ಮನ್ ತಂ ಧಕ್ಷ್ಯಾಮಿ ಮಹೀಪತಿಂ ।**
**ನಿವರ್ತಸ್ವ ನ ಶಕ್ತಸ್ತ್ವಂ ಮಯಾ ದಷ್ಟಂ ಚಿಕಿತ್ಸಿತುಂ ॥೬॥**

ತಕ್ಷಕನು ಬ್ರಾಹ್ಮಣನಿಗೆ ಹೀಗೆ ಹೇಳಿದನು—ಎಲೈ ಬ್ರಾಹ್ಮಣನೇ, ನಾನೇ ಆ ಸರ್ಪಶ್ರೇಷ್ಠನಾದ ತಕ್ಷಕನು. ಆ ರಾಜನನ್ನು ನಾನೇ ಕಚ್ಚಿ ಸುಡುವೆನು. ನನ್ನಿಂದ ಕಚ್ಚಲ್ಪಟ್ಟ ಪ್ರಾಣಿಗೆ ಚಿಕಿತ್ಸೆಮಾಡಲು ನೀನು ಶಕ್ತನಲ್ಲ. ಆದುದರಿಂದ ನೀನು ಹಿಂತಿರುಗಿ ಹೋಗು.

|| ಕಶ್ಯಪ ಉವಾಚ ||

**ಅಹಂ ದಷ್ಟಂ ತ್ವಯಾ ಸರ್ಪ ನೃಪಂ ಶಪ್ತಂ ದ್ವಿಜೇನ ವೈ ।**
**ಜೀವಯಿಷ್ಯಾಮ್ಯಸಂದೇಹಂ ಕಾಮಂ ಮಂತ್ರಬಲೇನ ವೈ ॥೭॥**

ಕಶ್ಯಪನು ಹೇಳಿದನು—ಎಲೈ ಸರ್ಪಶ್ರೇಷ್ಠನೇ, ಬ್ರಾಹ್ಮಣನ ಶಾಪಕ್ಕೆ ಸಿಕ್ಕಿರುವ ಆ ರಾಜನು ನಿನ್ನಿಂದ ಕಚ್ಚಲ್ಪಟ್ಟರೆ, ನನ್ನ ಮಂತ್ರಶಕ್ತಿಯಿಂದ ಆ ರಾಜನ

ಮೃತದೇಹವನ್ನು ವಿಷರಹಿತವನ್ನಾಗಿ ಮಾಡಿ ಪುನಃ ಬದುಕಿಸುವೆನು. ಈ ವಿಚಾರ ದಲ್ಲಿ ಅನುಮಾನವಿಲ್ಲವು.

॥ ತಕ್ಷಕ ಉವಾಚ ॥

**ಯದಿ ತ್ವಂ ಜೀವಿತುಂ ಯಾಸಿ ಮಯಾ ದಷ್ಟಂ ನೃಪೋತ್ತಮಂ ।**
**ಮಂತ್ರಶಕ್ತಿಬಲಂ ವಿಪ್ರ ದರ್ಶಯ ತ್ವಂ ಮಮಾನಘ ॥೮॥**

**ಧಕ್ಷ್ಯಾಮ್ಯೇನಂ ಚ ನ್ಯಗ್ರೋಧಂ ವಿಷದಂಷ್ಟ್ರಾಭಿರದ್ಯ ವೈ ।**

ತಕ್ಷಕನು ಹೇಳಿದನು—ಎಲೈ ಬ್ರಾಹ್ಮಣನೇ. ನನ್ನಿಂದ ಕಚ್ಚಲ್ಪಟ್ಟ ಆ ಪರೀಕ್ಷಿದ್ರಾಜನನ್ನು ನೀನು ಮಂತ್ರಶಕ್ತಿಯಿಂದ ಬದುಕಿಸಲು ಸಮರ್ಥನಾಗಿದ್ದಲ್ಲಿ, ಆ ಮಂತ್ರಶಕ್ತಿಯ ಪ್ರಭಾವವನ್ನು ನನಗೆ ತೋರಿಸು. ಎಲೈ ಪೂಜ್ಯನೇ, ನಾನು ಈಗ ಇಲ್ಲಿರುವ ಆಲದಮರವನ್ನು ನನ್ನ ವಿಷದ ಹಲ್ಲುಗಳಿಂದ ಕಚ್ಚುತ್ತೇನೆ. ಅದನ್ನು ನೀನು ಪುನಃ ಸಜೀವವನ್ನಾಗಿ ಮಾಡಿ ನಿನ್ನ ಮಂತ್ರಶಕ್ತಿಯನ್ನು ತೋರಿಸು.

॥ ಕಶ್ಯಪ ಉವಾಚ ॥

**ಜೀವಯಿಷ್ಯೇ ತ್ವಯಾ ದಷ್ಟಂ ದಗ್ಧಂ ವಾ ಪನ್ನಗೋತ್ತಮ ॥೯॥**

ಕಶ್ಯಪನು ಹೇಳಿದನು—ಎಲೈ ಸರ್ಪಶ್ರೇಷ್ಠನೇ, ಹಾಗೆಯೇ ಆಗಲಿ; ನಿನ್ನಿಂದ ಕಚ್ಚಲ್ಪಟ್ಟು ವಿಷದ ಜ್ವಾಲೆಯಿಂದ ದಗ್ಧವಾದ ಆ ವೃಕ್ಷವನ್ನು ನಾನು ಪುನಃ ಬದುಕಿಸುವೆನು.

॥ ಸೂತ ಉವಾಚ ॥

**ಅದಶತ್ಪನ್ನಗೋ ವೃಕ್ಷಂ ಭಸ್ಮಸಾಚ್ಚ ಚಕಾರ ತಂ ।**
**ಉವಾಚ ಕಶ್ಯಪಂ ಭೂಯೋ ಜೀವಯೈನಂ ದ್ವಿಜೋತ್ತಮ ॥೧೦॥**

ಸೂತಋಷಿಯು ಹೇಳಿದನು—ಹೀಗೆ ಕಶ್ಯಪನ ಮಾತನ್ನು ಕೇಳಿ ಆ ತಕ್ಷಕನು ಆ ವೃಕ್ಷವನ್ನು ತನ್ನ ವಿಷದಂಷ್ಟ್ರಗಳಿಂದ ಕಚ್ಚಿ, ಸುಟ್ಟು ಬೂದಿಯಾಗುವಂತೆ ಮಾಡಿದನು. ಅನಂತರದಲ್ಲಿ ಕಶ್ಯಪನನ್ನು ನೋಡಿ ಎಲೈ ಬ್ರಾಹ್ಮಣಶ್ರೇಷ್ಠನೇ, ಈ ವೃಕ್ಷವನ್ನು ಬದುಕಿಸು ಎಂದು ಹೇಳಿದನು.

**ದೃಷ್ಟ್ವಾ ಭಸ್ಮೀಕೃತಂ ವೃಕ್ಷಂ ಪನ್ನಗೇನ ವಿಷಾಗ್ನಿನಾ ।**
**ಸರ್ವಂ ಭಸ್ಮ ಸಮಾಹೃತ್ಯ ಕಶ್ಯಪೋ ವಾಕ್ಯಮಬ್ರವೀತ್ ॥೨೧॥**

ಸರ್ಪದ ವಿಷಜ್ವಾಲೆಯಿಂದ ಉರಿದು ಬೂದಿಯಾಗಿರುವ ಆ ವೃಕ್ಷವನ್ನು ನೋಡಿ ಆ ಕಶ್ಯಪನೆಂಬ ಮಂತ್ರಜ್ಞನು, ಅಲ್ಲಿ ಭೂಮಿಯಲ್ಲಿ ಬಿದ್ದಿರುವ ಎಲ್ಲ ಬೂದಿಯನ್ನೂ ರಾಶಿಮಾಡಿ ತಕ್ಷಕನನ್ನು ಕುರಿತು ಹೀಗೆ ಹೇಳಿದನು.

**ಪಶ್ಯ ಮಂತ್ರಬಲಂ ಮೇಽದ್ಯ ನ್ಯಗ್ರೋಧಂ ಪನ್ನಗೋತ್ತಮ ।**
**ಜೀವಯಾಮ್ಯದ್ಯ ವೃಕ್ಷಂ ವೈ ಪಶ್ಯತಸ್ತೇ ಮಹಾವಿಷ ॥೨೨॥**

ಎಲೈ ಸರ್ಪಶ್ರೇಷ್ಠನಾದ ತಕ್ಷಕನೇ, ನನ್ನ ಮಂತ್ರಸಾಮರ್ಥ್ಯವನ್ನು ಈಗಲೇ ನೋಡು. ಮಹಾವಿಷವೆಂದು ಹೆಮ್ಮೆಯಿಂದಿರುವ ತಕ್ಷಕನೇ, ನೀನು ನೋಡುತ್ತಿರುವ ಹಾಗೆಯೇ ಈ ವಟವೃಕ್ಷವನ್ನು ಪುನಃ ಈಗಲೇ ಬದುಕಿಸುವೆನು.

**ಇತ್ಯುಕ್ತ್ವಾ ಜಲಮಾದಾಯ ಕಶ್ಯಪೋ ಮಂತ್ರವಿತ್ತಮಃ ।**
**ಸಿಷೇಚ ಭಸ್ಮರಾಶಿಂ ತಂ ಮಂತ್ರಿತೇನೈವ ವಾರಿಣಾ ॥೨೩॥**

ಮಂತ್ರಜ್ಞರಲ್ಲಿ ಶ್ರೇಷ್ಠನಾದ ಆ ಕಶ್ಯಪನು ಹೀಗೆ ಹೇಳಿ ನೀರನ್ನು ಕೈಯಿಂದ ತೆಗೆದುಕೊಂಡು ಅದನ್ನು ಮಂತ್ರಿಸಿ ಆ ನೀರಿನಿಂದ ಬೂದಿಯ ರಾಶಿಯನ್ನು ತೋಯಿಸಿದನು.

**ತದ್ವಾರಿಸೇಚನಾಜ್ಜಾತೋ ನ್ಯಗ್ರೋಧಃ ಪೂರ್ವವಚ್ಛುಭಃ ।**
**ವಿಸ್ಮಯಂ ತಕ್ಷಕಃ ಪ್ರಾಪ್ತೋ ದೃಷ್ಟ್ವಾ ತಂ ಜೀವಿತಂ ನಗಂ ॥೨೪॥**

ಮಂತ್ರಪೂತವಾದ ಆ ಜಲಪ್ರೋಕ್ಷಣದ ಪ್ರಭಾವದಿಂದ ವಟವೃಕ್ಷವು ಪೂರ್ವದಲ್ಲಿದ್ದಂತೆ ಬದುಕಿ ಕಂಗೊಳಿಸಿತು ! ಸತ್ತವೃಕ್ಷವು ಪುನಃ ಜೀವಿಸಿ ನಿಂತಿರುವುದನ್ನು ನೋಡಿ ತಕ್ಷಕನಿಗೆ ಬಹಳ ಆಶ್ಚರ್ಯವಾಯಿತು !

**ತಮಾಹ ಕಶ್ಯಪಂ ನಾಗಃ ಕಿಮರ್ಥಂ ತೇ ಪರಿಶ್ರಮಃ ।**
**ಸಂಪಾದಯಾಮಿ ತಂ ಕಾಮಂ ಬ್ರೂಹಿ ವಾಡಬ ವಾಂಛಿತಂ ॥೨೫॥**

ಸರ್ಪಶ್ರೇಷ್ಠನಾದ ತಕ್ಷಕನು ಕಶ್ಯಪನನ್ನು ನೋಡಿ, ನೀನು ಈ ರೀತಿ ರಾಜನಲ್ಲಿಗೆ ನಡೆದು ಹೋಗುವ ಕಷ್ಟವನ್ನು ಏತಕ್ಕೆ ಪಡಬೇಕು ? ನಿನ್ನ ಅಪೇಕ್ಷೆಯು ಏನು ? ಅದನ್ನು ಹೇಳು. ನಾನು ಅದನ್ನು ನೆರವೇರಿಸಿಕೊಡುವೆನು ಎಂದು ಹೇಳಿದನು.

|| ಕಶ್ಯಪ ಉವಾಚ ||

**ವಿತ್ತಾರ್ಥೀ ನೃಪತಿಂ ಮತ್ವಾ ಶಪ್ತಂ ಪನ್ನಗ ನಿಃಸೃತಃ ।**
**ಗೃಹಾದಹಂ ಚೋಪಕರ್ತುಂ ವಿದ್ಯಯಾ ನೃಪಸತ್ತಮಂ ॥೧೬॥**

ಕಶ್ಯಪನು ಹೇಳಿದನು--ಎಲೈ ಸರ್ಪಶ್ರೇಷ್ಠನೇ, ರಾಜರಲ್ಲಿ ಶ್ರೇಷ್ಠನಾದವನಿಗೆ ಶಾಪಬಂದಿರುವುದನ್ನು ತಿಳಿದು, ನಾನು ಅವನಿಗೆ ನನ್ನ ಪ್ರಾಣಸಂಜೀವನೀವಿದ್ಯೆಯಿಂದ ಉಪಕಾರಮಾಡಿ, ಆ ರಾಜನಿಂದ ಧನವನ್ನು ಹೊಂದುವುದಕ್ಕೋಸ್ಕರ ಮನೆಯಿಂದ ಹೊರಟುಬಂದಿದ್ದೇನೆ.

|| ತಕ್ಷಕ ಉವಾಚ ||

**ವಿತ್ತಂ ಗೃಹಾಣ ವಿಪ್ರೇಂದ್ರ ಯಾವದಿಚ್ಛಸಿ ಪಾರ್ಥಿವಾತ್ ।**
**ದದಾಮಿ ಸ್ವಗೃಹಂ ಯಾಹಿ ಸಕಾಮೋಽಹಂ ಭವಾಮ್ಯತಃ ॥೧೭॥**

ತಕ್ಷಕನು ಹೇಳಿದನು—ಎಲೈ ವಿಪ್ರಶ್ರೇಷ್ಠನೇ, ರಾಜನಿಂದ ನಿನಗೆ ಧನವನ್ನು ಪಡೆಯಬೇಕೆಂಬ ಅಪೇಕ್ಷೆಯಿದ್ದಲ್ಲಿ ಆ ಧನವನ್ನು ನಾನೇ ನಿನಗೆ ಬೇಕಾದಷ್ಟನ್ನು ಕೊಡುವೆನು. ಅದನ್ನು ತೆಗೆದುಕೊಂಡು ಸ್ವಗೃಹಾಭಿಮುಖನಾಗಿ ಹೊರಡು. ಹೀಗೆ ನೀನು ಹಿಂತಿರುಗಿ ಹೋಗುವುದರಿಂದ ನಾನು ಹೊರಟ ಕೆಲಸವೂ ಸಫಲವಾಗುವುದು.

|| ಸೂತ ಉವಾಚ ||

**ತಚ್ಛ್ರುತ್ವಾ ವಚನಂ ತಸ್ಯ ಕಶ್ಯಪಃ ಪರಮಾರ್ಥವಿತ್ ।**
**ಚಿಂತಯಾಮಾಸ ಮನಸಾ ಕಿಂ ಕರೋಮಿ ಪುನಃಪುನಃ ॥೧೮॥**

ಸೂತಋಷಿಯು ಹೇಳಿದನು —ತಕ್ಷಕನ ಆ ಮಾತನ್ನು ಕೇಳಿ ವಾಸ್ತವವಾದ ಅಂಶವನ್ನು ತಿಳಿದ ಆ ಕಶ್ಯಪನು ಮುಂದೆ ಏನುಮಾಡಬೇಕೆಂದು ತೋಚದೆ ಪುನಃ ಪುನಃ ಮನಸ್ಸಿನಲ್ಲಿಯೇ ಯೋಚಿಸತೊಡಗಿದನು.

**ಧನಂ ಗೃಹೀತ್ವಾ ಸ್ವಗೃಹಂ ಪ್ರಯಾಮಿ ಯದ್ಯಹಂ ಪುನಃ ।**
**ಭವಿಷ್ಯತಿ ನ ಮೇ ಕೀರ್ತಿರ್ಲೋಕೇ ಲೋಭಸಮಾಶ್ರಯಾತ್ ॥೧೯॥**

ಒಂದುವೇಳೆ ಈ ತಕ್ಷಕನಿಂದ ನಾನು ಹಣದ ಆಶೆಯಿಂದ ಧನವನ್ನು ತೆಗೆದುಕೊಂಡು ಮನೆಗೆ ಹಿಂತಿರುಗಿ ಹೋದರೆ ಲೋಕದಲ್ಲಿ ನನಗೆ ಪರೋಪಕಾರದ ಯಶಸ್ಸು ಉಂಟಾಗುವುದಿಲ್ಲವು.

**ಜೀವಿತೇಽಥ ನೃಪಶ್ರೇಷ್ಠೇ ಕೀರ್ತಿಃ ಸ್ಯಾದಚಲಾ ಮಮ ।**
**ಧನಪ್ರಾಪ್ತಿಶ್ಚ ಬಹುಧಾ ಭವೇತ್ಪುಣ್ಯಂ ಚ ಜೀವನಾತ್ ॥೨೦॥**

ರಾಜನು ನನ್ನ ಮಂತ್ರಶಕ್ತಿಯಿಂದ ಬದುಕಿದರೆ ನನ್ನ ಕೀರ್ತಿಯು ಸ್ಥಿರವಾಗಿ ನಿಲ್ಲುವುದು, ಅಲ್ಲದೆ ರಾಜನಿಂದ ಬಹಳವಾಗಿ ದ್ರವ್ಯಲಾಭವಾಗುವುದು ಮತ್ತು ರಾಜನನ್ನು ಬದುಕಿಸುವುದರಿಂದ ಪುಣ್ಯಪ್ರಾಪ್ತಿಯೂ ಆಗುವುದು. ಹೀಗೆ ನನಗೆ ಮೂರು ಫಲಗಳು ದೊರೆಯುವುವು.

**ರಕ್ಷಣೀಯಂ ಯಶಃಕಾಮಂ ಧಿಗ್ಧನಂ ಯಶಸಾ ವಿನಾ ।**
**ಸರ್ವಸ್ವಂ ರಘುಣಾ ಪೂರ್ವಂ ದತ್ತಂ ವಿಪ್ರಾಯ ಕೀರ್ತಯೇ ೨೧॥**

ಮನುಷ್ಯನು ಯಾವಾಗಲೂ ತನ್ನ ಕೀರ್ತಿಯನ್ನು ಸ್ಥಿರಗೊಳಿಸಬೇಕು. ಒಳ್ಳೆಯ ಕೀರ್ತಿಯಿಲ್ಲದ ಹಣಕ್ಕೆ ಧಿಕ್ಕಾರವಿರಲಿ! ಪೂರ್ವದಲ್ಲಿ ಶ್ರೀರಘುಮಹಾರಾಯನು ತನ್ನ ಸರ್ವಸ್ವವನ್ನೂ ಕೀರ್ತಿಸಂಪಾದನೆಗೋಸ್ಕರವೇ ಬ್ರಾಹ್ಮಣನಿಗೆ ಕೊಟ್ಟನಲ್ಲವೇ?

**ಹರಿಶ್ಚಂದ್ರೇಣ ಕರ್ಣೇನ ಕೀರ್ತ್ಯರ್ಥಂ ಬಹುವಿಸ್ತರಂ ।**
**ಉಪೇಕ್ಷ್ಯೇಯಂ ಕಥಂ ಭೂಪಂ ದಹ್ಯಮಾನಂ ವಿಷಾಗ್ನಿನಾ ॥೨೨॥**

ಮತ್ತು ಪೂರ್ವದಲ್ಲಿ ಹರಿಶ್ಚಂದ್ರರಾಜನೂ, ಕರ್ಣನೂ ಕೀರ್ತಿಪ್ರಾಪ್ತಿಗೋಸ್ಕರ ಬಹುವಾಗಿ ದಾನಾದಿಗಳನ್ನು ಮಾಡಿದರು. ಅಲ್ಲದೆ, ವಿಷಾಗ್ನಿಯು ದಹಿಸುತ್ತಿರಲು ಸಂಕಟಪಡುತ್ತಿರುವ ರಾಜನನ್ನು ಬದುಕಿಸದೆ ಹೇಗೆತಾನೇ ಉಪೇಕ್ಷೆಮಾಡಲಿ?

**ಜೀವಿತೇಽದ್ಯ ಮಯಾ ರಾಜ್ಞಿ ಸುಖಂ ಸರ್ವಜನಸ್ಯ ಚ ।**
**ಅರಾಜಕೇ ಪ್ರಜಾನಾಶೋ ಭವಿತಾ ನಾತ್ರ ಸಂಶಯಃ ॥೨೩॥**

ಮತ್ತು ರಾಜನನ್ನು ಮಂತ್ರಶಕ್ತಿಯಿಂದ ನಾನು ಬದುಕಿಸಿದರೆ ಅದರಿಂದ, ಎಂದರೆ ರಾಜನು ಬದುಕಿರುವುದರಿಂದ, ಸಮಸ್ತ ಜನಗಳಿಗೂ ಸುಖವುಂಟಾಗುವುದು. ರಾಜನಿಲ್ಲದಿದ್ದರೆ ಪ್ರಜಾಕ್ಷೋಭೆಯು ಆಗುವುದರಲ್ಲಿ ಏನೂ ಸಂಶಯವಿಲ್ಲವು.

**ಪ್ರಜಾನಾಶಸ್ಯ ಪಾಪಂ ಮೇ ಭವಿಷ್ಯತಿ ಮೃತೇ ನೃಪೇ ।**
**ಅಪಕೀರ್ತಿಶ್ಚ ಲೋಕೇಷು ಧನಲೋಭಾದ್ಭವಿಷ್ಯತಿ ॥೨೪॥**

ತಕ್ಷಕನು ಕೊಡುವ ದ್ರವ್ಯದ ಆಶೆಯಿಂದ ರಾಜನನ್ನು ನಾನು ಬದುಕಿಸದೆ, ರಾಜನು ಮೃತನಾದರೆ, ಅರಾಜಕತ್ವದಿಂದುಂಟಾಗುವ ಪ್ರಜಾನಾಶದ ಪಾಪವು ನನಗೆ ಬರುವುದು. ಮತ್ತು ಲೋಕದಲ್ಲಿ ಅಪಕೀರ್ತಿಯು ಸಹಾ ತಪ್ಪದೆ ಉಂಟಾಗುವುದು.

**ಇತಿ ಸಂಚಿಂತ್ಯ ಮನಸಾ ಧ್ಯಾನಂ ಕೃತ್ವಾ ಸ ಕಶ್ಯಪಃ ।**
**ಗತಾಯುಷಂ ಚ ನೃಪತಿಂ ಜ್ಞಾತವಾನ್ ಬುದ್ಧಿಮತ್ತರಃ ॥೨೫॥**

ಕುಶಲಬುದ್ಧಿಯುಳ್ಳ ಆ ಕಶ್ಯಪನು ಹೀಗೆ ಮನಸ್ಸಿನಲ್ಲಿ ಯೋಚಿಸಿ ಸ್ವಲ್ಪ ಹೊತ್ತು ಯೋಗಸಮಾಧಿಯಲ್ಲಿ ಧ್ಯಾನಮಾಡಿ ರಾಜನಿಗೆ ಆಯುಸ್ಸು ತೀರಿರುವುದನ್ನು ಆ ಜ್ಞಾನಶಕ್ತಿಯಿಂದ ತಿಳಿದನು. ಅದರಿಂದ ಆಯುಸ್ಸು ಮುಗಿದಿರುವವನನ್ನು ಬದುಕಿಸಲು ಯತ್ನಿಸುವುದು ವ್ಯರ್ಥವೆಂದು ನಿಶ್ಚಯಮಾಡಿಕೊಂಡನು.

**ಆಸನ್ನಮೃತ್ಯುಂ ರಾಜಾನಂ ಜ್ಞಾತ್ವಾ ಧ್ಯಾನೇನ ಕಶ್ಯಪಃ ।**
**ಗೃಹಂ ಯಯೌ ಸ ಧರ್ಮಾತ್ಮಾ ಧನಮಾದಾಯ ತಕ್ಷಕಾತ್ ॥೨೬॥**

ಈ ರೀತಿಯಲ್ಲಿ ಧ್ಯಾನಶಕ್ತಿಯಿಂದ ರಾಜನು ಮೃತ್ಯುವಿಗೆ ಸನ್ನಿಹಿತನಾಗಿರುವುದನ್ನು ತಿಳಿದು, ಧರ್ಮಜ್ಞನಾದ ಕಶ್ಯಪನು ತಕ್ಷಕನಿಂದ ದ್ರವ್ಯವನ್ನು ತೆಗೆದುಕೊಂಡು, ತನ್ನ ಮನೆಗೆ ಹೋದನು.

**ನಿವರ್ತ್ಯ ಕಶ್ಯಪಂ ಸರ್ಪಃ ಸಪ್ತಮೇ ದಿವಸೇ ನೃಪಂ ।**
**ಹಂತುಕಾಮೋ ಜಗಾಮಾಶು ನಗರಂ ನಾಗಸಾಹ್ವಯಂ ॥೨೭॥**

ಹೀಗೆ ಕಶ್ಯಪನನ್ನು ಹಿಂದಕ್ಕೆ ಕಳುಹಿಸಿದ ಮೇಲೆ, ಆ ಸರ್ಪಶ್ರೇಷ್ಠನಾದ ತಕ್ಷಕನು ರಾಜನಿಗೆ ಶಾಪಪ್ರಾಪ್ತವಾದ ಏಳನೆಯ ದಿವಸದಲ್ಲಿಯೇ ರಾಜನನ್ನು ಕೊಲ್ಲುವುದಕ್ಕಾಗಿ ನಾಗಪವೆಂಬ ಹೆಸರಿನ ಪಟ್ಟಣಕ್ಕೆ ಜಾಗ್ರತೆಯಾಗಿ ಹೋದನು.

**ಶುಶ್ರಾವ ನಗರಸ್ಯಾಂತೇ ಪ್ರಾಸಾದಸ್ಥಂ ಪರೀಕ್ಷಿತಂ ।**
**ಮಣಿಮಂತ್ರೌಷಧೈಃ ಕಾಮಂ ರಕ್ಷ್ಯಮಾಣಮತಂದ್ರಿತಂ ॥೨೮॥**

ಆ ನಗರಸಮೀಪದಲ್ಲಿ ಹೊಸದಾಗಿ ನಿರ್ಮಿಸಿದ್ದ ಅರಮನೆಯಲ್ಲಿದ್ದುಕೊಂಡು ಮಣಿಮಂತ್ರೌಷಧಾದಿಸಾಧನಗಳಿಂದ ಎಡಬಿಡದೆ ರಾಜನು ರಕ್ಷಿತನಾಗಿರುವ ವಿಚಾರವನ್ನು ಕೇಳಿ ತಿಳಿದನು.

**ಚಿಂತಾವಿಷ್ಟಸ್ತದಾ ನಾಗೋ ವಿಪ್ರಶಾಪಭಯಾಕುಲಃ ।**
**ಚಿಂತಯಾಮಾಸ ಯೋಗೇನ ಪ್ರವಿಶೇಯಂ ಗೃಹಂ ಕಥಂ ॥೨೯॥**

ಹೀಗೆ ರಾಜನು ರಕ್ಷಿತನಾಗಿರುವುದನ್ನು ಆ ಸರ್ಪಶ್ರೇಷ್ಠನು ತಿಳಿದು ಒಳಗೆ ಪ್ರವೇಶಿಸಲು ಸಾಧ್ಯವಿಲ್ಲದೆ ಹೀಗೆ ಯೋಚಿಸಿದನು— ನಾನು ಉದ್ದೇಶಿಸಿ ಬಂದ ಕಾರ್ಯವನ್ನು ನೆರವೇರಿಸದೆ ಹಿಂತಿರುಗಿದರೆ, ವಿಧಿನಿಯಮವನ್ನನುಸರಿಸಿರುವ ಶಾಪವು ಇದರಲ್ಲಿ ವ್ಯರ್ಥವಾಗುವುದಾದರೆ, ಆ ಋಷಿಯು ನನ್ನನ್ನೂ ಶಪಿಸಬಹುದು, ಅದರ ಶಕ್ತಿಯಿಂದ ನನಗಾದರೂ ಅಪಾಯಸಂಭವಿಸಬಹುದು ಎಂದು ಆಲೋಚಿಸಿ ಆ ಶಾಪ ಭಯದಿಂದ ಚಿಂತಾಕ್ರಾಂತನಾದನು. ಮತ್ತು ಈ ಗೃಹವನ್ನು ಹೇಗೆ ಪ್ರವೇಶಮಾಡು ವೆನೆಂದು ಉಪಾಯಾಂತರಗಳಿಂದ ಎಂದರೆ ಯೋಗಶಕ್ತಿಯಿಂದ ಆಲೋಚಿಸಿದನು.

**ವಂಚಯಾಮಿ ಕಥಂ ಚೈನಂ ರಾಜಾನಂ ಪಾಪಕಾರಿಣಂ ।**
**ವಿಪ್ರಶಾಪಾದ್ಧತಂ ಮೂಢಂ ವಿಪ್ರಪೀಡಾಕರಂ ಶಠಂ ॥೩೦॥**

ಈ ರಾಜನು, ಯೋಗಸಮಾಧಿಯಲ್ಲಿದ್ದ ಬ್ರಾಹ್ಮಣನ ಕತ್ತಿಗೆ ಹಾವನ್ನು ತಗಲುಹಾಕಿದ ಪಾಪಕೃತ್ಯವನ್ನು ಮಾಡಿದವನು. ಮೂಢಬುದ್ಧಿಯಿಂದ ಬ್ರಾಹ್ಮಣ ನನ್ನು ಹಿಂಸೆಮಾಡಲು ಯತ್ನಿಸಿದ ದುರ್ಜನನು ಇವನು. ಆದಕಾರಣ ಬ್ರಾಹ್ಮಣ ಶಾಪದಿಂದ ಶಿಕ್ಷಿಸಲ್ಪಟ್ಟಿರುವನು. ಹೀಗಿರುವ ಈ ರಾಜನನ್ನು ಯಾವರೀತಿಯಿಂದ ವಂಚಿಸಲಿ ? ಒಳಕ್ಕೆ ಪ್ರವೇಶಿಸುವ ಬಗೆ ಹೇಗೆ ?

**ಪಾಂಡವಾನಾಂ ಕುಲೇ ಜಾತಃ ಕೋಽಪಿ ನೈತಾದೃಶೋ ಭವೇತ್ ।**
**ಶಾಪಸಸ್ಯ ಗಲೇ ಯೇನ ಮೃತಃ ಸರ್ಪೋ ನಿವೇಶಿತಃ ॥೩೧॥**

ಈ ದುಷ್ಟರಾಜನು ತಪಸ್ಸಿನಲ್ಲಿ ಮಗ್ನನಾಗಿದ್ದ ಋಷಿಯ ಕೊರಳಿಗೆ ಸತ್ತ ಹಾವನ್ನು ಹಾಕಿ ನೀಚಕೃತ್ಯವನ್ನು ಮಾಡಿರುವನು. ಈ ವಿಧವಾದ ಪಾಪಕರ್ಮ ವನ್ನು ಪಾಂಡವರ ವಂಶದಲ್ಲಿ ಹುಟ್ಟಿದನನಾರೂ ಮಾಡಿರುವುದಿಲ್ಲ.

**ಕೃತ್ವಾ ವಿಗರ್ಹಿತಂ ಕರ್ಮ ಜಾನನ್ ಕಾಲಗತಿಂ ನೃಪಃ ।**
**ರಕ್ಷಕಾನ್ ಭವನೇ ಕೃತ್ವಾ ಪ್ರಾಸಾದಮುಭಿಗಮ್ಯ ಚ ॥೩೨॥**

**ಮೃತ್ಯುಂ ವಂಚಯತೇ ರಾಜಾ ವರ್ತತೇಽದ್ಯ ನಿರಾಕುಲಃ ।**
**ತಂ ಕಥಂ ಧಕ್ಷಯಿಷ್ಯಾಮಿ ವಿಪ್ರವಾಕ್ಯೇನ ಚೋದಿತಃ ॥೩೩॥**

ಈ ನಿಂದಾಸ್ಪದವಾದ ಕೆಟ್ಟಕೆಲಸವನ್ನು ಮಾಡಿ, ಅದಕ್ಕೆ ತಕ್ಕ ಫಲವಾದ ಮೃತ್ಯುವು ಸನ್ನಿಹಿತವಾಗಿರುವುದನ್ನು ತಿಳಿದೂ ಈ ರಾಜನು ಈ ಪ್ರಾಸಾದವನ್ನು ನಿರ್ಮಿಸಿ ಅದರಲ್ಲಿ ಅಂಗರಕ್ಷಕರನ್ನು ಕಾವಲಿಗಾಗಿ ಇಟ್ಟುಕೊಂಡು ಸಾವಿನ ಆತಂಕವಿಲ್ಲದವನಾಗಿ ಮೃತ್ಯುವನ್ನೂ ಮೋಸಗೊಳಿಸಲು ಪ್ರಯತ್ನಿಸುತ್ತಿರುವನು ! ಬ್ರಾಹ್ಮಣನ ಶಾಪರೂಪವಾದ, ವಿಧಿಯ ನಿಯಮವನ್ನು ಸೂಚಿಸುವ, ವಾಕ್ಯವನ್ನು ಸಾರ್ಥಕವನ್ನಾಗಿ ಮಾಡಿ ನೆರವೇರಿಸಲು ನಾನು ಇವನನ್ನು ಹೇಗೆ ಕಚ್ಚಿ ವಿಷಜ್ವಾಲೆಯಿಂದ ಸುಡುವೆನು ?

**ನ ಜಾನಾತಿ ಚ ಮಂದಾತ್ಮಾ ಮರಣೇ ಹ್ಯನಿವರ್ತನಂ ।**
**ತೇನಾಸೌ ರಕ್ಷಕಾನ್ ಸ್ಥಾಪ್ಯ ಸೌಧಾರೂಢೋಽದ್ಯ ಮೋದತೇ ॥೩೪॥**

ಈ ಮೂಢಬುದ್ಧಿಯುಳ್ಳ ರಾಜನು ಮೃತ್ಯುವು ಸನ್ನಿಹಿತವಾದರೆ ಅದನ್ನು ತಡೆದು ಹಿಂತಿರುಗಿಸುವುದು ಅಸಾಧ್ಯವೆನ್ನುವುದನ್ನು ತಿಳಿಯಲಾರನು. ಆದ್ದರಿಂದ ಇವನು ಈ ಭವನದಲ್ಲಿ ಅಂಗರಕ್ಷಕರನ್ನು ಕಾವಲಿಗೆ ಇರಿಸಿ ನಿಶ್ಚಿಂತೆಯಿಂದ ಆತಂಕವಿಲ್ಲದೆ ಆನಂದಮಗ್ನನಾಗಿರುವನು.

**ಯದಿ ವೈ ವಿಹಿತೋ ಮೃತ್ಯುರ್ದೈವೇನಾಮಿತತೇಜಸಾ ।**
**ಸ ಕಥಂ ಪರಿವರ್ತೇತ ಕೃತ್ಯೈರ್ಯತ್ನೈಸ್ತು ಕೋಟಿಭಿಃ ॥೩೫॥**

ಅಪರಿಮಿತಶಕ್ತಿಯುಳ್ಳ, ಎಂದರೆ ಯಾರಿಂದಲೂ ಉಲ್ಲಂಘಿಸಲು ಶಕ್ಯವಿಲ್ಲದ ವಿಧಿಯ (ಪೂರ್ವಕೃತಕರ್ಮದ) ಆಜ್ಞೆಯಿಂದ ಮೃತ್ಯುವು ಸನ್ನಿಹಿತವಾಗಿರುವಲ್ಲಿ, ಈ ರಾಜನು ಕೋಟಿಗಟ್ಟಲೆ ಪ್ರಯತ್ನಗಳನ್ನು ಮಾಡಿದಾಗ್ಯೂ ಆ ವೃತ್ಯುವನ್ನು ಬದಲಾಯಿಸಿ ಅದರಿಂದ ಹೇಗೆ ತಪ್ಪಿಸಿಕೊಳ್ಳುವನು ?

**ಪಾಂಡವಸ್ಯ ಚ ದಾಯಾದೋ ಜಾನನ್ ಮೃತ್ಯುಗತಂ ನೃಪಃ ।**
**ಜೀವನೇ ಮತಿಮಾಸ್ಥಾಯ ಸ್ಥಿತಃ ಸ್ಥಾನೇ ನಿರಾಕುಲಃ ॥೩೬॥**

ಪಾಂಡವರ ಜ್ಞಾತಿಯಾದ ಈ ರಾಜನು ತನಗೆ ಮೃತ್ಯುವು ಸಮೀಪಗತವಾಗಿರುವುದನ್ನು ತಿಳಿದಿದ್ದಾಗ್ಯೂ ಮೃತ್ಯುವಿನಿಂದ ಪಾರಾಗಿ ಬದುಕಬೇಕೆಂಬ ಆಶೆಯಿಂದ ಈ ಭದ್ರವಾದ ಸ್ಥಾನದಲ್ಲಿ ನಿಶ್ಚಿಂತೆಯಿಂದ ಇರುವನು.

**ದಾನಪುಣ್ಯಾದಿಕಂ ರಾಜಾ ಕರ್ತುಮರ್ಹತಿ ಸರ್ವಥಾ ।**
**ಧರ್ಮೇಣ ಹನ್ಯತೇ ವ್ಯಾಧಿರ್ಯೇನಾಯುಃ ಶಾಶ್ವತಂ ಭವೇತ್ ॥೩೭॥**

ದಾನಧರ್ಮಾದಿಪುಣ್ಯಕಾರ್ಯಗಳನ್ನು ಮಾತ್ರ ರಾಜನು ಮಾಡಬೇಕಾದುದು ಯುಕ್ತವು. ಹೀಗೆ ಧರ್ಮಮಾಡುವುದರಿಂದ ವ್ಯಾಧಿಪರಿಹಾರವಾಗಿ ಆಯುರ್ವೃದ್ಧಿ ಯಾಗುವುದುಂಟು. ಆದರೆ,

**ನೋ ಚೇನ್ಮೃತ್ಯುವಿಧಿಂ ಕೃತ್ವಾ ಸ್ನಾನದಾನಾದಿಕಾಃ ಕ್ರಿಯಾಃ ।**
**ಮರಣಂ ಸ್ವರ್ಗಲೋಕಾಯ ನರಕಾಯಾನ್ಯಥಾ ಭವೇತ್ ॥೩೮॥**

ದೈವದ (ಪಾಪಕರ್ಮದ) ಪ್ರಾಬಲ್ಯದಿಂದ ಹಾಗೆ ಶಾಶ್ವತವಾದ ಆಯುಸ್ಸನ್ನು ಪಡೆಯದಿದ್ದಲ್ಲಿ, ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಸಾಯುವ ಕಾಲದಲ್ಲೂ ಮಾಡ ಬೇಕೆಂದು ಶಾಸ್ತ್ರದಲ್ಲಿ ವಿಧಿಸಿರುವ ದಾನಧರ್ಮಾದಿಸತ್ಕ್ರಿಯೆಗಳನ್ನು ಮಾಡಿ ಮರಣ ವನ್ನು ಹೊಂದಿದಲ್ಲಿ ಸ್ವರ್ಗಲೋಕಪ್ರಾಪ್ತಿಯಾದರೂ ಆಗುವುದು. ಹೀಗೆ ಮಾಡ ದಿದ್ದರೆ ನರಕಗತಿಯೇ ಉಂಟಾಗುವುದು.

**ದ್ವಿಜಪೀಡಾಕೃತಂ ಪಾಪಂ ಪೃಥಗ್ವಾಸ್ಯ ಚ ಭೂಪತೇಃ ।**
**ವಿಪ್ರಶಾಪಸ್ತಥಾ ಘೋರ ಆಸನ್ನೇ ಮರಣೇ ಕಿಲ ॥೩೯॥**

ಬ್ರಾಹ್ಮಣನ ಹಿಂಸೆಯನ್ನು ಮಾಡಿದ ಪಾಪವೊಂದೇ ಈ ರಾಜನಿಗೆ ಮರಣ ವನ್ನುಂಟುಮಾಡಲು ಸಾಕಾದ ಕಾರಣವಾಗಿದೆ. ಸಾಲದುದಕ್ಕೆ ಮಹಾಭಯಂಕರವಾದ ಬ್ರಾಹ್ಮಣಶಾಪವೂ ಸಹ ಸೇರಿರುವುದರಿಂದ ಈ ರಾಜನಿಗೆ ಮರಣವು ನಿಶ್ಚಯವಾಗಿಯೂ ಸನ್ನಿಹಿತವಾಗಿದೆ.

**ನ ಕೋಪಿ ಬ್ರಾಹ್ಮಣಃ ಪಾರ್ಶ್ವೇ ಯ ಏವಂ ಪ್ರತಿಬೋಧಯೇತ್ ।**
**ವೇಧಸಾ ನಿಹಿತೋ ಮೃತ್ಯುರನಿವಾರ್ಯಸ್ತು ಸರ್ವಥಾ ॥೪೦॥**

ಈ ರಾಜನಿಗೆ ಹೀಗೆ ಸರಿಯಾಗಿ ಹೇಳಿ ತಿಳಿವಳಿಕೆಯನ್ನುಂಟುಮಾಡಿ ಜ್ಞಾನೋದಯವಾಗುವಂತೆ ಮಾಡಲು ಒಬ್ಬ ಬ್ರಾಹ್ಮಣನನ್ನೂ ಇವನು ಸಮೀಪದಲ್ಲಿ ಇಟ್ಟುಕೊಂಡಿಲ್ಲ. ಆದುದರಿಂದ ವಿಧಿಯಿಂದ ನಿಯಮಿತವಾದ ಮರಣವನ್ನು ತಪ್ಪಿ ಸಲು ಯಾವ ಪ್ರಕಾರದಿಂದಲೂ ಸಾಧ್ಯವಿಲ್ಲವು.

**ಇತಿ ಸಂಚಿಂತ್ಯ ಸರ್ಪೋಽಸೌ ಸ್ವಾನ್ನಾಗಾನ್ನಿಕಟೇ ಸ್ಥಿತಾನ್ ।**
**ಕೃತ್ವಾ ತಾಪಸವೇಷಾಂಸ್ತಾನ್ ಪ್ರಾಹಿಣೋತ್ಸಭುಜಂಗಮಾನ್ ॥೪೧॥**

ಈ ರೀತಿಯಲ್ಲಿ ಯೋಚಿಸಿ ಆ ಸರ್ಪಶ್ರೇಷ್ಠನು ಸಮೀಪದಲ್ಲಿದ್ದ ತನ್ನ ಪರಿವಾರದ ಸರ್ಪಗಳನ್ನು ತಾಪಸವೇಷಧಾರಿಗಳನ್ನಾಗಿ ಮಾಡಿ ಅವರನ್ನು ರಾಜನ ಸಮೀಪಕ್ಕೆ ಕಳುಹಿಸಿದನು.

**ಫಲಮೂಲಾದಿಕಂ ಗೃಹ್ಯ ರಾಜ್ಞೇ ನಾಗೋಽಥ ತಕ್ಷಕಃ ।**
**ಸ್ವಯಂ ಚ ಕೀಟರೂಪೇಣ ಫಲಮಧ್ಯೇ ಸಸಾರ ಹ ॥೪೨॥**

ಆ ತಾಪಸವೇಷಧಾರಿಗಳಾದ ಸರ್ಪಗಳು ಫಲಮೂಲಾದಿಗಳನ್ನು ತೆಗೆದುಕೊಂಡು ರಾಜದರ್ಶನಾರ್ಥವಾಗಿ ಹೊರಟರು. ಸರ್ಪಶ್ರೇಷ್ಠನಾದ ತಕ್ಷಕನು ಆ ಫಲದ ಮಧ್ಯದಲ್ಲಿ ಒಂದು ಸಣ್ಣ ಕ್ರಿಮಿರೂಪದಿಂದ ಸೇರಿಕೊಂಡಿದ್ದನು.

**ನಿರ್ಗತಾಸ್ತೇ ತದಾ ನಾಗಾಃ ಫಲಾನ್ಯಾದಾಯ ಸತ್ವರಾಃ ।**
**ತೇ ರಾಜಭವನಂ ಪ್ರಾಪ್ಯ ಸ್ಥಿತಾಃ ಪ್ರಾಸಾದಸನ್ನಿಧೌ ॥೪೩॥**

ವಿಪ್ರವೇಷಧಾರಿಗಳಾದ ಆ ಸರ್ಪಗಳು ಫಲಮೂಲಾದಿಗಳನ್ನು ತೆಗೆದುಕೊಂಡು ಅತಿಶೀಘ್ರವಾಗಿ ಹೊರಟು ರಾಜಮಂದಿರಕ್ಕೆ ಬಂದು ಅದರ ಹೊರಭಾಗದಲ್ಲಿ ನಿಂತಿದ್ದರು.

**ರಕ್ಷಕಾಸ್ತಾಪಸಾನ್ ದೃಷ್ಟ್ವಾ ಪಪ್ರಚ್ಛುಸ್ತಚ್ಚಿಕೀರ್ಷಿತಂ ।**
**ಊಚುಸ್ತೇ ಭೂಪತಿಂ ದ್ರಷ್ಟುಂ ಪ್ರಾಪ್ತಾಃಸ್ಮೋಽದ್ಯ ತಪೋವನಾತ್ ॥೪೪॥**

ಆ ರಾಜಮಂದಿರದ ದ್ವಾರಪಾಲಕರು ಈ ತಾಪಸರನ್ನು ನೋಡಿ ಇಲ್ಲಿ ನಿಮ್ಮ ಕೆಲಸವೇನೆಂದು ಕೇಳಿದರು. ರಾಜನನ್ನು ನೋಡಲು ನಾವು ತಪೋವನದಿಂದ ಈಗತಾನೇ ಇಲ್ಲಿಗೆ ಬಂದಿರುತ್ತೇವೆಂದು ಆ ತಾಪಸವೇಷಧಾರಿಗಳು ನುಡಿದರು.

**ಅಭಿಮನ್ಯುಸುತಂ ವೀರಂ ಕುಲಾರ್ಕಂ ಚಾರುದರ್ಶನಂ ।**
**ಪರಿವರ್ಧಯಿತುಂ ಪ್ರಾಪ್ತಾ ಮಂತ್ರೈರಾಥರ್ವಣೈಸ್ತಥಾ ॥೪೫॥**

ಅಭಿಮನ್ಯುಪುತ್ರನಾದ, ಪರಾಕ್ರಮಶಾಲಿಯೂ, ಸೂರ್ಯನಂತೆ ವಂಶವನ್ನು ಬೆಳಗಿಸುವವನೂ, ಸುಂದರಾಕಾರನೂ ಆದ ರಾಜನಿಗೆ ಅಥರ್ವಣವೇದದ ಮಂತ್ರ

ಗಳಿಂದ ಅಭ್ಯುದಯವನ್ನೂ, ಶ್ರೇಯಸ್ಸನ್ನೂ ಉಂಟುಮಾಡಲು ನಾವು ಇಲ್ಲಿಗೆ ಬಂದಿರುವೆವು.

**ನಿವೇದಯಧ್ವಂ ರಾಜಾನಂ ದರ್ಶನಾರ್ಥಾಗತಾನ್ಮುನೀನ್ ।**
**ಕೃತ್ವಾಭಿಷೇಕಾನ್ಯಾಸ್ಯಾಮೋ ದತ್ವಾ ಮಿಷ್ಟಫಲಾನಿ ಚ ॥೪೬॥**

ರಾಜದರ್ಶನಾರ್ಥವಾಗಿ ತಾಪಸರು ಬಂದಿರುವರೆಂದು ರಾಜನಿಗೆ ಅರಿಕೆಮಾಡಿ. ಮಂತ್ರದಿಂದ ಪವಿತ್ರವಾಗಿರುವ ಜಲಾದಿಗಳಿಂದ ಆ ರಾಜನಿಗೆ ಅಭಿಷೇಕಮಾಡಿ ರುಚಿಕರವಾದ ದಿವ್ಯಫಲವನ್ನು ಸಮರ್ಪಿಸಿ ನಾವು ಹೊರಟುಹೋಗುತ್ತೇವೆ.

**ಭಾರತಾನಾಂ ಕುಲೇ ಕ್ವಾಪಿ ನ ದೃಷ್ಟಾ ದ್ವಾರರಕ್ಷಕಾಃ ।**
**ನ ಶ್ರುತಂ ತಾಪಸಾನಾಂ ತು ರಾಜ್ಞೋಽಸಂದರ್ಶನಂ ಕಿಲ ॥೪೭॥**

ಓ ದ್ವಾರಪಾಲಕರೇ, ಭರತವಂಶೋತ್ಪನ್ನರಾದ ರಾಜರನ್ನು ನೋಡಬಯಸು ವವರಿಗೆ ದ್ವಾರಪಾಲಕರಿಂದ ಅಡ್ಡಿಮಾಡಲ್ಪಡುವುದನ್ನು ನಾವು ಯಾವಾಗಲೂ ನೋಡಿಲ್ಲವು. ಆದರಲ್ಲೂ ತಾಪಸೋತ್ತಮರಿಗೆ ರಾಜಸಂದರ್ಶನವು ದುರ್ಲಭವೆಂಬುವು ದನ್ನು ಯಾವಾಗಲೂ ನಾವು ಕೇಳಿಯೂ ಇಲ್ಲವು.

**ಆರೋಹಾಮೋ ವಯಂ ತತ್ರ ಯತ್ರ ರಾಜಾ ಪರೀಕ್ಷಿತಃ ।**
**ಆಶೀರ್ಭಿರ್ವರ್ಧಯಿತ್ವೈನಂ ದತ್ವಾಜ್ಞಾಃ ಪ್ರವ್ರಜಾಮಹೇ ॥೪೮॥**

ಪರೀಕ್ಷಿದ್ರಾಜನು ಇರುವ ಪ್ರದೇಶಕ್ಕೆ ನಾವು ಹತ್ತಿಹೋಗಿ, ಅವನಿಗೆ ಆಶೀ ರ್ವಾದಗಳಿಂದ ಶ್ರೇಯೋಭಿವೃದ್ಧಿಯನ್ನುಂಟುಮಾಡಿ, ಅವನಿಂದ ಬೀಳ್ಕೊಂಡು ಹಿಂತಿರುಗಿ ಹೋಗುವೆವು.

॥ ಸೂತ ಉವಾಚ ॥

**ಇತ್ಯಾಕರ್ಣ್ಯ ವಚಸ್ತೇಷಾಂ ತಾಪಸಾನಾಂ ತು ರಕ್ಷಕಾಃ ।**
**ಪ್ರತ್ಯೂಚುಸ್ತಾನ್ ದ್ವಿಜಾನ್ ಮತ್ವಾ ನಿದೇಶಂ ಭೂಪತೇರ್ಯಥಾ ॥೪೯॥**

ತಪಸ್ವಿಗಳು ಹೇಳಿದ ಈ ಮಾತುಗಳನ್ನು ದ್ವಾರಪಾಲಕರು ಕೇಳಿ ಅವರನ್ನು ಬ್ರಾಹ್ಮಣರೆಂದೇ ನಂಬಿ ಅರಮನೆಯೊಳಕ್ಕೆ ಪ್ರವೇಶಮಾಡುವ ವಿಷಯದಲ್ಲಿ ರಾಜ ನಿಂದ ಮಾಡಲ್ಪಟ್ಟಿರುವ ಆಜ್ಞೆಯನ್ನು ಅವರಿಗೆ ತಿಳಿಸಿದರು.

**ನಾದ್ಯ ವೋ ದರ್ಶನಂ ವಿಪ್ರಾಃ ರಾಜ್ಞಃ ಸ್ಯಾದಿತಿ ನೋ ಮತಿಃ ।**
**ಶ್ವಃ ಸರ್ವತಾಪಸೈರತ್ರ ತ್ವಾಗಂತವ್ಯಂ ನೃಪಾಲಯೇ ॥೫೦॥**

ಎಲೈ ಬ್ರಾಹ್ಮಣರೇ, ರಾಜದರ್ಶನಕ್ಕೆ ಈಗ ಸಮಯವಲ್ಲವೆಂದು ನಮಗೆ ತೋರುತ್ತದೆ. ಆದುದರಿಂದ ಈ ಮಂದಿರಕ್ಕೆ ರಾಜನನ್ನು ನೋಡಲು ನೀವೆಲ್ಲರೂ ನಾಳೆಯ ದಿವಸ ಬನ್ನಿರಿ.

**ಅನಾರೋಹಸ್ತು ಪ್ರಾಸಾದೋ ವಿಪ್ರಾಣಾಂ ಮುನಿಸತ್ತಮಾಃ ।**
**ವಿಪ್ರಶಾಪಭಯಾದ್ರಾಜಾ ವಿಹಿತೋಽಸ್ತಿ ನ ಸಂಶಯಃ ॥೫೧॥**

ಎಲೈ ಮುನಿಶ್ರೇಷ್ಠರೇ, ಉಪ್ಪರಿಗೆಯನ್ನು ಹತ್ತುವುದು ವಿಪ್ರರಾದ ನಿಮಗೆ ಸಾಧ್ಯವಾಗುವುದಿಲ್ಲವು. ಏಕೆಂದರೆ, ಬ್ರಾಹ್ಮಣಶಾಪಭಯದಿಂದ ರಾಜನು ಈ ರೀತಿಯಲ್ಲಿ ಅಪ್ಪಣೆಮಾಡಿರುತ್ತಾನೆ. ಇದರಲ್ಲಿ ಸಂಶಯವಿಲ್ಲವು.

**ತದೋಚುಸ್ತಾನಥೋ ವಿಪ್ರಾಃ ಫಲಮೂಲಜಲಾನಿ ಚ ।**
**ವಿಪ್ರಾಶಿಷಶ್ಚ ರಾಜ್ಞೇಽಥ ಗ್ರಾಹಯಂತು ಸುರಕ್ಷಕಾಃ ॥೫೨॥**

ಇದನ್ನು ಕೇಳಿ ಆ ಬ್ರಾಹ್ಮಣರು, ಓ ಒಳ್ಳೆಯ ಸ್ವಭಾವದ ದ್ವಾರಪಾಲಕರೇ, ಹಾಗಾದರೆ ನಾವು ತಂದಿರುವ ಈ ಫಲಮೂಲಾದಿಗಳನ್ನೂ ನಾವು ಮಾಡುವ ಆಶೀರ್ವಾದಗಳನ್ನೂ ರಾಜನಿಗೆ ನೀವೇ ಹೋಗಿ ನಿವೇದನೆಮಾಡಿ ಸಮರ್ಪಿಸಿರೆಂದು ಹೇಳಿದರು.

**ತೇ ಗತ್ವಾ ನೃಪತಿಂ ಪ್ರೋಚುಸ್ತಾಪಸಾನಾಗತಾನ್ ಜನಾಃ ।**
**ರಾಜೋವಾಚಾನಯಧ್ವಂ ವೈ ಫಲಮೂಲಾದಿಕಂ ಚ ಯತ್ ॥೫೩॥**

**ಪೃಚ್ಛಧ್ವಂ ತಾಪಸಾನ್ ಕಾರ್ಯಂ ಪ್ರಾತರಾಗಮನಂ ಪುನಃ ।**
**ಪ್ರಣಾಮಂ ಕಥಯಧ್ವಂ ಮೇ ನಾದ್ಯ ಸಂದರ್ಶನಂ ಮಮ ॥೫೪॥**

ಆ ದ್ವಾರಪಾಲಕರು ಅದರಂತೆ ರಾಜನ ಸಮೀಪವನ್ನೈದಿ ತಾಪಸರು ಬಂದಿರುವ ವಿಷಯವನ್ನೂ, ಅವರು ಹೇಳಿಕಳುಹಿಸಿದ ವಿವರವನ್ನೂ ಅರಿಕೆಮಾಡಿದರು. ರಾಜನು ಆ ಸೇವಕರಿಗೆ ತಾಪಸರು ತಂದಿದ್ದ ಫಲಮೂಲಾದಿಗಳನ್ನು ತರಹೇಳಿ,

ತಾಪಸರು ಬಂದಿರುವ ಕಾರಣವೇನೆಂದು ವಿಚಾರಿಸಿ, ಪುನಃ ನಾಳೆ ಪ್ರಾತಃಕಾಲ ಬರುವಂತೆಯೂ, ಈಗ ತನ್ನ ದರ್ಶನಕ್ಕೆ ಅವಕಾಶವಿಲ್ಲದಿರುವುದಾಗಿಯೂ, ತನ್ನ ನಮಸ್ಕಾರಗಳನ್ನು ಅವರಿಗೆ ವಿಜ್ಞಾಪಿಸುವಂತೆಯೂ, ಸೇವಕರಿಗೆ ಆಜ್ಞಾಪಿಸಿದನು.

**ತೇ ಗತ್ವಾಽಥ ಸಮಾದಾಯ ಫಲಮೂಲಾದಿಕಂ ಚ ಯತ್ ।**
**ರಾಜ್ಞೇ ಸಮರ್ಪಯಾಮಾಸುರ್ಬಹುಮಾನಪುರಸ್ಸರಂ ॥೫೫॥**

ಆ ಸೇವಕರು ಅನಂತರದಲ್ಲಿ ತಾಪಸರು ತಂದುಕೊಟ್ಟ ಫಲಮೂಲಾದಿಗಳನ್ನು ತಂದು ರಾಜನಿಗೆ ಭಯಭಕ್ತಿಯಿಂದ ಸಮರ್ಪಿಸಿದರು.

**ಗತೇಷು ತೇಷು ನಾಗೇಷು ವಿಪ್ರವೇಷಾವೃತೇಷು ಚ ।**
**ಫಲಾನ್ಯಾದಾಯ ರಾಜಾಸೌ ಸಚಿವಾನಿದಮಬ್ರವೀತ್ ॥೫೬॥**

ಆ ವಿಪ್ರವೇಷಧರರಾದ ಸರ್ಪಶ್ರೇಷ್ಠರು ಹೊರಟುಹೋಗಲಾಗಿ, ರಾಜನು ಆ ಫಲಗಳನ್ನು ಕೈಯ್ಯಲ್ಲಿ ತೆಗೆದುಕೊಂಡು ಮಂತ್ರಿಶ್ರೇಷ್ಠರನ್ನು ಕುರಿತು ಈ ರೀತಿಯಾಗಿ ಹೇಳಿದನು.

**ಸುಹೃದೋ ಭಕ್ಷಯಂತ್ವದ್ಯ ಫಲಾನ್ಯೇತಾನಿ ಸರ್ವಶಃ ।**
**ಅದ್ಮ್ಯಹಂ ಚೈಕಮೇತದ್ವೈ ಫಲಂ ವಿಪ್ರಾರ್ಪಿತಂ ಮಹತ್ ॥೫೭॥**

ಎಲೈ ಮಿತ್ರರೇ, ನೀವೆಲ್ಲರೂ ಈ ಫಲಗಳನ್ನು ಭಕ್ಷಣೆಮಾಡಿ, ನಾನು ಬ್ರಾಹ್ಮಣರು ತಂದೊಪ್ಪಿಸಿದ ಈ ದೊಡ್ಡ ಹಣ್ಣನ್ನು ಒಂದನ್ನು ಮಾತ್ರ ತಿನ್ನುವೆನು.

**ಇತ್ಯುಕ್ತ್ವಾ ತತ್ಫಲಂ ದತ್ವಾ ಸುಹೃದ್ಭ್ಯಶ್ಚೋತ್ತರಾಸುತಃ ।**
**ಕರೇ ಕೃತ್ವಾ ಫಲಂ ಪಕ್ವಂ ದದಾರ ನೃಪತಿಃ ಸ್ವಯಂ ॥೫೮॥**

ಹೀಗೆ ಹೇಳಿ ಆ ಹಣ್ಣುಗಳನ್ನು ಉತ್ತರಾದೇವಿಯ ಮಗನಾದ ಪರೀಕ್ಷಿದ್ರಾಜನು ತನ್ನ ಸ್ನೇಹಿತರಿಗೆ ಕೊಟ್ಟು ಪಕ್ವವಾಗಿರುವ ಒಂದು ಹಣ್ಣನ್ನು ತನ್ನ ಕೈಯ್ಯಲ್ಲಿ ತೆಗೆದುಕೊಂಡು ಅದನ್ನು ಸೀಳಿದನು.

**ವಿದಾರಿತಂ ಫಲಂ ರಾಜ್ಞಾ ತತ್ರ ಕ್ರಿಮಿರಭೂದಣುಃ ।**
**ಸ ಕೃಷ್ಣನಯನಸ್ತಾಮ್ರೋ ದೃಷ್ಟೋ ಭೂಪತಿನಾ ಸ್ವಯಂ ॥೫೯॥**

ಆ ಫಲವನ್ನು ಎತಡಾಗಿ ಸೀಳಿದಮೇಲೆ ಅದರಲ್ಲಿ ಒಂದು ಅಣುಮಾತ್ರವಾದ ಸಣ್ಣ ಕ್ರಿಮಿಯು (ಹುಳುವು) ಇದ್ದು ಅದರ ಕಣ್ಣುಗಳು ಕೆಂಪಗೆ ಭಯಂಕರವಾಗಿರುವುದನ್ನು ರಾಜನೇ ಸ್ವತಃ ನೋಡಿದನು.

**ತಂ ದೃಷ್ಟ್ವಾ ನೃಪತಿಃ ಪ್ರಾಹ ಸಚಿವಾನ್ ವಿಸ್ಮಿತಾನಥ ।**
**ಅಸ್ತಮಭ್ಯೇತಿ ಸವಿತಾ ವಿಷಾದದ್ಯ ನ ಮೇ ಭಯಂ ॥೬೦॥**

ಆ ಕ್ರಿಮಿಯನ್ನು ರಾಜನು ನೋಡಿ ಆಶ್ಚರ್ಯಪಡುತ್ತಿರುವ ಮಂತ್ರಿಶ್ರೇಷ್ಠರನ್ನು ಕುರಿತು ಇಂತೆಂದನು—ಸೂರ್ಯನು ಇನ್ನೇನು ಅಸ್ತಮಾನನಾಗುತ್ತಲಿದ್ದಾನೆ. ಆ ಋಷಿಯು ಕೊಟ್ಟಿದ್ದ ಶಾಪದ ಕಾಲದ ಅವಧಿಯು ಸೂರ್ಯಾಸ್ತಸಮಯಕ್ಕೆ ಕಳೆದುಹೋಗುವುದರಿಂದ ನನಗೆ ಇನ್ನು ತಕ್ಷಕನ ವಿಷದಿಂದ ಭಯವಿಲ್ಲವು.

**ಅಂಗೀಕರೋಮಿ ತಂ ಶಾಪಂ ಕೃಮಿತೋ ಮಾಂ ದಶತ್ವಯಂ ।**
**ಏವಮುಕ್ತ್ವಾ ಸ ರಾಜೇಂದ್ರೋ ಗ್ರೀವಾಯಾಂ ಸಂನ್ಯವೇಶಯತ್ ॥೬೧॥**

ಬ್ರಾಹ್ಮಣಶಾಪಸಾರ್ಥಕ್ಯಕ್ಕೋಸ್ಕರ ಈ ಕೀಟವು ನನ್ನನ್ನು ಕಚ್ಚಲಿ. ಈ ಸಣ್ಣ ಹುಳುವು ಕಚ್ಚಿದರೂ ನನಗೆ ಸಾವು ಬರುವುದಿಲ್ಲವು. ಅದನ್ನೇ ಬ್ರಾಹ್ಮಣನು ಕೊಟ್ಟ ಶಾಪವೆಂದು ಭಾವಿಸಿ ಸ್ವೀಕಾರಮಾಡುತ್ತೇನೆ. ಹೀಗೆಂದು ಹೇಳಿ ರಾಜಶ್ರೇಷ್ಠನು ಆ ಹುಳುವನ್ನು ತನ್ನ ಕತ್ತಿನ ಸಮೀಪದಲ್ಲಿ ಇಟ್ಟನು.

**ಅಸ್ತಂ ಯಾತೇ ದಿನನಾಥೇ ಧೃತಃ ಕಂಠೇಽಥ ಕೀಟಕಃ ।**
**ತಕ್ಷಕಸ್ತು ತದಾ ಜಾತಃ ಕಾಲರೂಪೋ ಭಯಾನಕಃ ॥೬೨॥**

ಸೂರ್ಯನು ಅಸ್ತಂಗತನಾಗುವ ಸಮಯದಲ್ಲಿ ರಾಜನು ಆ ಹುಳುವನ್ನು ಕತ್ತಿನಲ್ಲಿ ಇಟ್ಟಕೂಡಲೇ ಅದು ಮಹಾಭಯಂಕರವಾದ ಕಾಲರೂಪದಂತೆ ಇರುವ ಸರ್ಪರೂಪವನ್ನು ಧರಿಸಿ ತಕ್ಷಕನು ಆಗ ಗೋಚರಿಸಿದನು.

**ರಾಜಾ ಸಂವೇಷ್ಟಿತಸ್ತೇನ ದಷ್ಟಶ್ಚಾಪಿ ಮಹೀಪತಿಃ ।**
**ಮಂತ್ರಿಣೋ ವಿಸ್ಮಯಂ ಪ್ರಾಪ್ತಾ ರುರುದುರ್ಭೃಶದುಃಖಿತಾಃ ॥೬೩॥**

ಆ ಭಯಂಕರವಾದ ಸರ್ಪವು ಆ ರಾಜನನ್ನು ತನ್ನ ಶರೀರದಿಂದ ಬಿಗಿದು ಸುತ್ತಿಕಟ್ಟಿ ವಿಷದಂಷ್ಟ್ರದಿಂದ ಕಚ್ಚಿತು. ಸಮೀಪದಲ್ಲಿದ್ದ ಮಂತ್ರಿಗಳು ಭಯದಿಂದಲೂ ಆಶ್ಚರ್ಯದಿಂದಲೂ ಏನೂ ತೋರದೆ ಬಹಳ ದುಃಖದಿಂದ ರೋದನಮಾಡಿದರು.

**ಘೋರರೂಪಮಹಿಂ ವೀಕ್ಷ್ಯ ದುದ್ರುವುಸ್ತೇ ಭಯಾರ್ದಿತಾಃ ।**
**ಚುಕ್ರುಶೂ ರಕ್ಷಕಾಸ್ಸರ್ವೇ ಹಾಹಾಕಾರೋ ಮಹಾನಭೂತ್ ॥೬೪॥**

ಭಯಂಕರಾಕಾರವುಳ್ಳ ಸರ್ಪವನ್ನು ನೋಡಿ ಆ ಮಂತ್ರಿಗಳು ಭಯಪಟ್ಟು ಓಡಿಹೋದರು. ರಾಜನ ಅಂಗರಕ್ಷಕರೆಲ್ಲರೂ ಭಯದಿಂದ ಗಟ್ಟಿಯಾಗಿ ಕೂಗಿ ಕೊಂಡರು. ಈ ರೀತಿಯಾಗಿ ಅಲ್ಲಿ ಹಾಹಾಕಾರವೂ, ಕೋಲಾಹಲವೂ ಬಹಳವಾಗಿ ಆಯಿತು.

**ವೇಷ್ಟಿತೋ ಭೋಗಿಭೋಗೇನ ವಿನಷ್ಟಬಹುಪೌರುಷಃ ।**
**ನೋವಾಚ ನೃಪತಿಃ ಕಿಂಚಿನ್ನ ಚಚಾಲೋತ್ತರಾಸುತಃ ॥೬೫॥**

ಉತ್ತರೆಯ ಮಗನಾದ ಪರೀಕ್ಷಿದ್ರಾಜನು ಸರ್ಪಶರೀರದಿಂದ ಸಂವೇಷ್ಟಿತನಾಗಿ, ಶಕ್ತಿಸಾಮರ್ಥ್ಯರಹಿತನಾಗಿ ಏನನ್ನೂ ಮಾತನ್ನಾಡಲಾರದವನಾದನು. ಮತ್ತು ಸ್ವಲ್ಪ ಚಲಿಸಲು ಸಹ ಶಕ್ತನಾಗಲಿಲ್ಲ.

**ಉತ್ಥಿತಾಗ್ನಿಶಿಖಾ ಘೋರಾ ವಿಷಜಾ ತಕ್ಷಕಾನನಾತ್ ।**
**ಪ್ರಜಜ್ವಾಲ ನೃಪಂ ತ್ವಾಶು ಗತಪ್ರಾಣಂ ಚಕಾರ ಹ ॥೬೬॥**

ಆಗ ಆ ತಕ್ಷಕನ ಮುಖದಿಂದ ಘೋರವಾದ ವಿಷಾಗ್ನಿಜ್ವಾಲೆಯು ಹೊರ ಹೊರಟು ರಾಜನನ್ನು ಶೀಘ್ರವಾಗಿ ದಹಿಸಿ ಅವನನ್ನು ಪ್ರಾಣಹೋದವನನ್ನಾಗಿ ಮಾಡಿತು.

**ಹತ್ವಾಶು ಜೀವಿತಂ ರಾಜ್ಞಸ್ತಕ್ಷಕೋ ಗಗನೇ ಗತಃ ।**
**ಜಗದ್ದಗ್ಧಂ ತು ಕುರ್ವಾಣಂ ದದೃಶುಸ್ತಂ ಜನಾ ಇಹ ॥೬೭॥**

ಈ ರೀತಿಯಾಗಿ ರಾಜನ ಪ್ರಾಣವನ್ನು ಅಪಹರಿಸಿ ತಕ್ಷಕನು ಗಗನಮಾರ್ಗ ವಾಗಿ ಹೊರಟುಹೋದನು. ತನ್ನ ವಿಷಜ್ವಾಲೆಯಿಂದ ಜಗತ್ತನ್ನು ಸುಡುತ್ತಿರುವಂತೆ ಇರುವ ಆ ತಕ್ಷಕನನ್ನು ಈ ಸಂದರ್ಭದಲ್ಲಿ ಜನರೆಲ್ಲರೂ ಆಕಾಶದಲ್ಲಿ ನೋಡಿದರು.

**ಸ ಪಪಾತ ಗತಪ್ರಾಣೋ ರಾಜಾ ದಗ್ಧ ಇವ ದ್ರುಮಃ ।**
**ಚುಕ್ರುಶುಶ್ಚ ಜನಾಸ್ಸರ್ವೇ ಮೃತಂ ದೃಷ್ಟ್ವಾ ನರಾಧಿಪಂ ॥೬೮॥**

ಆ ರಾಜನು ಅಗ್ನಿಯಿಂದ ದಹಿಸಲ್ಪಟ್ಟ ವೃಕ್ಷದಂತೆ ಭೂಮಿಯಮೇಲೆ ಮೃತನಾಗಿ ಬಿದ್ದನು. ಹೀಗೆ ಮೃತನಾಗಿ ಬಿದ್ದಿರುವ ರಾಜನನ್ನು ನೋಡಿ ಜನರೆಲ್ಲರೂ ಬಹಳವಾಗಿ ರೋದನಮಾಡಿದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಪರೀಕ್ಷಿನ್ಮರಣಂ ನಾಮ ದಶಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ
ಪರೀಕ್ಷಿದ್ರಾಜನ ಮರಣವೃತ್ತಾಂತವನ್ನು ವಿವರಿಸುವ
ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ದ್ವಿತೀಯಸ್ಕಂಧೇ

|| ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ಸೂತ ಉವಾಚ ||

**ಗತಪ್ರಾಣಂ ತು ರಾಜಾನಂ ಬಾಲಂ ಪುತ್ರಂ ಸಮೀಕ್ಷ್ಯ ಚ ।**
**ಚಕ್ರುಶ್ಚ ಮಂತ್ರಿಣಸ್ಸರ್ವೇ ಪರಲೋಕಸ್ಯ ಸತ್ಕ್ರಿಯಾಃ ॥೧॥**

ಸೂತಮುನಿಯು ಹೇಳಿದನು—ರಾಜನು ಈ ರೀತಿಯಲ್ಲಿ ಮೃತನಾಗಿರುವುದನ್ನೂ, ಅವನ ಪುತ್ರನು ಇನ್ನೂ ಚಿಕ್ಕವಯಸ್ಸಿನ ಬಾಲಕನಾಗಿರುವುದನ್ನೂ, ಮಂತ್ರಿಗಳೆಲ್ಲರೂ ನೋಡಿ ಆ ರಾಜನಿಗೆ ಪರಲೋಕಸಂಬಂಧವಾದ ಉತ್ತರಕ್ರಿಯಾದಿ ಸಂಸ್ಕಾರಗಳನ್ನು ನೆರವೇರಿಸಲು ಏರ್ಪಾಡುಗಳನ್ನು ಮಾಡಿದರು.

**ಗಂಗಾತೀರೇ ದಗ್ಧದೇಹಂ ಭಸ್ಮಪ್ರಾಯಂ ಮಹೀಪತಿಂ ।**
**ಅಗರುಭಿಶ್ಚಾಭಿಯುಕ್ತಾಯಾಂ ಚಿತಾಯಾಮಧ್ಯರೋಪಯನ್ ॥೨॥**

ಪವಿತ್ರವಾದ ಗಂಗಾನದೀತೀರದಲ್ಲಿ, ಅಗರು ಚಂದನ ಮುಂತಾದ ಸುಗಂಧ ಯುಕ್ತವಾದ ಕಾಷ್ಠದಿಂದ ಉತ್ತಮವಾದ ಚಿತಿಯ ಮಧ್ಯದಲ್ಲಿ ಸರ್ಪವಿಷಾಗ್ನಿಯಿಂದ ದಗ್ಧವಾಗಿ ಭಸ್ಮಸದೃಶವಾಗಿ ಕಾಣುತ್ತಿದ್ದ ರಾಜನ ಕಳೇಬರವನ್ನು ಇರಿಸಿದರು.

**ದುರ್ಮರಣೇಣ ಮೃತಸ್ಯಾಸ್ಯ ಚಕ್ರುಶ್ಚೈವೌರ್ಧ್ವದೈಹಿಕೀಂ**
**ಕ್ರಿಯಾಂ ಪುರೋಹಿತಾಸ್ತಸ್ಯ ವೇದಮಂತ್ರೈರ್ವಿಧಾನತಃ ॥೩॥**

ಹಾವು ಕಡಿಯುವುದೇ ಮುಂತಾದ ರೀತಿಯಲ್ಲಿ ಸಾವು ಬರುವುದು ಸ್ವಾಭಾವಿಕವಾದುದಲ್ಲವು. ಅದು ಅಪಮೃತ್ಯು ಅಥವಾ ಅಕಾಲಮರಣವಾಗಿದ್ದು ದುರ್ಮರಣದಿಂದ ಮೃತನಾದ ಆ ರಾಜನ ಊರ್ಧ್ವದೇಹಕರ್ಮಗಳನ್ನು, ಎಂದರೆ, ಅಪರ

ಕರ್ಮಗಳನ್ನು, ಜೀವನೂ ಪ್ರಾಣವೂ ಈ ದೇಹವನ್ನು ಬಿಟ್ಟಮೇಲೆ ಈ ದೇಹಕ್ಕೆ ಮಾಡಬೇಕಾದ, ಮತ್ತು ಮುಂದೆ ಲೋಕಾಂತರಗಳಲ್ಲಿ ಜೀವನಿಗೆ ಬರುವ ದೇಹ ಗಳಿಗೂ ತಕ್ಕುದಾದ, ಕರ್ಮಗಳನ್ನು ಪುರೋಹಿತರು ವೇದಮಂತ್ರಗಳಿಂದ ವಿಧಿ ಪೂರ್ವಕವಾಗಿ ಮಾಡಿಸಿದರು.

**ದದುರ್ದಾನಾನಿ ವಿಪ್ರೇಭ್ಯೋ ಗಾಃ ಸುವರ್ಣಂ ಯಥೋಚಿತಂ ।**
**ಅನ್ನಂ ಬಹುವಿಧಂ ತತ್ರ ವಸ್ತ್ರಾಣಿ ವಿವಿಧಾನಿ ಚ ॥೪॥**

ಆ ಕಾಲದಲ್ಲಿ ಬ್ರಾಹ್ಮಣರಿಗೆ ಗೋಹಿರಣ್ಯಾದಿ ದಾನಗಳನ್ನು ಯಥೋಚಿತ ವಾಗಿ ಮಾಡಿಸಿದರು. ಅಲ್ಲದೆ ಬಹುವಿಧವಾದ ಮೃಷ್ಟಾನ್ನದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ, ನಾನಾಬಗೆಯ ವಸ್ತ್ರ ಮುಂತಾದ ವಸ್ತುಗಳನ್ನು ಕೊಟ್ಟು ಸಂತೋಷ ಪಡಿಸಿದರು.

**ಸುಮುಹೂರ್ತೇ ಸುತಂ ಬಾಲಂ ಪ್ರಜಾನಾಂ ಪ್ರೀತಿವರ್ಧನಂ ।**
**ಸಿಂಹಾಸನೇ ಶುಭೇ ತತ್ರ ಮಂತ್ರಿಣಃ ಸನ್ನ್ಯವೇಶಯನ್ ॥೫॥**

ಒಳ್ಳೆಯ ಶುಭಮುಹೂರ್ತದಲ್ಲಿ ಪ್ರಜೆಗಳ ಪ್ರೀತಿಗೆ ಪಾತ್ರನಾದ ಆ ರಾಜ ಕುಮಾರನನ್ನು ಮಂತ್ರಿಗಳು ಮಂಗಳಕರವಾದ ರಾಜ್ಯಪಟ್ಟಾಭಿಷೇಕವನ್ನು ಮಾಡಲು ಸಿಂಹಾಸನದಲ್ಲಿ ಕೂಡಿಸಿದರು.

**ಪೌರಜಾನಪದಾ ಲೋಕಾಶ್ಚಕ್ರುಸ್ತಂ ನೃಪತಿಂ ಶಿಶುಂ ।**
**ಜನಮೇಜಯನಾಮಾನಂ ರಾಜಲಕ್ಷಣಸಂಯುತಂ ॥೬॥**

ಸಮಸ್ತರಾಜಲಕ್ಷಣಸಂಪನ್ನನಾದ ಜನಮೇಜಯನೆಂಬ ಹೆಸರಿನ ಆ ಬಾಲಕ ನನ್ನು ನಾಗರಿಕರೇ ಮೊದಲಾದ ರಾಷ್ಟ್ರದ ಜನಗಳೆಲ್ಲರೂ ಸೇರಿ ರಾಜನನ್ನಾಗಿ ಮಾಡಿದರು.

**ಧಾತ್ರೇಯಿಾ ಶಿಕ್ಷಯಾಮಾಸ ರಾಜಚಿಹ್ನಾನಿ ಸರ್ವಶಃ ।**
**ದಿನೇ ದಿನೇ ವರ್ಧಮಾನಃ ಸ ಬಭೂವ ಮಹಾಮತಿಃ ॥೭॥**

ಉಪಮಾತೆಯೂ, ಉಪಚರಿಸಿ ಸಾಕುವ ತಾಯಿಯೂ, ರಾಜನಾದವನಲ್ಲಿ ಯಾವಾಗಲೂ ಇರಬೇಕಾದ ಒಳ್ಳೆಯ ನಡವಳಿಕೆಗಳನ್ನೂ, ಮಾತುಗಳನ್ನೂ ಕಲಿಸಿ

ದಳು. ಹೀಗೆ ಆ ಜನಮೇಜಯನು ಪ್ರತಿದಿನದಲ್ಲೂ ಬೆಳೆಯುತ್ತಾ ಎಲ್ಲರಿಗಿಂತ ಮಿಗಿಲಾದ ತಿಳಿವಳಿಕೆ ನಡೆವಳಿಕೆಗಳುಳ್ಳವನಾಗುತ್ತಾ ಬಂದನು.

**ಪ್ರಾಪ್ತೇ ಚೈಕಾದಶೇ ವರ್ಷೇ ತಸ್ಮೈ ಕುಲಪುರೋಹಿತಃ ।**
**ಯಥೋಚಿತಾಂ ದದೌ ವಿದ್ಯಾಂ ಜಗ್ರಾಹ ಸಮಯೋಚಿತಾಂ ॥೮॥**

ಆ ಬಾಲಕನಿಗೆ ಹನ್ನೊಂದನೆಯ ವರ್ಷವು ಪ್ರಾರಂಭವಾದಮೇಲೆ ಎಂದರೆ ಕ್ಷತ್ರಿಯರಿಗೆ ಉಕ್ತವಾಗಿರುವ ಕಾಲದಲ್ಲಿ ಉಪನಯನವನ್ನು ಮಾಡಿಸಿ, ರಾಜಪುರೋಹಿತನು, ರಾಜರಿಗೆ ಆವಶ್ಯಕವಾದ ಧನುರ್ವೇದ ನೀತಿಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದ ವಿದ್ಯೆಗಳನ್ನು ಅಧ್ಯಯನಮಾಡಿಸಿದನು. ಆ ಬಾಲಕನು ಸಹ ದೊರೆಗಳಿಗೆ ತಕ್ಕುದಾದ ಆ ವಿದ್ಯೆಗಳನ್ನು ಕಲಿತುಕೊಂಡನು.

**ಧನುರ್ವೇದಂ ಕೃಪಃ ಪೂರ್ಣಂ ದದಾವಸ್ಮೈ ಸುಸಂಸ್ಕೃತಂ ।**
**ಅರ್ಜುನಾಯ ಯಥಾ ದ್ರೋಣಃ ಕರ್ಣಾಯ ಭಾರ್ಗವೋ ಯಥಾ ॥೯॥**

ಅರ್ಜುನನಿಗೆ ದ್ರೋಣಾಚಾರ್ಯನು ಉಪದೇಶಿಸಿದಂತೆಯೂ, ಕರ್ಣನಿಗೆ ಭಾರ್ಗವನು ಎಂದರೆ ಪರಶುರಾಮನು ಹೇಳಿಕೊಟ್ಟಂತೆಯೂ, ಆ ಬಾಲಕನಿಗೆ ಧನುರ್ವೇದಾಭ್ಯಾಸವನ್ನು ಸಂಪೂರ್ಣವಾಗಿಯೂ, ಮುಂದಟ್ಟಾಗುವಂತೆಯೂ ಕೃಪಾಚಾರ್ಯನು ಅಧ್ಯಯನಮಾಡಿಸಿದನು.

**ಸಂಪ್ರಾಪ್ತವಿದ್ಯೋ ಬಲವಾನ್ ಬಭೂವ ದುರತಿಕ್ರಮಃ ।**
**ಧನುರ್ವೇದೇ ತಥಾ ವೇದೇ ಪಾರಗಃ ಪರಮಾರ್ಥವಿತ್ ॥೧೦॥**

ಆ ಬಾಲಕನು ವಿದ್ಯಾಭ್ಯಾಸಮಾಡಿ ಹೆಚ್ಚಾದ ಬಲಪರಾಕ್ರಮಶಾಲಿಯಾಗಿ ಯಾರಿಂದಲೂ ಎದುರಿಸಲ್ಪಡಲಾರದಷ್ಟು ಗಟ್ಟಿಗನಾದನು. ಅಲ್ಲದೆ, ಧನುರ್ವೇದದಲ್ಲಿಯೂ, ಸ್ವಶಾಖೆಯಾದ ವೇದದಲ್ಲಿಯೂ ಪಾರಂಗತನೂ, ಶಾಸ್ತ್ರಗಳಲ್ಲಿ ಹೇಳಿರುವ ಪರಮಾರ್ಥತತ್ತ್ವಗಳನ್ನು ತಿಳಿದವನೂ ಆದನು.

**ಧರ್ಮಶಾಸ್ತ್ರಾರ್ಥಕುಶಲಃ ಸತ್ಯವಾದೀ ಜಿತೇಂದ್ರಿಯಃ ।**
**ಚಕಾರ ರಾಜ್ಯಂ ಧರ್ಮಾತ್ಮಾ ಪುರಾ ಧರ್ಮಸುತೋ ಯಥಾ ॥೧೧॥**

ಧರ್ಮಶಾಸ್ತ್ರದ ಅರ್ಥಗಳನ್ನು ತಿಳಿಯುವುದರಲ್ಲಿ ನಿಪುಣನಾಗಿಯೂ, ಯಾವಾಗಲೂ ಸತ್ಯವನ್ನು ನುಡಿಯುವವನಾಗಿಯೂ, ಇಂದ್ರಿಯನಿಗ್ರಹವುಳ್ಳವನಾಗಿಯೂ

ಇರುತ್ತಾ, ಪೂರ್ವದಲ್ಲಿ ಧರ್ಮರಾಜನು ರಾಜ್ಯವಾಳಿದಂತೆ, ಧರ್ಮಾತ್ಮನೆನಿಸಿ ರಾಜ್ಯವನ್ನು ಪಾಲಿಸುತ್ತಿದ್ದನು.

**ತತಃ ಸುವರ್ಣವರ್ಮಾಖ್ಯೋ ರಾಜಾ ಕಾಶೀಪತಿಃ ಕಿಲ ।**
**ವಪುಷ್ಟಮಾಂ ಶುಭಾಂ ಕನ್ಯಾಂ ದದೌ ಪಾರಿಕ್ಷಿತಾಯ ಚ ॥೧೨॥**

ಅನಂತರದಲ್ಲಿ ಎಂದರೆ ಪ್ರಾಪ್ತವಯಸ್ಕನಾದಮೇಲೆ ಕಾಶೀನಗರಾಧಿಪತಿಯಾದ ಸುವರ್ಣವರ್ಮಾಕ್ಷನೆಂಬ ರಾಜನು ತನ್ನ ಮಗಳಾದ ವಪುಷ್ಟಮಾ ಎಂಬ ಉತ್ತಮವಾದ ಶರೀರವುಳ್ಳ, ಮಂಗಳಕರಳಾದ ಶೋಭನಾಂಗಿಯನ್ನು ಪರೀಕ್ಷಿದ್ರಾಜಕುಮಾರನಾದ ಆ ಜನಮೇಜಯನಿಗೆ ಕೊಟ್ಟು ವಿವಾಹಮಾಡಿದನು.

**ಸ ತಾಂ ಪ್ರಾಪ್ಯಾಸಿತಾಪಾಂಗೀಂ ಮುಮುದೇ ಜನಮೇಜಯಃ ।**
**ಕಾಶೀರಾಜಸುತಾಂ ಕಾಂತಾಂ ಪ್ರಾಪ್ಯ ರಾಜಾ ಯಥಾ ಪುರಾ ॥೧೩॥**

**ವಿಚಿತ್ರವೀರ್ಯೋ ಮುಮುದೇ ಸುಭದ್ರಾಂ ಚ ಯಥಾರ್ಜುನಃ ।**
**ವಿಜಹಾರ ಮಹೀಪಾಲೋ ವನೇಷೂಪವನೇಷು ಚ ॥೧೪॥**

ಆ ಜನಮೇಜಯರಾಜನು ಕಾಶೀರಾಜನ ಮಗಳಾದ ಆ ಕಪ್ಪಾದ ಕುಡಿನೋಟವುಳ್ಳ ಮನೋಹರಾಂಗಿಯನ್ನು ವಿವಾಹಮಾಡಿಕೊಂಡು, ಹಿಂದೆ ವಿಚಿತ್ರವೀರ್ಯನೆಂಬ ರಾಜನು ತನ್ನ ಕಾಂತೆಯನ್ನು ಪಡೆದು ಸುಖಿಸಿದಂತೆಯೂ, ಅರ್ಜುನನು ಸುಭದ್ರೆಯನ್ನು ಹೊಂದಿ ಸಂತೋಷಪಟ್ಟಂತೆಯೂ, ಆ ಮನೋಹರಾಂಗಿಯೊಡನೆ ಕೂಡಿ, ಕಾಡುಗಳಲ್ಲಿಯೂ, ಉದ್ಯಾನವನಗಳಲ್ಲಿಯೂ ವಿಹರಿಸುತ್ತಿದ್ದನು.

**ತಯಾ ಕಮಲಪತ್ರಾಕ್ಷ್ಯಾ ಶಚ್ಯಾ ಶತಕ್ರತುರ್ಯಥಾ ।**
**ಪ್ರಜಾಸ್ತಸ್ಯ ಸುಸಂತುಷ್ಟಾ ಬಭೂವುಃ ಸುಖಲಾಲಿತಾಃ ॥೧೫॥**

ಶಚೀದೇವಿಯಿಂದ ಕೂಡಿ ಇಂದ್ರನು ವಿಹರಿಸುವಂತೆ, ಆ ಕಮಲನೇತ್ರೆಯೊಡಗೂಡಿ ಜನಮೇಜಯನು ವಿಹಾರಮಾಡುತ್ತಿದ್ದನು. ಅವನ ಪ್ರಜೆಗಳು ಕೂಡ ಆದರದಿಂದ ಕೂಡಿದ ಲಾಲನಪಾಲನೆಗಳನ್ನು ಪಡೆದವರಾಗಿ ತುಂಬ ಸುಖವುಳ್ಳವರಾಗಿಯೂ, ಸಂತುಷ್ಟಚಿತ್ತರಾಗಿಯೂ ಇದ್ದರು.

**ಮಂತ್ರಿಣಃ ಕರ್ಮಕುಶಲಾಶ್ಚಕ್ರುಃ ಕಾರ್ಯಾಣಿ ಸರ್ವಶಃ ।**

ಆ ರಾಜನ ಮಂತ್ರಿಗಳು ತಮ್ಮ ತಮ್ಮ ಕಾರ್ಯಗಳನ್ನು ನೆರವೇರಿಸುವುದರಲ್ಲಿ ಚತುರರಾಗಿ ರಾಜಕಾರ್ಯತತ್ಪರರಾಗಿದ್ದರು.

**ಏತಸ್ಮಿನ್ನೇವ ಕಾಲೇ ತು ಮುನಿರುತ್ತಂಕನಾಮಕಃ ॥೧೬॥**

**ತಕ್ಷಕೇಣ ಪರಿಕ್ಲಿಷ್ಟೋ ಹಸ್ತಿನಾಪುರಮುಭ್ಯಗಾತ್ ।**
**ವೈರಸ್ಯಾಪಚಿತಿಂ ಕೋಽಸ್ಯ ಪ್ರಕುರ್ಯಾದಿತಿ ಚಿಂತಯನ್ ॥೧೭॥**

ಹೀಗಿರುವ ಸಮಯದಲ್ಲಿ ತಕ್ಷಕನಿಂದ ಅನೇಕ ಕಷ್ಟಗಳನ್ನು ಅನುಭವಿಸಿದ ಉತ್ತಂಕನೆಂಬ ಮುನಿವರ್ಯನು ಆ ತಕ್ಷಕನಿಗೆ ಯಾವರೀತಿಯಲ್ಲಿ ತಕ್ಕ ಪ್ರತೀಕಾರ ವನ್ನು ಮಾಡಿಸಬೇಕು? ಅದನ್ನು ನಿರ್ವಹಿಸಬಲ್ಲವರು ಯಾರು? ಎಂದು ಯೋಚಿ ಸುತ್ತಾ ರಾಜಧಾನಿಯಾದ ಹಸ್ತಿನಾಪುರಕ್ಕೆ ಬಂದನು.

**ಪರೀಕ್ಷಿತಸುತಂ ಮತ್ವಾ ತಂ ನೃಪಂ ಸಮುಪಾಗತಃ ।**

ಹೀಗೆ ಹಸ್ತಿನಾಪುರಕ್ಕೆ ಬಂದು ಅಲ್ಲಿ ಪರೀಕ್ಷಿತನ ಮಗನು ರಾಜನಾಗಿರುವು ದನ್ನು ತಿಳಿದು ಅವನಿಂದ ತನ್ನ ಕಾರ್ಯವು ನೆರವೇರುವುದೆಂದು ಯೋಚಿಸಿ ಅವನ ಸಮಿಾಪಕ್ಕೆ ಹೋಗಿ ಹೀಗೆ ಹೇಳಿದನು.

**ಕಾರ್ಯಾಕಾರ್ಯಂ ನ ಜಾನಾಸಿ ಸಮಯೇ ನೃಪಸತ್ತಮ ॥೧೮॥**

**ಅಕರ್ತವ್ಯಂ ಕರೋಷ್ಯದ್ಯ ಕರ್ತವ್ಯಂ ನ ಕರೋಷಿ ವೈ ॥**
**ಕಿಂ ತ್ವಾಂ ಸಂಪ್ರಾರ್ಥಯಾಮ್ಯದ್ಯ ಗತಾಮರ್ಷಂ ನಿರುದ್ಯಮಂ ॥೧೯॥**

**ಅವೈರಜ್ಞಮತಂತ್ರಜ್ಞಂ ಬಾಲಚೇಷ್ಟಾಸಮನ್ವಿತಂ ॥**

ಎಲೈ ನೃಪಶ್ರೇಷ್ಠನೇ, ನೀನು ಸಮಯವರಿತು ಕಾರ್ಯಾಕಾರ್ಯವಿವೇಚನೆ ಯನ್ನು ಮಾಡುವುದನ್ನು ತಿಳಿಯದವನಾಗಿರುತ್ತೀಯೆ. ಮಾಡಬಾರದ ಕಾರ್ಯವನ್ನು ಮಾಡುತ್ತೀಯೆ. ಮಾಡಬೇಕಾದ ಕೆಲಸವನ್ನು ಮಾಡುವುದಿಲ್ಲ. ಅಪಕಾರಮಾಡಿದ ವರಿಗೆ ಪ್ರತೀಕಾರಮಾಡಲು ಆಕ್ರೋಶರಹಿತನಾಗಿ ನಿರುದ್ಯೋಗಿಯಾಗಿದ್ದೀಯೆ. ಇಂತಹ ನಿನ್ನಲ್ಲಿ ನಾನು ಏನನ್ನು ಪ್ರಾರ್ಥಿಸಲಿ? ನಿನ್ನ ದ್ವೇಷಿಗಳಲ್ಲಿ ಯಾವರೀತಿ ವರ್ತಿಸಬೇಕೆಂಬುದೂ ನಿನಗೆ ತಿಳಿಯದು. ಸಮಯೋಚಿತವಾದ ಯುಕ್ತಿಗಳನ್ನು

ಹೇಗೆ ಉಪಯೋಗಿಸಬೇಕೆಂಬುದೂ ನಿನಗೆ ತಿಳಿಯದು. ನಿನಗೆ ಇನ್ನೂ ಬಾಲಕರಿಗೆ ಸಹಜವಾದ ಆಟಪಾಟಗಳಲ್ಲಿ ಆಸಕ್ತಿಯುಂಟು. ಹೀಗಿರುವ ನಿನ್ನಲ್ಲಿ ನಾನು ಏನನ್ನು ತಾನೇ ಕೇಳಲಿ ?

|| ಜನಮೇಜಯ ಉವಾಚ ||

**ಕಿಂ ವೈರಂ ನ ಮಯಾ ಜ್ಞಾತಂ ನ ಕಿಂ ಪ್ರತಿಕೃತಂ ಮಯಾ ॥೨೦॥**
**ತದ್ವದ ತ್ವಂ ಮಹಾಭಾಗ ಕರೋಮಿ ಯದನಂತರಂ ॥**

ಜನಮೇಜಯನು ಉತ್ತಂಕಮುನಿಯನ್ನು ಈ ರೀತಿಯಾಗಿ ಪ್ರಶ್ನೆಮಾಡಿದನು—ಎಲೈ ಮಹಿಮಾಶಾಲಿಯೇ, ವೈರಸ್ವಭಾವವು ನನಗೆ ತಿಳಿಯದೆಂದು ಹೇಳಿದೆಯಲ್ಲವೇ ? ಅದು ಹೇಗೆ ? ನನಗೆ ವೈರಿಗಳಾರು ? ಅವರಿಗೆ ನಾನು ಪ್ರತಿಕ್ರಿಯೆಯನ್ನು ಹೇಗೆ ಮಾಡಿಲ್ಲ? ಇದನ್ನು ನನಗೆ ನೀನು ದಯವಿಟ್ಟು ತಿಳಿಸು. ಅನಂತರದಲ್ಲಿ ಮುಂದೆ ಆವಶ್ಯಕವಾಗಿ ಮಾಡಬೇಕಾದುದನ್ನು ಮಾಡುವೆನು.

|| ಉತ್ತಂಕ ಉವಾಚ ||

**ಪಿತಾ ತೇ ನಿಹತೋ ಭೂಪ ತಕ್ಷಕೇಣ ದುರಾತ್ಮನಾ ॥೨೧॥**
**ಮಂತ್ರಿಣಸ್ತ್ವಂ ಸಮಾಹೂಯ ಪೃಚ್ಛಸ್ವ ಪಿತೃನಾಶನಂ ।**

ಉತ್ತಂಕಮುನಿಯು ಹೇಳಿದನು—ಎಲೈ ರಾಜನೇ, ಹೇಳುವೆನು ಕೇಳು. ನಿನ್ನ ತಂದೆಯು ದುಷ್ಟನಾದ ತಕ್ಷಕನೆಂಬ ಹಾವಿನಿಂದ ಕಡಿಯಲ್ಪಟ್ಟವನಾಗಿ ಮೃತನಾದನು. ಈ ವಿಚಾರವನ್ನು ತಿಳಿಯಬೇಕಾದರೆ ನಿನ್ನ ಮಂತ್ರಿಗಳನ್ನು ಕರೆಸಿ ನಿನ್ನ ತಂದೆಯು ಹೇಗೆ ಮೃತನಾದನೆಂದು ಅವರನ್ನು ಕೇಳು.

|| ಸೂತ ಉವಾಚ ||

**ತಚ್ಛ್ರುತ್ವಾ ವಚನಂ ರಾಜಾ ಪಪ್ರಚ್ಛ ಮಂತ್ರಿಸತ್ತಮಾನ್ ॥೨೨॥**
**ಊಚುಸ್ತೇ ದ್ವಿಜಶಾಪೇನ ದಷ್ಟಃ ಸರ್ಪೇಣ ವೈ ಮೃತಃ ।**

ಸೂತನು ಹೇಳಿದನು--ಆ ಉತ್ತಂಕಋಷಿಯ ಮಾತನ್ನು ಕೇಳಿ, ಜನಮೇಜಯರಾಜನು ತನ್ನ ಮಂತ್ರಿವರ್ಯರನ್ನು ಕರೆಯಿಸಿ ಕೇಳಲಾಗಿ ಅವರು, ನಿನ್ನ ತಂದೆಯನ್ನು ಬ್ರಾಹ್ಮಣನ ಶಾಪದಿಂದ ಹಾವು ಕಡಿಯಿತು. ಆದರಿಂದ ಅವನು ಸತ್ತುಹೋದನೆಂದು ಹೇಳಿದರು.

|| ಜನಮೇಜಯ ಉವಾಚ ||

**ಶಾಪೋಽತ್ರ ಕಾರಣಂ ರಾಜ್ಞಃ ಶಪ್ತಸ್ಯ ಮುನಿನಾ ಕಿಲ ॥೨೩॥**
**ತಕ್ಷಕಸ್ಯ ತು ಕೋ ದೋಷೋ ಬ್ರೂಹಿ ಮೇ ಮುನಿಸತ್ತಮ ॥**

ಈ ವಿಷಯವನ್ನು ಕೇಳಿ ತಿಳಿದು ಜನಮೇಜಯನು ಉತ್ತಂಕಮುನಿಯನ್ನು ಕುರಿತು ಪ್ರತ್ಯುತ್ತರವನ್ನು ಹೇಳಿದನು—ಓ ಮುನಿಶ್ರೇಷ್ಠನೇ, ಈ ಸಂದರ್ಭದಲ್ಲಿ ಮುನಿಯ ಶಾಪವು ನನ್ನ ತಂದೆಯ ಸಾವಿಗೆ ಕಾರಣವೇ ಹೊರತು ತಕ್ಷಕನ ದೋಷ ವೇನು ? ಇದನ್ನು ನನಗೆ ವಿವರಿಸಿ ಹೇಳು.

|| ಉತ್ತಂಕ ಉವಾಚ ||

**ತಕ್ಷಕೇಣ ಧನಂ ದತ್ವಾ ಕಶ್ಯಪಃ ಸನ್ನಿವಾರಿತಃ ॥೨೪॥**
**ನ ಸ ಕಿಂ ತಕ್ಷಕೋ ವೈರೀ ಪಿತೃಹಾ ತವ ಭೂಪತೇ ॥**

ಉತ್ತಂಕನು ಪ್ರತ್ಯುತ್ತರವನ್ನು ಹೀಗೆ ಹೇಳಿದನು—ಬ್ರಾಹ್ಮಣನ ಶಾಪದ ಮಹಿಮೆಯಿಂದ ತಕ್ಷಕನು ಕಡಿಯಬೇಕಾದುದೇ ಸರಿ ಎನ್ನಬಹುದಾದರೂ, ಸರ್ಪದ ವಿಷದಿಂದ ಉಂಟಾಗುವ ಮರಣದಿಂದ ನಿನ್ನ ತಂದೆಯನ್ನು ರಕ್ಷಿಸಲು ಹೊರಟು ಬರುತ್ತಿದ್ದ ಕಶ್ಯಪನೆಂಬ ಬ್ರಾಹ್ಮಣನಿಗೆ ಅಡ್ಡಲಾಗಿ ಬಂದು ಆ ತಕ್ಷಕನು ಅವನ ಮಂತ್ರಸಾಮರ್ಥ್ಯವನ್ನು ಪರೀಕ್ಷಿಸಿ ತಿಳಿದು, ದ್ರವ್ಯವನ್ನು ಕೊಟ್ಟು ಅವನನ್ನು ಪ್ರೇರಿಸಿ ಹಿಂದಕ್ಕೆ ಕಳುಹಿಸಿದನು. ಆದುದರಿಂದ ನಿನ್ನ ಪಿತೃವನ್ನು ಸಂಹರಿಸಿದ ವೈರಿಯು ತಕ್ಷಕನೇ ಅಲ್ಲವೇ ?

**ಭಾರ್ಯಾ ರುರೋಃ ಪುರಾ ಭೂಪ ದಷ್ಟಾ ಸರ್ಪೇಣ ಸಾ ಮತಾ ॥೨೫॥**
**ಅವಿವಾಹಿತಾ ತು ಮುನಿನಾ ಜೀವಿತಾ ಚ ಪುನಃ ಪ್ರಿಯಾ ॥**

ಪೂರ್ವದಲ್ಲಿ ರುರುಮುನಿಯ ಭಾರ್ಯೆಯು ವಿವಾಹಾತ್ಪೂರ್ವದಲ್ಲಿ ಸರ್ಪದಿಂದ ದಷ್ಟಳಾಗಿ ಮೃತಳಾದಳು. ರುರುಮುನಿಯು ಪ್ರಾಣಪ್ರಿಯಳಾದ ಆ ಕನ್ಯೆಯನ್ನು ಪುನಃ ಬದುಕಿಸಿ ಅವಳನ್ನು ವಿವಾಹವಾದನು.

**ರುರುಣಾಪಿ ಕೃತಾ ತತ್ರ ಪ್ರತಿಜ್ಞಾ ಚಾತಿದಾರುಣಾ ॥೨೬॥**
**ಯಂ ಯಂ ಸರ್ಪಂ ಪ್ರಪಶ್ಯಾಮಿ ತಂ ತಂ ಹನ್ಯಾಮ್ಯುಧೇನ ವೈ ॥**

ಯಾವ ಯಾವ ಸರ್ಪಗಳನ್ನು ನಾನು ನೋಡುವೆನೋ ಅವುಗಳನ್ನು ಆಯುಧದಿಂದ ತಪ್ಪದೆ ಕೊಲ್ಲುವೆನೆಂದು ಆ ರುರುಮುನಿಯು ಅಲ್ಲಿಯೇ ಅತಿಕಠೋರವಾದ ಪ್ರತಿಜ್ಞೆಯನ್ನು ಮಾಡಿದನು.

**ಏವಂ ಕೃತ್ವಾ ಪ್ರತಿಜ್ಞಾಂ ಸ ಶಸ್ತ್ರಪಾಣೀ ರುರುಸ್ತದಾ ॥೨೭॥**
**ವ್ಯಚರತ್ಪೃಥಿವೀಂ ರಾಜನ್ನಿಘ್ನನ್ ಸರ್ಪಾನ್ ಯತಸ್ತತಃ ॥**

ಈ ರೀತಿಯಲ್ಲಿ ಪ್ರತಿಜ್ಞೆಮಾಡಿ ಆಯುಧಪಾಣಿಯಾಗಿ ಆ ರುರುಮುನಿಯು ಅಲ್ಲಲ್ಲಿ ಗೋಚರವಾಗುವ ಸರ್ಪಗಳನ್ನು ಸಂಹರಿಸುತ್ತಾ ಭೂಮಿಯಲ್ಲಿ ಸಂಚರಿಸುತ್ತಿದ್ದನು.

**ಏಕದಾ ಸ ವನೇ ಘೋರೇ ಡುಂಡುಭಂ ಜರಸಾನ್ವಿತಮ್ ॥೨೮॥**
**ಅಪಶ್ಯದ್ದಂಡಮುದ್ಯಮ್ಯ ಹಂತುಂ ತಂ ಸಮುಪಾಯಯೌ ॥**

ಅವನು ಹೀಗೆ ಸಂಚರಿಸುತ್ತಿರುವಾಗ ಒಂದುಕಾಲದಲ್ಲಿ ಘೋರಾರಣ್ಯದಲ್ಲಿ ಮುದಿಯಾದ ದೊಡ್ಡ ಅಜಗರಸರ್ಪವನ್ನು ನೋಡಿ, ತನ್ನ ಕೈಲಿದ್ದ ಕೋಲಿನಿಂದ ಅದನ್ನು ಕೊಲ್ಲುವುದಕ್ಕೆಂದು ಅದರ ಸಮೀಪಕ್ಕೆ ಬಂದನು.

**ಅಭ್ಯಹನ್ ರುಷಿತೋ ವಿಪ್ರಸ್ತಮುವಾಚಾಥ ಡುಂಡುಭಃ ॥೨೯॥**
**ನಾಪರಾಧ್ನೋಮಿ ತೇ ವಿಪ್ರ ಕಸ್ಮಾನ್ಮಾಮಭಿಹಂಸಿ ವೈ ॥**

ಕೋಪಾವಿಷ್ಟನಾಗಿ ಆ ಬ್ರಾಹ್ಮಣನು ಅದನ್ನು ಕೊಲ್ಲಲುದ್ಯುಕ್ತನಾಗಿ ಹೊಡೆದನು. ಆ ಸರ್ಪವು ಆ ಬ್ರಾಹ್ಮಣನನ್ನು ಕುರಿತು ಎಲೈ ವಿಪ್ರನೇ, ನಾನು ನಿನಗೆ ಯಾವ ಅಪರಾಧವನ್ನೂ ಮಾಡಿರುವುದಿಲ್ಲವು. ಆದುದರಿಂದ ನನ್ನನ್ನು ಏಕೆ ಕೊಲ್ಲುವೆ ? ಎಂದು ಕೇಳಿತು.

॥ ರುರುರುವಾಚ ॥

**ಪ್ರಾಣಪ್ರಿಯಾ ಮೇ ದಯಿತಾ ದಷ್ಟಾ ಸರ್ಪೇಣ ಸಾ ಮೃತಾ ॥೩೦॥**
**ಪ್ರತಿಜ್ಞೇಯಂ ತದಾ ಸರ್ಪ ದುಃಖಿತೇನ ಮಯಾ ಕೃತಾ ॥**

ರುರುಮುನಿಯು ಪ್ರತ್ಯುತ್ತರವನ್ನು ಹೇಳಿದನು—ಎಲೈ ಸರ್ಪವೇ, ಹಿಂದೆ ಪ್ರಾಣಕ್ಕಿಂತಲೂ ಪ್ರೀತಿಪಾತ್ರಳಾದ ನನ್ನ ಕಾಂತೆಯು ಸರ್ಪದಿಂದ ಕಚ್ಚಲ್ಪಟ್ಟು

ಮೃತಳಾದಳು.' ಆಗ ಆ ದುಃಖದಿಂದ ಖಿನ್ನನಾದ ನಾನು ಈ ಪ್ರತಿಜ್ಞೆಯನ್ನು, ಎಂದರೆ ಸರ್ಪವನ್ನು ಎಲ್ಲಿ ಕಂಡರೆ ಅಲ್ಲಿ ಅದನ್ನು ಕೊಲ್ಲುವೆನೆಂಬ ಪ್ರತಿಜ್ಞೆಯನ್ನು, ಮಾಡಿದೆನು.

|| ಡುಂಡುಭ ಉವಾಚ ||

**ನಾಹಂ ದಶಾಮಿ ತೇಽನ್ಯೇ ವೈ ಯೇ ದಶಂತಿ ಭುಜಂಗಮಾಃ ||೩೧||**
**ಶರೀರಸಮಯೋಗೇನ ನ ಮಾಂ ಹಿಂಸಿತುಮರ್ಹಸಿ ||**

ಅಜಗರಸರ್ಪವು ಹೀಗೆ ಹೇಳಿತು—ಎಲೈ ವಿಪ್ರನೇ, ನಾನು ವಿಷದಿಂದ ಕೂಡಿರುವ ಕೋರೆಹಲ್ಲಿನಿಂದ ಕಚ್ಚುವ ಸರ್ಪದ ಜಾತಿಗೆ ಸೇರಿದವನಲ್ಲವು. ನಿನ್ನ ಪ್ರತಿಜ್ಞೆಯು, ವಿಷದಿಂದ ಕೂಡಿ ಕಚ್ಚುವ ಸರ್ಪಗಳಿಗೆ ಅನ್ವಯಿಸುವುದೇ ಹೊರತು, ಸರ್ಪಾಕಾರವಾದ ಶರೀರವು ಇದ್ದಮಾತ್ರದಿಂದ ನನ್ನನ್ನು ಕೊಲ್ಲುವುದು ನಿನಗೆ ಉಚಿತವಲ್ಲವು.

|| ಉತ್ತಂಕ ಉವಾಚ ||

**ಶ್ರುತ್ವಾ ತಾಂ ಮಾನುಷೀಂ ವಾಣೀಂ ಸರ್ಪೇಣೋಕ್ತಾಂ ಮನೋಹರಾಂ ।**
**ರುರುಃ ಪಪ್ರಚ್ಛ ಕೋಽಸಿ ತ್ವಂ ಕಸ್ಮಾಡ್ಡುಂಡುಭತಾಂ ಗತಃ||**

ಉತ್ತಂಕಮುನಿಯು ಮುಂದೆ ಹೇಳಿದನು—ಈ ರೀತಿಯಾಗಿ ಮಾನುಷ ಭಾಷೆಯಿಂದ ಮನೋಹರವಾಗಿ ಮಾತನ್ನಾಡುತ್ತಿರುವ ಸರ್ಪದ ವಾಕ್ಯವನ್ನು ಕೇಳಿ ಆ ರುರುಮುನಿಯು, ಎಲೈ ಸರ್ಪನೇ, ನೀನು ಯಾರು? ನಿನಗೆ ಯಾವಕಾರಣದಿಂದ ಈ ಅಜಗರಸರ್ಪಜನ್ಮವು ಪ್ರಾಪ್ತವಾಯಿತು? ಇದನ್ನು ಹೇಳೆಂದು ಕೇಳಿದನು.

|| ಸರ್ಪ ಉವಾಚ ||

**ಬ್ರಾಹ್ಮಣೋಽಹಂ ಪುರಾ ವಿಪ್ರ ಸಖಾ ಮೇ ಖಗಮಾಭಿಧಃ ||೩೩||**
**ವಿಪ್ರೋ ಧರ್ಮಭೃತಾಂ ಶ್ರೇಷ್ಠಃ ಸತ್ಯವಾದೀ ಜಿತೇಂದ್ರಿಯಃ ||**
**ಸ ಮಯಾ ವಂಚಿತೋ ಮೌರ್ಖ್ಯಾತ್ ಸರ್ಪಂ ಕೃತ್ವಾ ಚ ತಾರ್ಣಕಂ ||೩೪||**

ಸರ್ಪವು ಹೀಗೆ ಹೇಳಿತು—ಎಲೈ ಬ್ರಾಹ್ಮಣನೇ, ಪೂರ್ವಜನ್ಮದಲ್ಲಿ ನಾನು ಒಬ್ಬ ಬ್ರಾಹ್ಮಣನಾಗಿದ್ದೆನು. ನನಗೆ ಖಗಮನೆಂಬ ಹೆಸರುಳ್ಳ ಸ್ನೇಹಿತನಿದ್ದನು. ಅವನು

ಧರ್ಮಾಚರಣೆಯಲ್ಲಿ ನಿರತನಾಗಿಯೂ, ನಿಜವನ್ನು ನುಡಿಯುವವನಾಗಿಯೂ, ಇಂದ್ರಿಯಗಳನ್ನು ಜಯಿಸಿರುವವನಾಗಿಯೂ ಇದ್ದನು. ಹೀಗಿರುವ ಸ್ನೇಹಿತನನ್ನು ಒಂದು ದಿವಸ ನಾನು ದುರ್ಬುದ್ಧಿಯಿಂದ ವಿವೇಕವಿಲ್ಲದೆ, ಹುಡುಗಾಟಕ್ಕಾಗಿ ಹುಲ್ಲಿನಿಂದ ಕೃತಕವಾದ ಸರ್ಪವನ್ನು ರಚಿಸಿ ಅದರಿಂದ ಅವನನ್ನು ಮೋಸಗೊಳಿಸಿ ಹೆದರಿಸಿದನು.

**ಭಯಂ ಚ ಪ್ರಾಪಿತೋಽತ್ಯರ್ಥಮಗ್ನಿಹೋತ್ರಗೃಹೇ ಸ್ಥಿತಃ ।**
**ತೇನ ಭೀತೇನ ಶಪ್ತೋಽಹಂ ವಿಹ್ವಲೇನಾತಿವೇಪಿನಾ ॥೩೫॥**

**ಭವ ಸರ್ಪೋ ಮಂದಬುದ್ಧೇ ಯೇನಾಹಂ ಧರ್ಷಿತಸ್ತ್ವಯಾ ॥**

ಆ ಕೃತಕಸರ್ಪವನ್ನು ನೋಡಿ, ಅಗ್ನಿಹೋತ್ರವನ್ನು ಮಾಡುವ ಮನೆಯಲ್ಲಿದ್ದ ಆ ನನ್ನ ಸ್ನೇಹಿತನು ಅತ್ಯಂತ ಭಯಪಟ್ಟನು. ಹೀಗೆ ಭಯದಿಂದ ಹೆದರಿ ನಡುಗುತ್ತಿರುವ ಆ ದ್ವಿಜನು ನನ್ನನ್ನು ನೋಡಿ, ಎಲೈ ಬುದ್ಧಿಹೀನನೇ, ಈ ರೀತಿಯಾಗಿ ನನ್ನನ್ನು ನೀನು ಮೋಸಗೊಳಿಸಿ ಹೆದರಿಸಿದುದರಿಂದ ನೀನು ಸರ್ಪಾಕಾರವನ್ನು ಹೊಂದು ಎಂದು ಶಪಿಸಿದನು.

**ಮಯಾ ಪ್ರಸಾದಿತೋಽತ್ಯರ್ಥಂ ಸರ್ಪೇಣಾಸೌ ದ್ವಿಜೋತ್ತಮಃ ॥೩೬॥**

**ಮಾಮುವಾಚಾಥ ತತ್ಕ್ರೋಧಾತ್ಕಿಂಚಿಚ್ಛಾಂತಿಮುಪಾಪ್ಯ ಚ ॥**

ಕೂಡಲೇ ಸರ್ಪಾಕಾರವನ್ನು ಹೊಂದಿದ ನಾನು ಅವನನ್ನು ಬಹಳವಾಗಿ ಪ್ರಾರ್ಥಿಸಲಾಗಿ, ಆ ದ್ವಿಜಶ್ರೇಷ್ಠನು, ತನ್ನ ಕೋಪವು ಸ್ವಲ್ಪ ಶಮನವಾಗಲು ನನ್ನನ್ನು ಕುರಿತು ಈ ರೀತಿಯಾಗಿ ಹೇಳಿದನು.

**ರುರುಸ್ತೇ ಮೋಚಿತಾ ಶಾಪಸ್ಯಾಸ್ಯ ಸರ್ಪೋ ಭವಿಷ್ಯತಿ ॥೩೭॥**

**ಪ್ರಮತೇಸ್ತು ಸುತೋ ನೂನಮಿತಿ ಮಾಂ ಸೋಽಬ್ರವೀದ್ವಚಃ ॥**

ಎಲೈ ಸರ್ಪವೇ, ಪ್ರಮತಿ ಋಷಿಯ ಪುತ್ರನಾದ ರುರುಮುನಿಯು ನಿನ್ನನ್ನು ಶಾಪದಿಂದ ಖಂಡಿತವಾಗಿಯೂ ವಿಮೋಚನೆಮಾಡುವನು, ಎಂದು ಆ ದ್ವಿಜನು ನನಗೆ ಹೇಳಿದನು.

**ಸೋಽಹಂ ಸರ್ಪೋ ರುರುಸ್ತ್ವಂ ಚ ಶೃಣು ಮೇ ಪರಮಂ ವಚಃ ॥೩೮॥**

ಆದುದರಿಂದ ನಾನು ಈ ರೀತಿಯಲ್ಲಿ ಶಾಪದಿಂದ ಸರ್ಪಶರೀರವನ್ನು ಹೊಂದಿರುತ್ತೇನೆ. ನೀನೇ ಆ ರುರುಮುನಿಯು. ನಾನು ಹೇಳುವ ನ್ಯಾಯವಾದ ಮಾತನ್ನು ದಯವಿಟ್ಟು ಕೇಳು.

**ಅಹಿಂಸಾ ಪರಮೋ ಧರ್ಮೋ ವಿಪ್ರಾಣಾಂ ನಾತ್ರ ಸಂಶಯಃ ।**
**ದಯಾ ಸರ್ವತ್ರ ಕರ್ತವ್ಯಾ ಬ್ರಾಹ್ಮಣೇನ ವಿಜಾನತಾ ॥೩೯॥**

**ಯಜ್ಞಾದನ್ಯತ್ರ ವಿಪ್ರೇಂದ್ರ ನ ಹಿಂಸಾ ಯಾಜ್ಞಿಕೀ ಮತಾ ।**

ಬ್ರಾಹ್ಮಣರಿಗೆ ಅಹಿಂಸೆಯೇ ಉತ್ತಮವಾದ ಧರ್ಮವು. ಇದರಲ್ಲಿ ಸಂಶಯವಿಲ್ಲವು. ಆದುದರಿಂದ ತಿಳಿವಳಿಕೆಯುಳ್ಳ ಬ್ರಾಹ್ಮಣನು ಎಲ್ಲ ಪ್ರಾಣಿಗಳಲ್ಲೂ ದಯೆಯುಳ್ಳವನಾಗಿರಬೇಕು. ಆದರೂ ಯಜ್ಞಯಾಗಾದಿಗಳಲ್ಲಿ ಮಾತ್ರ ಮಾಡುವ ಹಿಂಸೆಯು ಹಿಂಸೆಯಲ್ಲವು. ಆದುದರಿಂದ ಯಜ್ಞದಲ್ಲಿ ಹೊರತು ಇತರ ಕಾಲದಲ್ಲಿ ಪ್ರಾಣಿಹಿಂಸೆಯನ್ನು ಮಾಡಕೂಡದೆಂದು ಧರ್ಮವನ್ನು ತಿಳಿದವರ ಅಭಿಮತವು.

॥ ಉತ್ತಂಕ ಉವಾಚ ॥

**ಸರ್ಪಯೋನೇರ್ವಿನಿರ್ಮುಕ್ತೋ ಬ್ರಾಹ್ಮಣೋಽಸೌ ರುರುಸ್ತತಃ ॥೪೦॥**
**ಕೃತ್ವಾ ತಸ್ಯ ಚ ಶಾಪಾಂತಂ ಪರಿತ್ಯಕ್ತಂ ಚ ಹಿಂಸನಂ ॥**

ಆ ಉತ್ತಂಕನು ಹೇಳಿದನು. ಆ ಬ್ರಾಹ್ಮಣನು ಸರ್ಪಶರೀರದಿಂದ ವಿಮೋಚನೆಯನ್ನು ಹೊಂದಿದನು. ಈ ರೀತಿ ಇವನ ಶಾಪವಿಮೋಚನೆಯನ್ನು ಮಾಡಿ ಆ ರುರುಮುನಿಯು ಅಲ್ಲಿಂದ ಮುಂದಕ್ಕೆ ಸರ್ಪಹನನರೂಪವಾದ ಹಿಂಸಾಕಾರ್ಯವನ್ನು ಬಿಟ್ಟುಬಿಟ್ಟನು.

**ವಿವಾಹಿತಾ ತೇನ ಬಾಲಾ ಮೃತಾ ಸಂಜೀವಿತಾ ಪುನಃ ॥೪೧॥**
**ಕದನಂ ಸರ್ವಸರ್ಪಾಣಾಂ ಕೃತಂ ವೈರಮನುಸ್ಮರನ್ ॥**

ಹೀಗೆ ಆ ರುರು ಮುನಿಯು ಮೃತಳಾಗಿದ್ದ ಕನ್ಯೆಯನ್ನು ತನ್ನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಕೊಟ್ಟು ಪುನಃ ಅವಳನ್ನು ಬದುಕಿಸಿ ಮದುವೆಯಾದನು. ಈ ರೀತಿಯಲ್ಲಿ ಆ ಮುನಿಯೂ ಕೂಡ ಕೆಡಕನ್ನು ಮಾಡಿದ ಸರ್ಪಗಳ ವಿಚಾರದಲ್ಲಿ ವೈರವನ್ನು ಮನಸ್ಸಿನಲ್ಲಿಟ್ಟುಕೊಂಡು ತಾನು ಕಾಣುವ ಸಮಸ್ತ ಸರ್ಪಗಳನ್ನೂ

ಹೊಡೆದು ಹಿಂಸಿಸುತ್ತಿದ್ದನು. ಹೀಗಿರುವಾಗ ಕ್ಷತ್ರಿಯ ರಾಜನಾದ ನೀನು ಅಪಕಾರ ಮಾಡಿದವರಿಗೂ ಪ್ರತೀಕಾರಮಾಡದೆ ಉದಾಸೀನನಾಗಿರುವುದು ಯುಕ್ತವಲ್ಲವು.

**ತ್ವಂ ತು ವೈರಂ ಸಮುತ್ಸೃಜ್ಯ ವರ್ತಸೇ ಪನ್ನಗೇಷ್ವಥ ॥೪೨॥**
**ವಿಮುಚ್ಯ ಭರತಶ್ರೇಷ್ಠ ಪಿತೃಘಾತಕರೇಷು ಚ**

ಎಲೈ ಭರತಕುಲಲಲಾಮನೇ, ನೀನಾದರೋ ಈ ವಿಧವಾದ ವೈರಸಾಧನೆ ಯನ್ನು, ಹಗೆ ತೀರಿಸುವುದನ್ನು, ಬಿಟ್ಟು ನಿನ್ನ ತಂದೆಯನ್ನು ವಧಿಸಿದ ಸರ್ಪಗಳ ವಿಷಯದಲ್ಲೂ ಕೋಪರಹಿತನಾಗಿ ಇದ್ದೀಯೆ. ಅಲ್ಲದೆ,

**ಅಂತರಿಕ್ಷೇ ಮೃತಸ್ತಾತಃ ಸ್ನಾನದಾನವಿವರ್ಜಿತಃ ॥೪೩॥**
**ತಸ್ಯೋದ್ಧಾರಂ ಚ ರಾಜೇಂದ್ರ ಕುರು ಹತ್ವಾಥ ಪನ್ನಗಾನ್ ॥**

ಎಲೈ ನೃಪೋತ್ತಮನೇ, ನಿನ್ನ ತಂದೆಯು ಮರಣಕಾಲದಲ್ಲಿ ಅಂತರಿಕ್ಷದಲ್ಲಿ ದ್ದುದರಿಂದ, ನಿತ್ಯನೈಮಿತ್ತಿಕಗಳಾದ ಸ್ನಾನಾದಿಗಳಿಗೂ ಅವಕಾಶವಿಲ್ಲದೆ ಮೃತನಾದನು. ಆದುದರಿಂದ ನೀನು ಸರ್ಪಗಳನ್ನು ಸಂಹರಿಸಿ, ನಿನ್ನ ತಂದೆಯ ಉದ್ಧಾರ ವನ್ನು ಎಂದರೆ ಅವನಿಗೆ ಲೋಕಾಂತರದಲ್ಲಿ ದುರ್ಗತಿಯನ್ನು ತಪ್ಪಿಸಿ ಸದ್ಗತಿಯುಂಟಾಗುವಂತೆ ಮಾಡಿ ಸಂತೃಪ್ತಿಯನ್ನುಂಟುಮಾಡು.

**ಪಿತುರ್ವೈರಂ ನ ಜಾನಾತಿ ಜೀವನ್ನೇವ ಮೃತೋ ಹಿ ಸಃ ॥೪೪॥**
**ದುರ್ಗತಿಸ್ತೇ ಪಿತುಸ್ತಾವದ್ಯಾವತ್ತಾನ್ನ ಹನಿಷ್ಯಸಿ ॥**

ತನ್ನ ತಂದೆಯು ಇತರರಲ್ಲಿ ಹೊಂದಿದ್ದ ಸಕಾರಣವಾದ ವೈರವನ್ನೂ, ತನ್ನ ತಂದೆಯಲ್ಲಿ ಇತರರು ಮಾಡಿದ್ದ ವೈರವನ್ನೂ ತಿಳಿಯದವನು ಎಂದರೆ, ತನ್ನ ತಂದೆಗೆ ಅಪಕಾರಮಾಡಿದವನಿಗೆ ಪ್ರತೀಕಾರ ಮಾಡಲು ತಿಳಿಯದವನು, ಜೀವಿಸಿದ್ದರೂ ಮೃತನಂತೆಯೇ ಸರಿ. ಆದುದರಿಂದ ಸಮಸ್ತ ಸರ್ಪಗಳನ್ನೂ ನೀನು ಕೊಲ್ಲುವ ಪರ್ಯಂತವೂ ನಿನ್ನ ತಂದೆಗೆ ದುರ್ಗತಿಯೇ ಉಂಟಾಗಿರುವುದು. ಏಕೆಂದರೆ, ನಿನ್ನ ತಂದೆಗೆ ತನ್ನ ಶತ್ರುವನ್ನು ನಾಶಮಾಡುವವರೆಗೂ ದ್ವೇಷವು ವಾಸನಾರೂಪದಲ್ಲಿರುತ್ತದೆ. ಅದು ಇರುವವರೆಗೂ ಸದ್ಗತಿಯನ್ನೂ, ಸಂತೋಷವನ್ನೂ ಪಡೆಯಲಾಗುವುದಿಲ್ಲವೆಂದು ತಾತ್ಪರ್ಯವು.

**ಅಂಬಾಮುಖಮಿಷಂ ಕೃತ್ವಾ ಕುರು ಯಜ್ಞಂ ನೃಪೋತ್ತಮ ॥೪೫॥**
**ಸರ್ಪಸತ್ರಂ ಮಹಾರಾಜ ಪಿತುರ್ವೈರಮನುಸ್ಮರನ್ ॥**

ಎಲೈ ರಾಜಶ್ರೇಷ್ಠನೇ, ಆದುದರಿಂದ ನೀನು ಅಂಬಾಮುಖ ಅಥವಾ ದೇವೀ ಯಾಗವೆಂದು ಹೇಳಲ್ಪಡುವ ಯಜ್ಞವನ್ನು ಮಾಡು. ಮತ್ತು ನಿನ್ನ ತಂದೆಯ ವೈರವನ್ನು ನೆನಪಿನಲ್ಲಿಟ್ಟುಕೊಂಡು ಆ ಯಾಗಕ್ಕೆ ಅಂಗವಾಗಿ ಸರ್ಪಯಾಗವನ್ನೂ ಮಾಡು.

॥ ಸೂತ ಉವಾಚ ॥

**ಇತಿ ತಸ್ಯ ವಚಃ ಶ್ರುತ್ವಾ ರಾಜಾ ಜನ್ಮೇಜಯಸ್ತದಾ ॥೪೬॥**
**ನೇತ್ರಾಭ್ಯಾಮಶ್ರುಪಾತಂ ಚ ಚಕಾರಾತೀವ ದುಃಖಿತಃ ॥**

ಈ ರೀತಿಯಾಗಿ ಹೇಳಿದ ಆ ಉತ್ತಂಕಋಷಿಯ ವಚನವನ್ನು ಕೇಳಿ ಜನಮೇಜಯರಾಜನು ಆಗ ತನ್ನ ತಂದೆಯ ಅಕಾಲಮರಣಕ್ಕೆ ಕಾರಣವನ್ನು ನೆನಸಿಕೊಂಡು ಅತಿದುಃಖಿತನಾಗಿ ಎರಡು ಕಣ್ಣುಗಳಿಂದಲೂ ಕಂಬನಿಯನ್ನು ಸುರಿಸಿದನು.

**ಧಿಙ್ಮಮಾಸ್ತು ಸುದುರ್ಬುದ್ಧೇರ್ವೃಥಾಮಾನಕರಸ್ಯ ವೈ ॥೪೭॥**
**ಪಿತಾ ಯಸ್ಯ ಗತಿಂ ಘೋರಾಂ ಪ್ರಾಪ್ತಃ ಪನ್ನಗಪೀಡಿತಃ ॥**

ನನ್ನ ತಂದೆಯು ಸರ್ಪದಷ್ಟನಾಗಿ ದುರ್ಮರಣದಿಂದ ಘೋರವಾದ ದುರ್ಗತಿಯನ್ನು ಹೊಂದಿದ್ದರೂ, ನಾನೇ ದೊಡ್ಡದೊರೆ ಎಂದು ವ್ಯರ್ಥವಾದ ಹೆಮ್ಮೆಯಿಂದ ಮೆರೆಯುತ್ತಿರುವ ನನ್ನ ದುರ್ಬುದ್ಧಿಯನ್ನು ಎಷ್ಟು ಧಿಕ್ಕಾರಮಾಡಿದರೂ ಸಾಲದು.

**ಅದ್ಯಾಹಂ ಮಖಮಾರಭ್ಯ ಕರೋಮ್ಯಪಚಿತಿಂ ಪಿತುಃ ॥೪೮॥**
**ಹತ್ವಾ ಸರ್ಪಾನಸಂದಿಗ್ಧೋ ದೀಪ್ಯಮಾನೇ ವಿಭಾವಸೌ ॥**

ಆದುದ್ದರಿಂದ ನಾನು ಈಗಲೇ ತಂದೆಯ ದುರ್ಗತಿಗೆ ಕಾರಣನಾದವನಿಗೆ ಪ್ರತೀಕಾರಮಾಡಲು ಸರ್ಪಯಾಗವನ್ನು ಪ್ರಾರಂಭಿಸಿ ಜಾಜ್ವಲ್ಯಮಾನವಾಗಿ ಉರಿಯುವ ಅಗ್ನಿಯಲ್ಲಿ ಸರ್ಪಗಳನ್ನು ಎಡೆಬಿಡದೆ ಹೋಮಮಾಡಿ ಕೊಂದು ತಂದೆಗೆ ತೃಪ್ತಿಯನ್ನುಂಟುಮಾಡುವೆನು.

**ಆಹೂಯ ಮಂತ್ರಿಣಃ ಸರ್ವಾನ್ ರಾಜಾ ವಚನಮಬ್ರವೀತ್ ॥೪೯॥**

ರಾಜನು ಈ ರೀತಿಯಾಗಿ ನಿಶ್ಚಯಿಸಿ ತನ್ನ ಮಂತ್ರಿಗಳನ್ನೆಲ್ಲರನ್ನೂ ಕರೆದು ಈ ಪ್ರಕಾರವಾಗಿ ಹೇಳಿದನು.

**ಕುರ್ವಂತು ಯಜ್ಞಸಂಭಾರಂ ಯಥಾರ್ಹಂ ಮಂತ್ರಿಸತ್ತಮಾಃ ।**
**ಗಂಗಾತೀರೇ ಶುಭಾಂ ಭೂಮಿಂ ಮಾಪಯಿತ್ವಾ ದ್ವಿಜೋತ್ತಮೈಃ ॥೫೦॥**

ಎಲೈ ಮಂತ್ರಿಶ್ರೇಷ್ಠರೇ, ಗಂಗಾನದಿಯ ದಡದಲ್ಲಿ, ಶುದ್ಧವಾದ ಪ್ರದೇಶದಲ್ಲಿ, ವಿದ್ಯೆಯಿಂದ ಮೇಲಾದ ಬ್ರಾಹ್ಮಣರಿಂದ ಸಹಾಯಸಲಹೆಗಳನ್ನು ಪಡೆದು, ಯಜ್ಞ ಶಾಲೆಗೆ ತಕ್ಕಷ್ಟು ವಿಸ್ತಾರವಾದ ಶುದ್ಧವಾದ ಯಜ್ಞಭೂಮಿಯನ್ನು ಅಳತೆಮಾಡಿಸಿ ಗೊತ್ತುಮಾಡಿರಿ. ಮತ್ತು ಯಜ್ಞಕ್ಕೆ ಬೇಕಾಗುವ ಎಲ್ಲ ಸಾಮಗ್ರಿಗಳನ್ನೂ ತಕ್ಕಂತೆ ಸಾಕಾಗುವಷ್ಟು ಸಿದ್ಧಪಡಿಸಿರಿ.

**ಕುರ್ವಂತು ಮಂಡಪಂ ಸ್ವಸ್ಥಾಃ ಶತಸ್ತಂಭಂ ಮನೋಹರಂ ।**
**ವೇದೀ ಯಜ್ಞಸ್ಯ ಕರ್ತವ್ಯಾ ಮಮಾದ್ಯ ಸಚಿವಾಃ ಖಲು ॥೫೧॥**

ಎಲೈ ಮಂತ್ರಿವರ್ಯರೇ, ನೀವು ಈಗಲೇ ಅಂಥ ಯಜ್ಞಶಾಲೆಯ ನಿವೇಶನದಲ್ಲಿ ನೂರು ಸ್ತಂಭಗಳಿಂದ ಶೋಭಿಸುವ ಯಾಗಮಂಟಪವನ್ನು ನಿರ್ಮಿಸಿ, ಅದರಲ್ಲಿ ಯಜ್ಞವೇದಿಯನ್ನೂ ರಚಿಸಲು ಏರ್ಪಡಿಸಿರಿ.

**ತದಂಗತ್ವೇ ವಿಧೇಯೋ ವೈ ಸರ್ಪಸತ್ರಃ ಸುವಿಸ್ತರಃ ।**
**ತಕ್ಷಕಸ್ತು ಪಶುಸ್ತತ್ರ ಹೋತೋತ್ತಂಕೋ ಮಹಾಮುನಿಃ ॥೫೨॥**

ಆ ಯಾಗಕ್ಕೆ ಅಂಗವಾಗಿ ಬಹು ವಿವರಗಳಿಂದ ದೊಡ್ಡದಾದ ಸರ್ಪಸತ್ರವೆಂಬ ಯಾಗವನ್ನು ನೆರವೇರಿಸಬೇಕಾಗಿದೆ. ಅದಕ್ಕೆ ತಕ್ಕ ಅಗ್ನಿಕುಂಡವೂ ನಿರ್ಮಿತವಾಗಲಿ. ಈ ಸರ್ಪಯಜ್ಞದಲ್ಲಿ ಪಿತೃಘಾತಿಯಾದ ನನ್ನ ತಂದೆಯನ್ನು ಕೊಂದ ತಕ್ಷಕನೇ ಪಶುವು. ಇಲ್ಲಿ ಶೋಭಿಸುವ ಉತ್ತಂಕಮಹಾಮುನಿಯೇ ಹೋತೃವು.

**ಶೀಘ್ರಮಾಹೂಯತಾಂ ವಿಪ್ರಾಃ ಸರ್ವಜ್ಞಾ ವೇದಪಾರಗಾಃ ।**

ನೀವು ಶೀಘ್ರವಾಗಿ ಯಜ್ಞಗಳ ಪ್ರಯೋಗ, ವಿಧಾನ, ಮುಂತಾದುವನ್ನೆಲ್ಲ ವನ್ನೂ ತಿಳಿದವರಾಗಿಯೂ, ವೇದಾಧ್ಯಯನಪಾರಂಗತರಾಗಿಯೂ ಇರುವ ಬ್ರಾಹ್ಮಣ ರನ್ನು ಕರೆಯಿಸಿ ಬರಮಾಡಿಕೊಳ್ಳಿರಿ.

|| ಸೂತ ಉವಾಚ ||

**ಮಂತ್ರಿಣಸ್ತು ತದಾ ಚಕ್ರುರ್ಭೂಪವಾಕ್ಯೈರ್ವಿಚಕ್ಷಣಾಃ ॥೫೩॥**
**ಯಜ್ಞಸ್ಯ ಸರ್ವಸಂಭಾರಂ ವೇದೀಂ ಯಜ್ಞಸ್ಯ ವಿಸ್ತೃತಾಂ ॥**

ಸೂತಮುನಿಯು ಹೇಳಿದನು—ರಾಜನ ಅಪ್ಪಣೆಯಿಂದ ಆಜ್ಞಪ್ತರಾಗಿ ಕುಶಲರಾದ ಆ ಮಂತ್ರಿಗಳು ವಿಶಾಲವಾದ ಯಜ್ಞವೇದಿಯನ್ನು ನಿರ್ಮಿಸಿ ಯಜ್ಞಸಂಭಾರಗಳನ್ನು ಅಣಿಮಾಡಿದರು. ಯಾಗಶಾಲೆಯ ಮಧ್ಯದಲ್ಲಿ ಅಗ್ನಿಗಳನ್ನು ಸ್ಥಾಪಿಸಲು ರಚಿಸಿರುವ ಎತ್ತರವಾದ ಜಗುಲಿಯಂತಿರುವ ಪ್ರದೇಶಕ್ಕೆ ವೇದೀ ಎಂದು ಹೆಸರು.

**ಹವನೇ ವರ್ತಮಾನೇ ತು ಸರ್ಪಾಣಾಂ ತಕ್ಷಕೋ ಗತಃ ॥೫೪॥**
**ಇಂದ್ರಂ ಪ್ರತಿ ಭಯಾರ್ತೋಽಹಂ ತ್ರಾಹಿ ಮಾಮಿತಿ ಚಾಬ್ರವೀತ್ ॥**

ಅನಂತರದಲ್ಲಿ ಆ ಯಜ್ಞವೇದಿಯಲ್ಲಿ ಸರ್ಪಯಾಗವು ಪ್ರಾರಂಭವಾಗಿ ಸರ್ಪಗಳ ಹೋಮವು ನಡೆಯುತ್ತಿರುವಲ್ಲಿ, ತಕ್ಷಕನು ಭಯಪಟ್ಟು ಇಂದ್ರನ ಸಮೀಪಕ್ಕೆ ಹೋಗಿ ಹೆದರಿಕೆಯಿಂದ ಸಂಕಟಪಡುತ್ತಿರುವ ನನ್ನನ್ನು ಕಾಪಾಡೆಂದು ಇಂದ್ರನನ್ನು ಬೇಡಿಕೊಂಡನು.

**ಭಯಭೀತಂ ಸಮಾಶ್ವಾಸ್ಯ ಸ್ವಾಸನೇ ಸಂನಿವೇಶ್ಯ ಚ ॥೫೫॥**
**ದದಾವಭಯಮತ್ಯರ್ಥಂ ನಿರ್ಭಯೋ ಭವ ಪನ್ನಗ ॥**

ಆಗ ಇಂದ್ರನು ಭಯದಿಂದ ಹೆದರಿದ ತಕ್ಷಕನನ್ನು ಸಮಾಧಾನಪಡಿಸಿ ತನ್ನ ಆಸನದಲ್ಲಿ ಕೂಡಿಸಿಕೊಂಡು, ಎಲೈ ಸರ್ಪಶ್ರೇಷ್ಠನೇ, ಭಯವನ್ನು ಬಿಟ್ಟು ಚೆನ್ನಾಗಿ ಧೈರ್ಯವಾಗಿರೆಂದು ಅವನಿಗೆ ಅಭಯಪ್ರದಾನವನ್ನು ಮಾಡಿದನು.

**ತಮಿಂದ್ರಶರಣಂ ಜ್ಞಾತ್ವಾ ಮುನಿರ್ದತ್ತಾಭಯಂ ತಥಾ ॥೫೬॥**
**ಉತ್ತಂಕೋಽಹ್ವಯದುದ್ವಿಗ್ನಃ ಸೇಂದ್ರಂ ಕೃತ್ವಾ ನಿಮಂತ್ರಣಂ ॥**

ತಕ್ಷಕನು ಇಂದ್ರನ ಮರೆಹೊಕ್ಕಿದ್ದುದನ್ನೂ, ಇಂದ್ರನು ತಕ್ಷಕನಿಗೆ ಅಭಯದಾನಮಾಡಿದ್ದನ್ನೂ ಹೋತೃವಾದ ಉತ್ತಂಕಮುನಿಯು ಜ್ಞಾನದೃಷ್ಟಿಯಿಂದ ತಿಳಿದು ಮನಸ್ಸಿನಲ್ಲಿ ಕಳವಳಯುಕ್ತನಾಗಿ ಚಿಂತಿಸಿ, ಆ ತಕ್ಷಕನನ್ನು ಇಂದ್ರಸಹಿತವಾಗಿ ಹೋಮಕುಂಡದಲ್ಲಿ ಬಂದು ಬೀಳುವಂತೆ "ಸಹೇಂದ್ರಾಯ ತಕ್ಷಕಾಯ ಬ್ರೂಹಿ" ಎಂಬ

ಪುರೋನುವಾಕದ ಋಕ್ಕಿನಿಂದ ಆವಾಹನೆಮಾಡಿ ಕರೆದನು. ಮಂತ್ರಬಲದ ಮಹಿಮೆಯಿಂದ ತಕ್ಷಕನೊಡನೆ ಇಂದ್ರನೂ ಹೋಮಕುಂಡಕ್ಕೆ ಬೀಳಲು ಹೊರಡಬೇಕಾಗಿ ಬಂದಿತು.

**ಸ ಸ್ಮೃತಸ್ತದಾ ತಕ್ಷಕೇನ ಯಾಯಾವರಕುಲೋದ್ಭವಃ ॥೫೭॥**

**ಆಸ್ತಿಕೋ ನಾಮ ಧರ್ಮಾತ್ಮಾ ಜರತ್ಕಾರುಸುತೋ ಮುನಿಃ ॥**

ಆಗ ಹೋತೃವಾದ ಉತ್ತಂಕಋಷಿಯ ಮಂತ್ರಬಲವನ್ನು ತಿಳಿದ ತಕ್ಷಕನು ಯಾಯಾವರ ಎಂಬ ಹೆಸರಿನ ಶ್ರೇಷ್ಠಕುಲದಲ್ಲಿ ಹುಟ್ಟಿದವನಾದ, ಜರತ್ಕಾರು ಎಂಬ ಮುನಿಯ ಮಗನಾದ, ಧರ್ಮಾತ್ಮನಾದ ಆಸ್ತಿಕನೆಂಬ ಋಷಿಯನ್ನು ರಕ್ಷಣೆಗಾಗಿ ಮನಸ್ಸಿನಲ್ಲಿ ಸ್ಮರಿಸಿದನು.

**ತತ್ರಾಗತ್ಯ ಮುನೇರ್ಬಾಲಸ್ತುಷ್ಟಾವ ಜನಮೇಜಯಂ ॥೫೮॥**

ಮುನಿಪುತ್ರನಾದ ಆಸ್ತಿಕನೆಂಬ ಬಾಲಕನು ಯಜ್ಞಮಂಟಪಕ್ಕೆ ಬಂದು ಜನಮೇಜಯರಾಜನನ್ನು ತಕ್ಕರೀತಿಯಲ್ಲಿ ಶ್ಲಾಘಿಸಿದನು.

**ರಾಜಾ ತಮರ್ಚಯಾಮಾಸ ದೃಷ್ಟ್ವಾ ಬಾಲಂ ಸುಪಂಡಿತಂ ।**

**ಅರ್ಚಯಿತ್ವಾ ನೃಪಸ್ತಂ ತು ಛಂದಯಾಮಾಸ ವಾಂಛಿತೈಃ ॥೫೯॥**

ಜನಮೇಜಯರಾಜನು, ಬಾಲಕನಾಗಿದ್ದರೂ ಒಳ್ಳೆಯ ವಿದ್ವಾಂಸನಾಗಿದ್ದ ಆ ಆಸ್ತಿಕಮುನಿಯನ್ನು ಕಂಡು ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಗೌರವಿಸಿದನು. ಅಲ್ಲದೆ ಅವನಿಗೆ ಬೇಕಾದ ವರವನ್ನೂ ಕೊಡುವುದಾಗಿ ತಿಳಿಸಿದನು.

**ಸ ತು ವವ್ರೇ ಮಹಾಭಾಗ ಯಜ್ಞೋಽಯಂ ವಿರಮತ್ವಿತಿ ।**

**ಸತ್ಯಬದ್ಧೋ ನೃಪಸ್ತೇನ ಪ್ರಾರ್ಥಿತಶ್ಚ ಪುನಸ್ತಥಾ ॥೬೦॥**

**ಹೋಮಂ ನಿವರ್ತಯಾಮಾಸ ಸರ್ಪಾಣಾಂ ಮುನಿವಾಕ್ಯತಃ ।**

**ಭಾರತಂ ಶ್ರಾವಯಾಮಾಸ ವೈಶಂಪಾಯನವಿಸ್ತರಾತ್ ॥೬೧॥**

ಆ ಆಸ್ತಿಕಮುನಿಯು ಜನಮೇಜಯರಾಜನಿಂದ ಪುನಃ ಪುನಃ ಪ್ರಾರ್ಥಿತನಾಗಿ ಆ ರಾಜನನ್ನು ಕುರಿತು, ಎಲೈ ತುಂಬ ಪುಣ್ಯಶಾಲಿಯಾದ ಮಹಾಪುರುಷನೇ, ನೀನು ಈ ಸರ್ಪಯಜ್ಞವನ್ನು ಮುಂದಕ್ಕೆ ನಡೆಯಿಸದೆ ಇಲ್ಲಿಗೇ ನಿಲ್ಲಿಸು. ಇದೇ

ನಾನು ಕೇಳುವ ವರವೆಂದು ಹೇಳಿದನು. ರಾಜನು ಸಹ ಕೇಳಿದ ವರವನ್ನು ಕೊಡುವೆನೆಂದು ಮಾಡಿದ್ದ ವಾಗ್ದಾನವನ್ನು ಸತ್ಯವನ್ನಾಗಿ ಮಾಡಲು ಬದ್ಧನಾಗಿ, ಆ ಮುನಿಯ ಕೋರಿಕೆಯಂತೆ ಸರ್ಪಯಾಗವನ್ನು ನಿಲ್ಲಿಸಿದನು. ಮತ್ತು ಆಮೇಲೆ ಪುರಾಣಾದಿಗಳನ್ನು ಹೇಳುವುದರಲ್ಲಿ ಗಟ್ಟಿಗನೆಂದು ಪ್ರಸಿದ್ಧನಾದ, ವ್ಯಾಸಮುನಿಯ ಶಿಷ್ಯನೂ ಆದ, ವೈಶಂಪಾಯನಮುನಿಯು ಮಹಾಭಾರತವನ್ನು ವಿಸ್ತಾರವಾಗಿ ಹೇಳಿ ಆ ಜನಮೇಜಯರಾಜ ಮುಂತಾದವರಿಗೆ ಶ್ರವಣಮಾಡಿಸಿದನು.

**ಶ್ರುತ್ವಾಪಿ ನೃಪತಿಃ ಕಾಮಂ ನ ಶಾಂತಿಮಭಿಜಗ್ಮಿವಾನ್ ।**
**ವ್ಯಾಸಂ ಪಪ್ರಚ್ಛ ಭೂಪಾಲೋ ಮಮ ಶಾಂತಿಃ ಕಥಂ ಭವೇತ್ ॥೬೨॥**

ಮಹಾಭಾರತವನ್ನು ಚನ್ನಾಗಿ ಶ್ರವಣಮಾಡಿದ್ದರಿಂದಲೂ ಆ ರಾಜನಿಗೆ ಮನಃಶಾಂತಿಯುಂಟಾಗಲಿಲ್ಲವು. ಆದುದರಿಂದ ಆ ರಾಜನು ವ್ಯಾಸಮಹರ್ಷಿಯನ್ನು ನೋಡಿ ತನಗೆ ಮನಃಶಾಂತಿಯು ಹೇಗೆ ಉಂಟಾಗುವುದೆಂದು ಅವನನ್ನು ಕೇಳಿದನು.

**ಮನೋಽತಿದಹ್ಯತೇ ಕಾಮಂ ಕಿಂ ಕರೋಮಿ ವದಸ್ವ ಮೇ ।**
**ಪಿತಾ ಮೇ ದುರ್ಭಗಸ್ಯೈವಂ ಮೃತಃ ಪಾರ್ಥಸುತಾತ್ಮಜಃ ॥೬೩॥**

ಅರ್ಜುನನ ಮಗನ ಮಗನಾದ, ನನ್ನ ತಂದೆಯೂ ಆದ ಪರೀಕ್ಷಿದ್ರಾಜನು ದುರ್ಮರಣದಿಂದ ಮೃತನಾಗಿ ದುರ್ಗತಿಯನ್ನು ಹೊಂದಿರುವುದರಿಂದ ನನ್ನ ಮನಸ್ಸು ಶಾಂತಿಯಿಲ್ಲದೆ ಪರಿತಪಿಸುತ್ತಿದೆ. ಆದುದರಿಂದ ನಾನು ಏನನ್ನು ಮಾಡಬೇಕೆಂಬುದನ್ನು ನನಗೆ ದಯವಿಟ್ಟು ಹೇಳು.

**ಕ್ಷತ್ರಿಯಾಣಾಂ ಮಹಾಭಾಗ ಸಂಗ್ರಾಮೇ ಮರಣಂ ವರಂ ।**
**ರಣೇ ವಾ ಮರಣಂ ವ್ಯಾಸ ಗೃಹೇ ವಾ ವಿಧಿಪೂರ್ವಕಂ ॥೬೪॥**

ಎಲೈ ಮಹಾನುಭಾವನೇ, ಕ್ಷತ್ರಿಯರಿಗೆ ಕಾಳಗದಲ್ಲಾಗಲೀ, ಯುದ್ಧದಲ್ಲಾಗಲೀ ಮರಣವುಂಟಾದರೆ, ಅಥವಾ ಸ್ವಗೃಹದಲ್ಲಿ ವಿಧ್ಯುಕ್ತವಾದ ಅಂತ್ಯಕರ್ಮಗಳ ಆಚರಣೆಯನ್ನು ನೆರವೇರಿಸಿದ ಅನಂತರದಲ್ಲಿ ಸ್ವಾಭಾವಿಕವಾಗಿ ಮರಣಪ್ರಾಪ್ತವಾದರೆ, ಅದೇ ಉತ್ತಮ ಮರಣವು ಎನಿಸುವುದು.

**ಮರಣಂ ನ ಪಿತುರ್ಮೇಽಭೂದಂತರಿಕ್ಷೇ ಮೃತೋಽವಶಃ ।**
**ಶಾಂತ್ಯುಪಾಯಂ ವದಸ್ವಾತ್ರ ತ್ವಂ ಚ ಸತ್ಯವತೀಸುತ ॥೬೫॥**

**ಯಥಾ ಸ್ವರ್ಗಂ ವ್ರಜೇದಾಶು ಪಿತಾ ಮೇ ದುರ್ಗತಿಂ ಗತಃ ॥**

ಮೇಲೆ ಹೇಳಿದ ಯಾವವಿಧವಾದ ಮರಣವೂ ನನ್ನ ತಂದೆಗೆ ಉಂಟಾಗಲಿಲ್ಲ. ಅವನು ಅಂತರಿಕ್ಷದಲ್ಲಿದ್ದು ಅಪಮೃತ್ಯುವಿಗೆ ವಶನಾದನು. ಆದುದರಿಂದ ಎಲೈ ಸತ್ಯವತಿಯ ಪುತ್ರನಾದ ವ್ಯಾಸಮಹರ್ಷಿಯೇ, ದುರ್ಗತಿಯನ್ನು ಹೊಂದಿರುವ ನನ್ನ ತಂದೆಗೆ ಹೇಗೆ ಸ್ವರ್ಗಪ್ರಾಪ್ತಿಯಾಗುವುದೋ ಆ ಉಪಾಯವನ್ನು ನನಗೆ ನೀನು ಶೀಘ್ರವಾಗಿ ಹೇಳು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ ಏಕಾದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ದ್ವಿತೀಯಸ್ಕಂಧೇ

॥ ದ್ವಾದಶೋಽಧ್ಯಾಯಃ ॥

### ಹನ್ನೆರಡನೆಯ ಅಧ್ಯಾಯವು

॥ ಸೂತ ಉವಾಚ ॥

**ತಚ್ಛ್ರುತ್ವಾ ವಚನಂ ತಸ್ಯ ವ್ಯಾಸಃ ಸತ್ಯವತೀಸುತಃ ।**
**ಉವಾಚ ವಚನಂ ತತ್ರ ಸಭಾಯಾಂ ನೃಪತಿಂ ಚ ತಂ ॥೧॥**

ಸೂತನು ಹೇಳಿದನು—ಈ ರೀತಿಯಾಗಿ ಜನಮೇಜಯನು ಆಡಿದ ಮಾತುಗಳನ್ನು ಕೇಳಿ, ಸತ್ಯವತೀದೇವಿಯ ಮಗನಾದ ವ್ಯಾಸಋಷಿಯು ಆ ರಾಜಸಭೆಯಲ್ಲಿ ಆಸೀನನಾಗಿರುವ ರಾಜನನ್ನು ಕುರಿತು ಈ ರೀತಿಯಲ್ಲಿ ಪ್ರತ್ಯುತ್ತರವನ್ನು ಹೇಳಿದನು.

॥ ವ್ಯಾಸ ಉವಾಚ ॥

**ಶೃಣು ರಾಜನ್ ಪ್ರವಕ್ಷ್ಯಾಮಿ ಪುರಾಣಂ ಗುಹ್ಯಮದ್ಭುತಂ ।**
**ಪುಣ್ಯಂ ಭಾಗವತಂ ನಾಮ ನಾನಾಖ್ಯಾನಯುತಂ ಶಿವಂ ॥೨॥**

ವ್ಯಾಸನು ಜನಮೇಜಯರಾಜನಿಗೆ ಹೇಳಿದನು—ಎಲೈ ಜನಮೇಜಯ ರಾಜನೇ, ಅತಿರಹಸ್ಯವಾದ ವಿಷಯಗಳಿಂದ ಕೂಡಿದುದಾಗಿಯೂ, ಆಶ್ಚರ್ಯಕರವಾಗಿಯೂ, ಕೇಳುವವರಿಗೆ ಪುಣ್ಯಪ್ರದವಾಗಿಯೂ, ಅನೇಕ ಉಪಕಥೆಗಳಿಂದ ಕೂಡಿದ್ದಾಗಿಯೂ ಇರುವ ಭಾಗವತವೆಂಬ ಪುರಾಣವನ್ನು ಹೇಳುವೆನು, ಕೇಳು.

**ಅಧ್ಯಾಪಿತಂ ಮಯಾ ಪೂರ್ವಂ ಶುಕಾಯಾತ್ಮಸುತಾಯ ವೈ ।**
**ಶ್ರಾವಯಾಮಿ ನೃಪ ತ್ವಾಂ ಹಿ ರಹಸ್ಯಂ ಪರಮಂ ಮಮ ॥೩॥**

ಎಲೈ ರಾಜನೇ, ಈ ಪುರಾಣವನ್ನು ಪೂರ್ವದಲ್ಲಿ ನನ್ನ ಪುತ್ರನಾದ ಶುಕ ಮುನಿಗೆ ನಾನೇ ಉಪದೇಶಮಾಡಿರುವೆನು. ಅಂಥ ನನ್ನ ಉಪದೇಶಗಳಲ್ಲಿ ಅತಿರಹಸ್ಯ ವಾದವುಗಳನ್ನು ಒಳಗೊಂಡಿರುವುದರಿಂದ ನನಗೆ ಅತಿಪ್ರಿಯವಾದ ಆ ದೇವೀಭಾಗವತ ವೆಂಬ ಮಹಾಪುರಾಣವನ್ನು ನಿನಗೂ ಶ್ರವಣಮಾಡಿಸುವೆನು. ಇದನ್ನು ಕೇಳುವವರಿಗೆ ತಪ್ಪದೆ ಮನಶ್ಶಾಂತಿಯು ದೊರೆಯುತ್ತದೆಂಬುದೂ ಕಂಡುಬಂದಿರುತ್ತದೆ ಎಂದು ತಾತ್ಪರ್ಯವು.

**ಧರ್ಮಾರ್ಥಕಾಮಮೋಕ್ಷಾಣಾಂ ಕಾರಣಂ ಶ್ರವಣಾತ್ಕಿಲ |**
**ಶುಭದಂ ಸುಖದಂ ನಿತ್ಯಂ ಸರ್ವಾಗಮಸಮುದ್ಧೃತಂ ||೪||**

ಈ ಪುರಾಣವನ್ನು ಕೇಳುವಿಕೆಯು ಧರ್ಮಾರ್ಥಕಾಮಮೋಕ್ಷಗಳೆಂಬ ಪುರು ಷಾರ್ಥಗಳನ್ನು ಹೊಂದಲು ಸಾಧನಭೂತವಾಗಿರುವುದು. ಈ ಪುರಾಣವು ಯಾವಾ ಗಲೂ ಮಂಗಳವನ್ನೂ ಸುಖವನ್ನೂ ಉಂಟುಮಾಡುವುದು, ಮತ್ತು ಸಮಸ್ತ ವೇದಗಳೇ ಮುಂತಾದ ಆಗಮುಗಳಿಂದ ಆರಿಸಿ ತೆಗೆದು ಸಂಗ್ರಹಿಸಲ್ಪಟ್ಟದ್ದಾಗಿರುವುದು.

|| ಜನಮೇಜಯ ಉವಾಚ ||

**ಆಸ್ತಿಕೋಽಯಂ ಸುತಃ ಕಸ್ಯ ವಿಘ್ನಾರ್ಥಂ ಕಥಮಾಗತಃ ।**
**ಪ್ರಯೋಜನಂ ಕಿಮತ್ರಾಸ್ಯ ಸರ್ಪಾಣಾಂ ರಕ್ಷಣೇ ಪ್ರಭೋ ||೫||**

ಜನಮೇಜಯನು ವ್ಯಾಸನನ್ನು ಪ್ರಶ್ನೆಮಾಡಿದನು-- ಎಲೈ ಸ್ವಾಮಿಯಾದ ವ್ಯಾಸಮುನಿಯೇ, ಈ ಆಸ್ತಿಕನು ಯಾರ ಮಗನು? ಸರ್ಪಯಾಗವನ್ನು ನಿಲ್ಲಿಸಲು ಇಲ್ಲಿಗೆ ಹೇಗೆ ಬಂದನು? ದುಷ್ಟಪ್ರಾಣಿಗಳಾದ ಸರ್ಪಗಳನ್ನು ಯಜ್ಞಕುಂಡದ ಅಗ್ನಿ ಯಲ್ಲಿ ಬಿದ್ದು ಮೃತವಾಗುವುದನ್ನು ತಪ್ಪಿಸಿ ರಕ್ಷಿಸುವುದರಲ್ಲಿ ಈತನಿಗೆ ಏನು ಪ್ರಯೋಜನವು?

**ಕಥಯೈತನ್ಮಹಾಭಾಗ ವಿಸ್ತರೇಣ ಕಥಾನಕಂ ।**
**ಪುರಾಣಂ ಚ ತಥಾ ಸರ್ವಂ ವಿಸ್ತರಾದ್ವದ ಸುವ್ರತ ||೬||**

ಓ ಪುಣ್ಯಶಾಲಿಯೇ, ಈ ಕಥಾಸಂದರ್ಭವನ್ನು ನನಗೆ ಹೇಳು. ಮತ್ತು ಎಲೈ ಸತ್ಕರ್ಮನಿಷ್ಠನೇ, ಆ ದೇವೀಭಾಗವತಪುರಾಣವನ್ನೂ ಸಹ ನನಗೆ ವಿಸ್ತಾರವಾಗಿ ನಿರೂಪಿಸುವವನಾಗು.

|| ವ್ಯಾಸ ಉವಾಚ ||

**ಜರತ್ಕಾರುರ್ಮುನಿಃ ಶಾಂತೋ ನ ಚಕಾರ ಗೃಹಾಶ್ರಮಂ ।**
**ತೇನ ದೃಷ್ಟ್ವಾ ವನೇ ಗರ್ತೇ ಲಂಬಮಾನಾಃ ಸ್ವಪೂರ್ವಜಾಃ ॥೭॥**

ವ್ಯಾಸಮುನಿಯು ಪ್ರತ್ಯುತ್ತರವನ್ನು ಹೇಳಿದನು––ಎಲೈ ರಾಜನೇ, ಜರತ್ಕಾರುವೆಂಬ ಶಾಂತಚಿತ್ತನಾದ ಋಷಿಯು ಗೃಹಸ್ಥಾಶ್ರಮವನ್ನು ಸ್ವೀಕಾರಮಾಡದೆ ಅರಣ್ಯದಲ್ಲಿ ಸಂಚರಿಸುತ್ತಿರುವ ಸಮಯದಲ್ಲಿ ಒಂದು ಹಳ್ಳದಂತಿರುವ ಬಾವಿಯಲ್ಲಿ ತನ್ನ ವಂಶಜರಾದ ಪಿತೃಗಳು ನೇತಾಡುತ್ತಿರುವುದನ್ನು ನೋಡಿದನು.

**ತತಸ್ತಮಾಹುಃ ಕುರು ಪುತ್ರ ದಾರಾನ್**
**ಯಥಾ ಚ ನಃ ಸ್ಯಾತ್ಪರಮಾ ಹಿ ತೃಪ್ತಿಃ ।**
**ಸ್ವರ್ಗೇ ವ್ರಜಾಮಃ ಖಲು ದುಃಖಮುಕ್ತಾ**
**ವಯಂ ಸದಾಚಾರಯುತೇ ಸುತೇ ವೈ ॥೮॥**

ಅನಂತರದಲ್ಲಿ ಅವನ ಪಿತೃಗಳು ಜರತ್ಕಾರುಮುನಿಯನ್ನು ನೋಡಿ, ಎಲೈ •ಪುತ್ರನೇ, ನೀನು ಹೆಂಡತಿಯನ್ನು ಮದುವೆಯಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸು. ಅದರಿಂದ ನಮಗೆ ಉತ್ತಮವಾದ ಸಂತೋಷವುಂಟಾಗುವುದಲ್ಲದೆ ನಮ್ಮ ಮಗನು ಒಳ್ಳೆಯ ಧರ್ಮಗಳನ್ನು ಆಚರಿಸುತ್ತಿದ್ದರೆ, ನಾವುಗಳು ಈ ಕಷ್ಟದಿಂದ ಬಿಡುಗಡೆಯನ್ನು ಹೊಂದಿ ಸ್ವರ್ಗಕ್ಕೆ ಹೋಗಲು ಅನುಕೂಲವಾಗುವುದು.

**ಸ ತಾನುವಾಚಾಥ ಲಭೇ ಸಮಾನಾ-**
**ಮಯಾಚಿತಾಂ ಚಾತಿವಶಾನುಗಾಂ ಚ ।**
**ತದಾ ಗೃಹಾರಂಭಮಹಂ ಕರೋಮಿ**
**ಬ್ರವೀಮಿ ತಥ್ಯಂ ಮಮ ಪೂರ್ವಜಾ ವೈ ॥೯॥**

ಅನಂತರದಲ್ಲಿ ಆ ಜರತ್ಕಾರುಮುನಿಯು–– ಎಲೈ ನನ್ನ ವಂಶದಲ್ಲಿ ಹುಟ್ಟಿದ್ದ ಪಿತೃಗಳಿರಾ, ನನ್ನ ಹೆಸರಿನಂತೆಯೇ ಹೆಸರುಳ್ಳ, ಗುಣ, ಸ್ವಭಾವ ಮುಂತಾದವುಗಳಲ್ಲಿ ಅನುರೂಪಳಾದ ಮತ್ತು ವಿಧೇಯಳಾದ ಕನ್ಯೆಯು ನನಗೆ ಅಪ್ರಾರ್ಥಿತವಾಗಿ ದೊರೆತಲ್ಲಿ ನಾನು ಆ ಕನ್ಯೆಯನ್ನು ವಿವಾಹವಾಗಿ ಗೃಹಸ್ಥಾಶ್ರಮವನ್ನು ಪ್ರಾರಂಭಿಸುವೆನು. ಈ ಮಾತು ಸತ್ಯವು ಎಂದು ತನ್ನ ಪಿತೃಗಳಿಗೆ ಹೇಳಿದನು.

**ಇತ್ಯುಕ್ತ್ವಾ ತಾನ್ ಜರತ್ಕಾರುರ್ಗತಸ್ತೀರ್ಥಾನ್ಪ್ರತಿ ದ್ವಿಜಃ ।**
**ತದೈವ ಪನ್ನಗಾಃ ಶಪ್ತಾ ಮಾತ್ರಾಽಗ್ನೌ ನಿಪಂತತ್ವಿತಿ ॥೧೦॥**

ಹೀಗೆ ತನ್ನ ಪಿತೃಗಳಿಗೆ ಹೇಳಿ ಆ ಬ್ರಾಹ್ಮಣೋತ್ತಮನಾದ ಜರತ್ಕಾರುವು ತೀರ್ಥಯಾತ್ರೆಗಾಗಿ ಹೊರಟುಹೋದನು. ಆ ಕಾಲದಲ್ಲಿಯೇ ಸರ್ಪಗಳು ಬೆಂಕಿಯಲ್ಲಿ ಬಿದ್ದು ನಾಶವಾಗಲೆಂದು ಅವುಗಳ ತಾಯಿಯಾದ ಕುದ್ರುವಿನಿಂದ ಶಪಿಸಲ್ಪಟ್ಟವು.

**ಕಶ್ಯಪಸ್ಯ ಮುನೇಃ ಪತ್ನ್ಯೌ ಕದ್ರೂಶ್ಚ ವಿನತಾ ತಥಾ ।**
**ದೃಷ್ಟ್ವಾದಿತ್ಯರಥೇ ಚಾಶ್ವಮೂಚತುಶ್ಚ ಪರಸ್ಪರಂ ॥೧೧॥**

ಒಂದಾನೊಂದು ಕಾಲದಲ್ಲಿ ಕಶ್ಯಪಋಷಿಯ ಪತ್ನಿಯರಾದ ಕದ್ರೂ ಮತ್ತು ವಿನತೆಯರು ಸೂರ್ಯನ ರಥದ ಕುದುರೆಯನ್ನು ನೋಡಿ ತಮ್ಮ ತಮ್ಮಲ್ಲಿ ಈ ರೀತಿ ಸಂಭಾಷಣೆಮಾಡಿದರು.

**ತಂ ದೃಷ್ಟ್ವಾ ಚ ತದಾ ಕದ್ರೂರ್ವಿನತಾಮಿದಮಬ್ರವೀತ್ ।**
**ಕಿಂ ವರ್ಣೋಽಯಂ ಹಯೋ ಭದ್ರೇ ಸತ್ಯಂ ಪ್ರಬ್ರೂಹಿ ಮಾಚಿರಂ ॥೧೨॥**

ಆಗ ಆ ಕುದುರೆಯನ್ನು ನೋಡಿ ಕದ್ರುವು ವಿನತೆಯನ್ನು ಕುರಿತು ಎಲೌ ಶೋಭನಾಂಗಿಯೇ, ಈ ಕುದುರೆಯು ಯಾವ ಬಣ್ಣದ್ದು ? ಸತ್ಯವಾಗಿ ನನಗೆ ಬೇಗ ಹೇಳೆಂದು ಕೇಳಿದಳು.

॥ ವಿನತೋವಾಚ ॥

**ಶ್ವೇತ ಏವಾಶ್ವರಾಜೋಽಯಂ ಕಿಂ ವಾ ತ್ವಂ ಮನ್ಯಸೇ ಶುಭೇ ।**
**ಬ್ರೂಹಿ ವರ್ಣಂ ತ್ವಮಪ್ಯಸ್ಯ ತತಸ್ತು ವಿಪಣಾವಹೇ ॥೧೩॥**

ವಿನತೆಯು ಹೇಳಿದಳು— ಈ ಶ್ರೇಷ್ಠವಾದ ಕುದುರೆಯು ಬಿಳೀಬಣ್ಣವುಳ್ಳದ್ದು. ಎಲೌ ಮಂಗಳಕರಳೇ, ನೀನು ಅದನ್ನು ಯಾವ ಬಣ್ಣದ್ದೆಂದು ತಿಳಿದಿರುವೆ ? ಅದರ ಬಣ್ಣವನ್ನು ನೀನೂ ಹೇಳು. ಅನಂತರದಲ್ಲಿ ಈ ವಿಚಾರದಲ್ಲಿ ನಾವಿಬ್ಬರು ಪಂಥ ಕಟ್ಟೋಣ.

॥ ಕದ್ರೂರುವಾಚ ॥

**ಕೃಷ್ಣವರ್ಣಮಹಂ ಮನ್ಯೇ ಹಯಮೇನಂ ಶುಚಿಸ್ಮಿತೇ ।**
**ಏಹಿ ಸಾರ್ಧಂ ಮಯಾ ದಿವ್ಯಂ ದಾಸೀಭಾವಾಯ ಭಾಮಿನಿ ॥೧೪॥**

ಕದ್ರುವು ಹೇಳಿದಳು—ಎಲೌ, ನಿರ್ಮಲವಾದ ಮಂದಹಾಸವುಳ್ಳವಳೇ, ಈ ಕುದುರೆಯನ್ನು ಕಪ್ಪುಬಣ್ಣವುಳ್ಳದ್ದೆಂದು ನಾನು ತಿಳಿಯುತ್ತೇನೆ. ನನ್ನ ಜೊತೆಯಲ್ಲಿ ದೇವಲೋಕಕ್ಕೆ ಬಾ. ಈ ವಿಚಾರದಲ್ಲಿ ಸೋತವರು ಗೆದ್ದವರಿಗೆ ದಾಸಿಯಾಗಿರುವಂತೆ ಪಂಥವನ್ನು ನನ್ನ ಕೂಡ ಮಾಡುವಳಾಗು.

|| ಸೂತ ಉವಾಚ ||

**ಕದ್ರೂಶ್ಚ ಸ್ವಸುತಾನಾಹ ಸರ್ವಾನ್ ಸರ್ಪಾನ್ವಶೇ ಸ್ಥಿತಾನ್ ।**
**ವಾಲಾನ್ ಶ್ಯಾಮಾನ್ಪ್ರಕುರ್ವಂತು ಯಾವಂತೋಽಶ್ವಶರೀರಕೇ ॥೧೫॥**

ಸೂತನು ಹೇಳಿದನು. ಅನಂತರದಲ್ಲಿ ಕದ್ರುವು ತನ್ನ ಮಕ್ಕಳಾದ ಮತ್ತು ತನ್ನ ಮಾತನ್ನು ಕೇಳುವ ಸರ್ಪಗಳಿಗೆ ಈರೀತಿ ಹೇಳಿದಳು. ನೀವು ಹೋಗಿ ನಿಮ್ಮ ಕಪ್ಪಾದ ಶರೀರಗಳನ್ನು ಆ ಕುದುರೆಯ ಶರೀರಕ್ಕೆ ಸುತ್ತಿ ಬಿಗಿದು ಆ ಕುದುರೆಯ ಕೂದಲುಗಳು ಕಪ್ಪಾಗಿ ಕಾಣುವಂತೆ ಮಾಡಿರಿ.

**ನೇತಿ ಕೇಚನ ತತ್ರಾಹುಸ್ತಾನಥಾಸೌ ಶಶಾಪ ಹ ।**
**ಜನ್ಮೇಜಯಸ್ಯ ಯಜ್ಞೇ ವೈ ಗಮಿಷ್ಯಥ ಹುತಾಶನಂ ॥೧೬॥**

ಆ ಮಕ್ಕಳ ಪೈಕಿ ಕೆಲವರು ತಾಯಿಯ ಮಾತನ್ನು ಕೇಳದೆ ಆ ರೀತಿ ಮಾಡುವುದಿಲ್ಲವೆಂದರು. ಅವರನ್ನು ಕುರಿತು ಕದ್ರುವು ಜನಮೇಜಯನು ಮಾಡುವ ಯಜ್ಞದಲ್ಲಿ ಹೋಮಕುಂಡದ ಅಗ್ನಿಯಲ್ಲಿ ಬೀಳುವವರಾಗಿರಿ ಎಂದು ಶಾಪವನ್ನಿತ್ತಳು

**ಅನ್ಯೇ ಚಕ್ರುರ್ಹಯಂ ಸರ್ಪಾಃ ಕರ್ಬುರಂ ವರ್ಣಭೋಗಕೈಃ ।**
**ವೇಷ್ಟಯಿತ್ವಾಽಸ್ಯ ಪುಚ್ಛಂ ತು ಮಾತುಃ ಪ್ರಿಯಚಿಕೀರ್ಷಯಾ ॥೧೭॥**

ಆ ಮಕ್ಕಳಲ್ಲಿ ಮತ್ತೆ ಕೆಲವು ಸರ್ಪಗಳು ತಮ್ಮ ತಾಯಿಗೆ ಸಂತೋಷ ವನ್ನುಂಟುಮಾಡುವ ಇಚ್ಛೆಯಿಂದ ನಾನಾವಿಧವಾದ ಬಣ್ಣವುಳ್ಳ ತಮ್ಮ ಶರೀರಗಳಿಂದ ಆ ಕುದುರೆಯುನ್ನು ಅಚ್ಛಾದನೆಮಾಡಿ, ಅದರ ಶರೀರವನ್ನೂ ಅದರ ಬಾಲವನ್ನೂ ಅತ್ಯಂತ ಕಪ್ಪುಬಣ್ಣವುಳ್ಳದ್ದನ್ನಾಗಿ ಮಾಡಿದವು.

**ಭಗಿನ್ಯೌ ಚ ಸುಸಂಯುಕ್ತೇ ಗತ್ವಾ ದದೃಶತುರ್ಹಯಂ ।**
**ಕರ್ಬುರಂ ತಂ ಹಯಂ ದೃಷ್ಟ್ವಾ ವಿನತಾ ಚಾತಿದುಃಖಿತಾ ॥೧೮॥**

ಅನಂತರದಲ್ಲಿ ಅಕ್ಕತಂಗಿಯರು ಇಬ್ಬರೂ ಸೇರಿ ಹೊರಟು ಆ ಕುದುರೆಯನ್ನು ನೋಡಿದರು. ಆ ಕುದುರೆಯು ಅತ್ಯಂತ ಕಪ್ಪಾಗಿ ಕಾಣುತ್ತಿರುವುದನ್ನು ವಿನತೆಯು ನೋಡಿ ಅತಿ ದುಃಖವುಳ್ಳವಳಾದಳು.

**ತದಾಽಽಜಗಾಮ ಗರುಡಃ ಸುತಸ್ತಸ್ಯಾ ಮಹಾಬಲಃ ।**
**ಸ ದೃಷ್ಟ್ವಾ ಮಾತರಂ ದೀನಾಮಪೃಚ್ಛತ್ಪನ್ನಗಾಶನಃ ॥೧೯॥**

ಆಗ ಆ ವಿನತೆಯ ಮಗನಾದ, ಮಹಾಬಲಶಾಲಿಯಾದ ಮತ್ತು ಸರ್ಪಾಹಾರಿಯಾದ ಗರುಡನು ಬಂದು ದುಃಖಪಡುತ್ತಿರುವ ತನ್ನ ತಾಯಿಯನ್ನು ನೋಡಿ ಈರೀತಿಯಾಗಿ ಕೇಳಿದನು.

**ಮಾತಃ ಕಥಂ ಸುದೀನಾಽಸಿ ರುದಿತೇನ ವಿಭಾಸಿ ಮೇ ।**
**ಜೀವಮಾನೇ ಮಯಿ ಸುತೇ ತಥಾನ್ಯೇ ರವಿಸಾರಥೌ ॥೨೦॥**
**ದುಃಖಿತಾಽಸಿ ತತೋ ವಾಂ ಧಿಗ್ಜೀವಿತಂ ಚಾರುಲೋಚನೇ ॥**

ಓ ಜನನಿಯೇ, ನೀನು ಏತಕ್ಕೆ ದುಃಖಿಸುತ್ತಿರುವೆ? ನೀನು ಅಳುತ್ತಿರುವಂತೆ ನನಗೆ ತೋರುವುದು. ಎಲೌ ಸುಲೋಚನೆಯೇ, ನಿನ್ನ ಪುತ್ರನಾದ ನಾನು ಮತ್ತು ಇನ್ನೊಬ್ಬ ಮಗನಾದ ಸೂರ್ಯಸಾರಥಿಯಾದ ಅರುಣನೂ ಸಹ ಜೀವಿಸಿರುವಲ್ಲಿ ನೀನು ದುಃಖಿತಳಾಗಿರುವುದರಿಂದ, ನಾವು ಬದುಕಿದ್ದೂ ವ್ಯರ್ಥವು.

**ಕಿಂ ಜಾತೇನ ಸುತೇನಾಥ ಯದಿ ಮಾತಾ ಸುದುಃಖಿತಾ ॥೨೧॥**
**ಶಂಸ ಮೇ ಕಾರಣಂ ಮಾತಃ ಕರೋಮಿ ವಿಗತಜ್ವರಾಂ ॥**

ತಾಯಿಯು ದುಃಖಪಡುತ್ತಿದ್ದರೆ ಅದನ್ನು ಪರಿಹರಿಸದಿರುವಂಥ ಮಗನು ಹುಟ್ಟಿದುದರಿಂದ ಏನು ಪ್ರಯೋಜನವು? ಆದುದರಿಂದ ಓ ತಾಯಿಯೇ, ನಿನ್ನ ದುಃಖಕಾರಣವನ್ನು ನನಗೆ ಹೇಳು. ನಾನು ಅದನ್ನು ಪರಿಹರಿಸಿ ದುಃಖದ ತಾಪವನ್ನು ನಿವಾರಿಸುತ್ತೇನೆ.

॥ ವಿನತೋವಾಚ ॥

**ಸಪತ್ನ್ಯಾ ದಾಸ್ಯಹಂ ಪುತ್ರ ಕಿಂ ಬ್ರವೀಮಿ ವೃಥಾ ಕ್ಷತಾ ॥೨೨॥**
**ವಹ ಮಾಂ ಸಾ ಬ್ರವೀತ್ಯದ್ಯ ತೇನಾಸ್ಮಿ ದುಃಖಿತಾ ಸುತ ॥**

ವಿನತೆಯು ತನ್ನ ಮಗನಾದ ಗರುಡನಿಗೆ ಈ ರೀತಿಯಾಗಿ ಹೇಳಿದಳು. ಎಲೈ ಪುತ್ರನೇ, ನಾನು ಈಗ ನನ್ನ ಸವತಿಗೆ ದಾದಿಯಾಗಿರಬೇಕಾಗಿದೆ. ಈ ಅವಮಾನವನ್ನು ಏನೆಂದು ಹೇಳಲಿ? ತನ್ನನ್ನು ಹೆಗಲಮೇಲೆ ಕೂರಿಸಿಕೊಂಡು ಹೋಗಬೇಕೆಂದು ಆ ಸವತಿಯು ನನಗೆ ಹೇಳಿರುವಳು. ಆದುದರಿಂದ ಎಲೈ ಮಗನೇ, ನಾನು ದುಃಖ ಪಡುತ್ತಿರುವೆನು.

|| ಗರುಡ ಉವಾಚ ||

**ವಹಿಷ್ಯೇಽಹಂ ತತ್ರ ಕಿಲ ಯತ್ರ ಸಾ ಗಂತುಮುತ್ಸುಕಾ ॥೨೩॥**
**ಮಾ ಶೋಕಂ ಕುರು ಕಲ್ಯಾಣಿ ನಿಶ್ಚಿಂತಾಂ ತ್ವಾಂ ಕರೋಮ್ಯಹಂ ।**

ಗರುಡನು ಹೇಳಿದನು—ಎಲೌ ಮಂಗಳಕರಳಾದ ಶೋಭನಾಂಗಿಯಾದ ಜನನಿಯೇ, ಆ ನಿನ್ನ ಸವತಿಯನ್ನು ಅವಳು ಇಷ್ಟಪಡುವ ಸ್ಥಳಕ್ಕೆ ನಾನು ಹೊತ್ತು ಕೊಂಡು ಹೋಗುವೆನು. ಆದುದರಿಂದ ನೀನು ದುಃಖಿಸಬೇಡ. ನಿನ್ನ ಚಿಂತೆಯನ್ನು ಹೋಗಲಾಡಿಸುವೆನು.

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ಸಾ ಗತಾ ಪಾರ್ಶ್ವಂ ಕದ್ರೋಃಶ್ಚ ವಿನತಾ ತದಾ ॥೨೪॥**

ವ್ಯಾಸನು ಮುಂದೆ ಈರೀತಿಯಲ್ಲಿ ಹೇಳಿದನು—ಹೀಗೆ ಗರುಡನು ಹೇಳಿದ ಮೇಲೆ ವಿನತೆಯು ಆಗ ಕದ್ರುವಿನ ಸಮಾಪಕ್ಕೆ ಹೋದಳು.

**ದಾಸೀಭಾವಮಪಾಕರ್ತುಂ ಗರುಡೋಽಪಿ ಮಹಾಬಲಃ ।**
**ಉವಾಹ ತಾಂ ಸಪುತ್ರಾಂ ವೈ ಸಿಂಧೋಃ ಪಾರಂ ಜಗಾಮ ಹ ॥೨೫॥**

ತನ್ನ ತಾಯಿಯ ದಾಸ್ಯವನ್ನು ಹೋಗಲಾಡಿಸಲು ಮಹಾಬಲಶಾಲಿಯಾದ ಗರುಡನು ಕದ್ರುವನ್ನು ಅವಳ ಮಕ್ಕಳ ಸಹಿತವಾಗಿ ತನ್ನ ಬೆನ್ನಿನಮೇಲೆ ಕೂಡಿಸಿ ಕೊಂಡು ಸಾಗರಾಂತ್ಯದವರೆಗೂ ಹೊತ್ತುಕೊಂಡು ಹೋದನು.

**ಗತ್ವಾ ತಾಂ ಗರುಡಃ ಪ್ರಾಹ ಬ್ರೂಹಿ ಮಾತರ್ನಮೋಽಸ್ತು ತೇ ।**
**ಕಥಂ ಮುಚ್ಯೇತ ಮೇ ಮಾತಾ ದಾಸೀಭಾವಾದಸಂಶಯಂ ॥೨೬॥**

ಈರೀತಿಯಲ್ಲಿ ಕದ್ರುವನ್ನು ಹೊತ್ತುಕೊಂಡು ಹೋಗಿ, ಅಲ್ಲಿ ಅವಳನ್ನು ಕುರಿತು, ಓ ತಾಯಿಯೇ, ನಿನಗೆ ವಂದಿಸುವೆನು. ನನ್ನ ಜನನಿಯ ದಾಸ್ಯವು ಹೇಗೆ ಬಿಡುಗಡೆಯಾಗುವುದು? ಇದನ್ನು ನಿಸ್ಸಂದೇಹವಾಗಿ ನನಗೆ ಹೇಳೆಂದು ಕೇಳಿದನು.

|| ಕದ್ರೂರುವಾಚ ||

**ಅಮೃತಂ ದೇವಲೋಕಾತ್ತ್ವಂ ಬಲಾದಾನೀಯ ಮೇ ಸುತಾನ್ ।**
**ಸಮರ್ಪಯ ಸುತಾದ್ಯಾಶು ಮಾತರಂ ಮೋಚಯಾಬಲಾಂ ॥೨೭॥**

ಕದ್ರುವು ಹೇಳಿದಳು—ಎಲೈ ಮಗನೇ, ನಿನ್ನ ಪರಾಕ್ರಮದಿಂದ ದೇವಲೋಕದಲ್ಲಿರುವ ಅಮೃತವನ್ನು ತಂದು ನನ್ನ ಮಕ್ಕಳಿಗೆ ಕೊಟ್ಟು ಅದರಿಂದ ನಿನ್ನ ತಾಯಿಯ ದಾಸ್ಯವಿಮೋಚನೆಯನ್ನು ಜಾಗ್ರತೆಯಾಗಿ ಮಾಡು.

|| ವ್ಯಾಸ ಉವಾಚ ||

**ಇತ್ಯುಕ್ತಃ ಪ್ರಯಯೌ ಶೀಘ್ರಮಿಂದ್ರಲೋಕಂ ಮಹಾಬಲಃ ।**
**ಕೃತ್ವಾ ಯುದ್ಧಂ ಜಹಾರಾಶು ಸುಧಾಕುಂಭಂ ಖಗೋತ್ತಮಃ ॥೨೮॥**

ವ್ಯಾಸನು ಮುಂದೆ ಹೇಳಿದನು—ಹೀಗೆ ಕದ್ರುವು ಹೇಳಿದಕೂಡಲೇ ಮಹಾಪರಾಕ್ರಮಶಾಲಿಯಾದ ಪಕ್ಷಿಶ್ರೇಷ್ಠನು ಸ್ವರ್ಗಲೋಕಕ್ಕೆ ಹೋಗಿ ಇಂದ್ರನೊಡನೆ ಯುದ್ಧಮಾಡಿ ಅಮೃತಕಲಶವನ್ನು ಜಾಗ್ರತೆಯಾಗಿ ತೆಗೆದುಕೊಂಡು ಬಂದನು.

**ಸಮಾನೀಯಾಮೃತಂ ಮಾತ್ರೇ ವೈನತೇಯಃ ಸಮರ್ಪಯತ್ ।**
**ಮೋಚಿತಾ ವಿನತಾ ತೇನ ದಾಸೀಭಾವಾದಸಂಶಯಂ ॥೨೯॥**

ವಿನತೆಯ ಪುತ್ರನಾದ ಗರುಡನು ಸ್ವರ್ಗದಿಂದ ಅಮೃತವನ್ನು ತಂದು ತಾಯಿಯಾದ ಕದ್ರುವಿಗೆ ಅರ್ಪಿಸಿದನು. ಅದರಿಂದ ವಿನತೆಯು ದಾಸ್ಯದಿಂದ ನಿಸ್ಸಂದೇಹವಾಗಿ ಬಿಡುಗಡೆಯನ್ನು ಹೊಂದಿದಳು.

**ಅಮೃತಂ ಸಂಜಹಾರೇಂದ್ರಃ ಸ್ನಾತುಂ ಸರ್ಪಾ ಯದಾ ಗತಾಃ ।**
**ದಾಸೀಭಾವಾದ್ವಿನಿರ್ಮುಕ್ತಾ ವಿನತಾ ವಿಪತೇರ್ಬಲಾತ್ ॥೩೦॥**

ಆದರೆ ಕದ್ರುವಿನ ಮಕ್ಕಳಾದ ಸರ್ಪಗಳು ಅಮೃತಪ್ರಾಶನಮಾಡಲು ಶುಚಿರ್ಭೂತರಾಗುವುದಕ್ಕಾಗಿ ಸ್ನಾನಮಾಡಲು ಹೋಗಿರುವ ಸಮಯದಲ್ಲಿ ಇಂದ್ರನು

ಬಂದು ಆ ಅಮೃತಕಲಶವನ್ನು ಅಪಹಾರಮಾಡಿಕೊಂಡು ಹೋದನು. ಆದರೂ ಪಕ್ಷಿ ರಾಜನಾದ ಗರುಡನು ತನ್ನ ಪರಾಕ್ರಮದಿಂದ ಅವನ ತಾಯಿಯಾದ ವಿನತೆಯ ದಾಸೀಭಾವವನ್ನು ಹೋಗಲಾಡಿಸಿದ್ದನು.

ತತ್ರಾಸ್ತೀರ್ಣಾಃ ಕುಶಾಸ್ತೈಸ್ತು ಲೀಢಾಃ ಪನ್ನಗನಾಯಕೈಃ ।
ದ್ವಿಜಿಹ್ವಾಸ್ತೇ ಸುಸಂಪನ್ನಾಃ ಕುಶಾಗ್ರಸ್ಪರ್ಶಮಾತ್ರತಃ ॥೩೦॥

ಅನಂತರದಲ್ಲಿ ಸ್ನಾನಮಾಡಿ ಹಿಂತಿರುಗಿ ಬಂದ ಸರ್ಪಶ್ರೇಷ್ಠಗಳು ಅಮೃತ ಕಲಶವಿಲ್ಲದ್ದರಿಂದ ಅಲ್ಲಿ ಅದನ್ನು ಇಡಲು ಹರಡಿದ್ದ ದರ್ಭೆಗಳನ್ನು ನೋಡಿ ಅದರಲ್ಲಿ ಅಮೃತವು ಚೆಲ್ಲಿಬಿದ್ದಿರಬಹುದೆಂಬ ಭಾವನೆಯಿಂದ, ತಮ್ಮ ನಾಲಗೆಗಳಿಂದ ನೆಕ್ಕಿದುವು. ಹೀಗೆ ಹರಿತವಾದ ಮೊನೆಯುಳ್ಳ ದರ್ಭೆಗಳು ಸರ್ಪಗಳ ನಾಲಗೆಗಳಿಗೆ ತಗುಲಿದ ಕೂಡಲೇ ಆ ನಾಲಗೆಗಳು ಎರಡು ಭಾಗವಾಗಿ ಸೀಳಿಹೋಗಲು, ಆಗಿನಿಂದಲೂ ಸರ್ಪಗಳಿಗೆ ದ್ವಿಜಿಹ್ವ ಎಂದರೆ ಎರಡು ನಾಲಗೆಯುಳ್ಳವುಗಳೆಂದು ಪ್ರಸಿದ್ಧಿಯಾಯಿತು.

ಮಾತ್ರಾ ಶಪ್ತಾಶ್ಚ ಯೇ ನಾಗಾ ವಾಸುಕಿಪ್ರಮುಖಾಃ ಶುಚಾ ।
ಬ್ರಹ್ಮಾಣಂ ಶರಣಂ ಗತ್ವಾ ತೇ ಹೋಚುಃ ಶಾಪಜಂ ಭಯಂ ॥೩೨॥

ತಾಯಿಯಿಂದ ಶಪಿಸಲ್ಪಟ್ಟ ವಾಸುಕಿ ಮೊದಲಾದ ಸರ್ಪಗಳು ಸ್ನಾನಾದಿಗಳಿಂದ ಶುಚಿರ್ಭೂತರಾಗಿ, ಬ್ರಹ್ಮನಲ್ಲಿ ಶರಣುಹೋಗಿ, ತಮಗೆ ಬಂದಿರುವ ಶಾಪ ಭಯವನ್ನು ಅರಿಕೆಮಾಡಿದುವು.

ತಾನಾಹ ಭಗವಾನ್ ಬ್ರಹ್ಮಾ ಜರತ್ಕಾರುರ್ಮಹಾಮುನಿಃ ।
ವಾಸುಕೇರ್ಭಗಿನೀಂ ತಸ್ಮೈ ಅರ್ಪಯಧ್ವಂ ಸನಾಮಿಕಾಂ ॥೩೩॥

ಆ ಸರ್ಪಗಳನ್ನು ಕುರಿತು ಭಗವಂತನಾದ ಬ್ರಹ್ಮನು, ಎಲೈ ಸರ್ಪಗಳೇ, ಜರತ್ಕಾರುವೆಂಬ ಮಹಾತಪಸ್ವಿಯು ಇರುವನು. ಅವನಿಗೆ ವಾಸುಕಿಯ ತಂಗಿಯಾದ ಜರತ್ಕಾರುವೆಂದು ಆ ಮುನಿಯ ಹೆಸರಿಗೆ ಸಮಾನವಾದ ಹೆಸರೇ ಇರುವ ಕನ್ಯೆಯನ್ನು ವಿವಾಹಾರ್ಥವಾಗಿ ಸಮರ್ಪಿಸಿರಿ ಎಂದು ಹೇಳಿದನು.

ತಸ್ಯಾಂ ಯೋ ಜಾಯತೇ ಪುತ್ರಃ ಸ ವಸ್ತ್ರಾತಾ ಭವಿಷ್ಯತಿ ।
ಆಸ್ತೀಕ ಇತಿ ನಾಮಾಸೌ ಭವಿತಾ ನಾತ್ರ ಸಂಶಯಃ ॥೩೪॥

ಆ ಕನ್ಯೆಯಲ್ಲಿ ಆಸ್ತೀಕ ಎಂಬ ಹೆಸರುಳ್ಳ ಪುತ್ರನು ಜನಿಸುವನು. ಅವನು ನಿಮ್ಮನ್ನು ಶಾಪಭಯದಿಂದ ರಕ್ಷಿಸುವನು. ಈ ವಿಚಾರದಲ್ಲಿ ಸಂಶಯವಿಲ್ಲವು.

**ವಾಸುಕಿಸ್ತು ತದಾಕರ್ಣ್ಯ ವಚನಂ ಬ್ರಹ್ಮಣಃ ಶಿವಂ।**
**ವನಂ ಗತ್ವಾ ಸುತಾಂ ತಸ್ಮೈ ದದೌ ವಿನಯಪೂರ್ವಕಂ ॥೩೫॥**

ಬ್ರಹ್ಮನು ಹೇಳಿದ ಈ ಶುಭವಚನವನ್ನು ವಾಸುಕಿಯು ಕೇಳಿ ಜರತ್ಕಾರುವಿನ ತಪೋವನಕ್ಕೆ ಹೋಗಿ, ತನ್ನ ಮಗಳನ್ನು ಆ ಮುನಿಗೆ ವಿನಯಪೂರ್ವಕವಾಗಿ ಅರ್ಪಿಸಿದನು. (ತಂದೆಯ ಹೆಸರೂ ವಾಸುಕಿ ಎಂದೇ ಇರಬಹುದು.)

**ಸನಾಮಾಂ ತಾಂ ಮುನಿರ್ಜ್ಞಾತ್ವಾ ಜರತ್ಕಾರುರುವಾಚ ತಂ ।**
**ಅಪ್ರಿಯಂ ಮೇ ಯದಾ ಕುರ್ಯಾತ್ತದಾ ತಾಂ ಸಂತ್ಯಜಾಮ್ಯಹಂ ॥೩೬॥**

ಜರತ್ಕಾರುವೆಂದು ತನ್ನ ಹೆಸರೇ ಆ ಕನ್ಯೆಗೆ ಇರುವುದನ್ನು ತಿಳಿದು, ಆ ಜರತ್ಕಾರುಮುನಿಯು ವಾಸುಕಿಯನ್ನು ಕುರಿತು, ಈ ಕನ್ಯೆಯು ನನಗೆ ಹಿತವಲ್ಲದ ಕಾರ್ಯವನ್ನು ಯಾವಾಗ ಮಾಡುವಳೋ ಆಗ ಇವಳನ್ನು ನಾನು ಬಿಟ್ಟುಬಿಡುವೆನೆಂದು ಹೇಳಿದನು.

**ವಾಗ್ಬಂಧಂ ತಾದೃಶಂ ಕೃತ್ವಾ ಮುನಿರ್ಜಗ್ರಾಹ ತಾಂ ಸ್ವಯಂ ।**
**ದತ್ವಾ ಚ ವಾಸುಕಿಃ ಕಾಮಂ ಭವನಂ ಸ್ವಂ ಜಗಾಮ ಹ ॥೩೭॥**

ಈ ರೀತಿಯಾದ ಕಟ್ಟುಪಾಡಿನ ಒಪ್ಪಂದವನ್ನು ಮಾಡಿಕೊಂಡು ಆ ಕನ್ಯೆಯನ್ನು ಜರತ್ಕಾರುಮುನಿಯು ವಿವಾಹಾರ್ಥವಾಗಿ ಸ್ವೀಕರಿಸಿದನು. ವಾಸುಕಿಯು ಸಹ ತನ್ನ ತಂಗಿಯನ್ನು ಆ ಮುನಿಗೆ ಕೊಟ್ಟು ಸಂತೋಷಚಿತ್ತನಾಗಿ ತನ್ನ ಗೃಹಕ್ಕೆ ತೆರಳಿದನು.

**ಕೃತ್ವಾ ಪರ್ಣಕುಟೀಂ ಶುಭ್ರಾಂ ಜರತ್ಕಾರುರ್ಮಹಾವನೇ ।**
**ತಯಾ ಸಹ ಸುಖಂ ಪ್ರಾಪ ರಮಮಾಣಃ ಪರಂತಪ ॥೩೮॥**

ಎಲೈ ಶತ್ರುಮರ್ದನನಾದ ಜನಮೇಜಯನೇ, ಕೇಳು. ಆ ಜರತ್ಕಾರುಮುನಿಯು ಆ ತಪೋವನದಲ್ಲಿ ನಿರ್ಮಲವಾದ ಪರ್ಣಶಾಲೆಯನ್ನು ರಚಿಸಿ, ಅದರಲ್ಲಿ ಆ ಜರತ್ಕಾರುವೆಂಬ ಹೆಂಡತಿಯೊಡನೆ ವಿಹರಿಸುತ್ತಾ ಸುಖವಾಗಿದ್ದನು.

**ಏಕದಾ ಭೋಜನಂ ಕೃತ್ವಾ ಸುಪ್ತೋಽಸೌ ಮುನಿಸತ್ತಮಃ ।**
**ಭಗಿನೀ ವಾಸುಕೇಸ್ತತ್ರ ಸಂಸ್ಥಿತಾ ವರವರ್ಣಿನೀ ॥೩೯॥**

ಒಂದು ಸಮಯದಲ್ಲಿ ಆ ಮುನಿಪುಂಗವನು ಭೋಜನವನ್ನು ಮಾಡಿದ ಮೇಲೆ ಮಲಗಿ ನಿದ್ರಿಸುತ್ತಿದ್ದನು. ಆಗ ವಾಸುಕಿಯ ತಂಗಿಯಾದ ಆ ಶೋಭನಾಂಗಿಯು ಅವನ ಸಮೀಪದಲ್ಲಿ ಕೂತಿದ್ದಳು.

**ನ ಸಂಬೋಧಯಿತವ್ಯೋಽಹಂ ತ್ವಯಾ ಕಾಂತೇ ಕಥಂಚನ ।**
**ಇತ್ಯುಕ್ತ್ವಾ ತು ಗತೋ ನಿದ್ರಾಂ ಮುನಿಸ್ತಾಂ ಸುದತೀಂ ತದಾ ॥೪೦॥**

ಮಲಗುವುದಕ್ಕೆ ಮುಂಚೆ ಆ ಮುನಿಯು ತನ್ನ ಕಾಂತೆಗೆ, ಎಂಥಾ ಸಂದರ್ಭವಲ್ಲಿಯೂ ನೀನು ನನ್ನನ್ನು ಎಚ್ಚರಗೊಳಿಸಕೂಡದೆಂದು ಹೇಳಿ ನಿದ್ರೆಹೋದನು.

**ರವಿರಸ್ತಗಿರಿಂ ಪ್ರಾಪ್ತಃ ಸಂಧ್ಯಾಕಾಲ ಉಪಸ್ಥಿತೇ ।**
**ಕಿಂ ಕರೋಮಿ ನ ಮೇ ಶಾಂತಿಸ್ತ್ಯಜೇನ್ಮಾಂ ಬೋಧಿತಃ ಪುನಃ ॥೪೧॥**

ಹೀಗಿರುವಲ್ಲಿ ಸಂಜೆಯ ಕಾಲವು ಸಮೀಪಿಸಲು ಸೂರ್ಯನು ಅಸ್ತಾಚಲವನ್ನು ಸೇರಿದನು. ಆಗ ಆ ಸುದತಿಯು ನಿದ್ರಿಸುತ್ತಿರುವ ಮುನಿಯ ಸಮೀಪದಲ್ಲಿ ಕೂತುಕೊಂಡು ಈರೀತಿ ಯೋಚಿಸತೊಡಗಿದಳು. ಸೂರ್ಯನು ಅಸ್ತಂಗತನಾಗುತ್ತಿರುವ ಈ ಸಮಯದಲ್ಲಿ ನಾನು ಏನನ್ನು ಮಾಡಲಿ? ನನ್ನ ಮನಸ್ಸು ತಲ್ಲಣಿಸುತ್ತಿರುವುದು. ಈ ನನ್ನ ಪತಿಯನ್ನು ಸಂಧ್ಯಾದಿ ಕರ್ಮಾಚರಣೆಗೋಸ್ಕರ ಎಚ್ಚರಗೊಳಿಸಿದಲ್ಲಿ ಹಿಂದೆ ಆಗಿರುವ ಒಪ್ಪಂದದಂತೆ ತನಗೆ ಅಪ್ರಿಯವನ್ನು ಮಾಡಿದುದಕ್ಕಾಗಿ ನನ್ನನ್ನು ತ್ಯಜಿಸುವನು. ಹೇಗೂ ನನ್ನ ಮನಸ್ಸಿನಲ್ಲಿ ಶಾಂತಿನೆಮ್ಮದಿಗಳು ಇಲ್ಲವಾಗಿವೆ.

**ಧರ್ಮಲೋಪಭಯಾದ್ಭೀತಾ ಜರತ್ಕಾರುರಚಿಂತಯತ್ ।**
**ನೋ ಚೇತ್ಪ್ರಬೋಧಯಾಮ್ಯೇನಂ ಸಂಧ್ಯಾಕಾಲೋ ವೃಥಾ ವ್ರಜೇತ್ ॥**

ಒಂದು ವೇಳೆ ಈತನನ್ನು ಎಚ್ಚರಗೊಳಿಸದಿದ್ದರೆ ಸಂಧ್ಯಾಕಾಲವು ವ್ಯರ್ಥವಾಗಿ ಕಳೆದುಹೋಗುವುದು. ಆದರಿಂದ ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಾಚರಣೆಯು ತಪ್ಪಿ ಧರ್ಮಲೋಪವಾಗುವುದೆಂದು ಭಯಪಟ್ಟು ಆ ಜರತ್ಕಾರುವೆಂಬ ಸ್ತ್ರೀಯು ಯೋಚನೆಮಾಡಿದಳು.

ಧರ್ಮನಾಶಾದ್ವರಂ ತ್ಯಾಗಸ್ತಥಾಪಿ ಮರಣಂ ಧ್ರುವಂ ।
ಧರ್ಮಹಾನಿರ್ನರಾಣಾಂ ಹಿ ನರಕಾಯ ಭವೇತ್ಪುನಃ ॥೪೩॥

ಧರ್ಮಹಾನಿಯಾಗುವುದಕ್ಕಿಂತ ಆತನು ನನ್ನನ್ನು ತ್ಯಜಿಸುವುದಾದರೂ ಮೇಲು. ಏಕೆಂದರೆ, ಹೇಗಾದರೂ ಮರ್ತ್ಯರಿಗೆ ಮರಣವು ನಿಶ್ಚಯವು. ಆದರೆ ಮನುಷ್ಯರಿಗೆ ಧರ್ಮಾಚರಣೆಯು ತಪ್ಪಿದರೆ ನರಕವೇ ಪ್ರಾಪ್ತವಾಗುವುದು. ಆದುದರಿಂದ ಪತಿಯನ್ನು ಎಚ್ಚರಿಸುವುದೇ ಮೇಲೆಂದು ಅವಳು ನಿಶ್ಚಯಿಸಿದಳು.

ಇತಿ ಸಂಚಿಂತ್ಯ ಸಾ ಬಾಲಾ ತಂ ಮುನಿಂ ಪ್ರತ್ಯಬೋಧಯತ್ ।
ಸಂಧ್ಯಾಕಾಲೋಽಪಿ ಸಂಜಾತ ಉತ್ತಿಷ್ಠೋತ್ತಿಷ್ಠ ಸುವ್ರತ ॥೪೪॥

ಹೀಗೆ ಯೋಚಿಸಿ ಆ ಬಾಲೆಯು ಜರತ್ಕಾರುಮುನಿಯನ್ನು ಕುರಿತು ಓ ಸತ್ಕರ್ಮ ನಿಷ್ಠನೇ, ಈಗ ಸಂಧ್ಯಾಕಾಲವು ಪ್ರಾಪ್ತವಾಯಿತು. ಆದುದರಿಂದ ಏಳುವವನಾಗು ಎಂದು ಹೇಳಿ ಎಚ್ಚರಗೊಳಿಸಿದಳು.

ಉತ್ಥಿತೋಽಸೌ ಮುನಿಃ ಕೋಪಾತ್ತಾಮುವಾಚ ವ್ರಜಾಮ್ಯಹಂ ।
ತ್ವಂ ತು ಭ್ರಾತೃಗೃಹಂ ಯಾಹಿ ನಿದ್ರಾ ವಿಚ್ಛೇದಕಾರಿಣೀ ॥೪೫॥

ಜರತ್ಕಾರುಮುನಿಯು ನಿದ್ರೆಯಿಂದ ಎಚ್ಚತ್ತು ಕೋಪದಿಂದ ಅವಳನ್ನು ಕುರಿತು, ನೀನು ನನ್ನ ನಿದ್ರೆಯನ್ನು ಭಂಗಪಡಿಸಿ ನನಗೆ ಅಪ್ರಿಯವಾದ ಕಾರ್ಯವನ್ನು ಮಾಡಿದ್ದರಿಂದ ನಾನು ಇನ್ನು ನಿನ್ನನ್ನು ಬಿಟ್ಟು ಹೊರಟುಹೋಗುವೆನು. ನೀನು ನಿನ್ನ ಅಣ್ಣನಾದ ವಾಸುಕಿಯ ಮನೆಗೆ ತೆರಳೆಂದು ನುಡಿದನು.

ವೇಪಮಾನಾಽಬ್ರವೀದ್ವಾಕ್ಯಮಿತ್ಯುಕ್ತಾ ಮುನಿನಾ ತದಾ ।
ಭ್ರಾತ್ರಾ ದತ್ತಾ ಯದರ್ಥಂ ತತ್ಕಥಂ ಸ್ಯಾದಮಿತಪ್ರಭ ॥೪೬॥

ಆಗ ಜರತ್ಕಾರು ಮುನಿಯು ಕೋಪದಿಂದ ನುಡಿದ ಮಾತನ್ನು ಕೇಳಿ ಆ ಬಾಲೆಯು ಭಯದಿಂದ ನಡುಗುತ್ತಾ, ಎಲೈ ಮಹಾತೇಜಸ್ವಿಯೇ, ನನ್ನ ಅಣ್ಣನು ನನ್ನನ್ನು ನಿಮಗೆ ಯಾವ ಕಾರಣಕ್ಕೋಸ್ಕರ ವಿವಾಹಮಾಡಿಕೊಟ್ಟನೋ ಆ ಪ್ರಯೋಜನವು ಹೇಗೆ ಕೈಗೂಡುವುದೆಂದು ಆ ಮುನಿಯನ್ನು ಕುರಿತು ಕೇಳಿದಳು.

ಮುನಿಃ ಪ್ರಾಹ ಜರತ್ಕಾರುಂ ತದಸ್ತೀತಿ ನಿರಾಕುಲಃ ।
ಗತಾ ಸಾ ಮುನಿನಾ ತ್ಯಕ್ತಾ ವಾಸುಕೇಃ ಸದನಂ ತದಾ ॥೪೭॥

ಆ ಜರತ್ಕಾರುಮುನಿಯು ಆ ಬಾಲೆಯ ಮಾತಿಗೆ ಪ್ರತ್ಯುತ್ತರವಾಗಿ ನಿನ್ನ ಭ್ರಾತೃವಿನ ಇಷ್ಟವು ಎಂದರೆ, ನೀನು ಬಯಸುವ ಪುತ್ರನು, ನಿನ್ನ ಗರ್ಭದಲ್ಲಿರುವ ನೆಂದು ನಿಶ್ಚಿಂತನಾಗಿ ನುಡಿಯಲು, ಆಗ ಆ ಮುನಿಯಿಂದ ಬಿಡಲ್ಪಟ್ಟ ಆ ಬಾಲೆಯು ವಾಸುಕಿಯ ಮನೆಗೆ ಹೋದಳು.

**ಪೃಷ್ಟಾ ಭ್ರಾತ್ರಾಽಬ್ರವೀದ್ವಾಕ್ಯಂ ಯಥೋಕ್ತಂ ಪತಿನಾ ತದಾ ।**
**ಅಸ್ತೀತ್ಯುಕ್ತ್ವಾ ಚ ಹಿತ್ವಾ ಮಾಂ ಗತೋಽಸೌ ಮುನಿಸತ್ತಮಃ ॥೪೮॥**

ಆ ಬಾಲೆಯನ್ನು ಅವಳ ಅಣ್ಣನು ಪ್ರಶ್ನಿಸಲಾಗಿ, ತನ್ನ ಪತಿಯು ಹೇಳಿದ ಮಾತನ್ನು ಯಥಾರೀತಿಯಲ್ಲಿ, ಆ ಮುನಿಶ್ರೇಷ್ಠನು ನನ್ನಿಂದ ಆಗಬೇಕಾಗಿದ್ದ ಉಪಕಾರವಾಗಿದೆ ಎಂದು ಹೇಳಿ ನನ್ನನ್ನು ಬಿಟ್ಟು ಹೊರಟುಹೋದನೆಂದು ತನ್ನ ಅಣ್ಣನಾದ ವಾಸುಕಿಗೆ ಅವಳು ಹೇಳಿದಳು.

**ವಾಸುಕಿಸ್ತು ತದಾಕರ್ಣ್ಯ ಸತ್ಯವಾಙ್ಮುನಿರಿತ್ಯುತ ।**
**ವಿಶ್ವಾಸಂ ಚ ಪರಂ ಕೃತ್ವಾ ಭಗಿನೀಂ ತಾಂ ಸಮಾಶ್ರಯತ್ ॥೪೯॥**

ವಾಸುಕಿಯು, ತನ್ನ ತಂಗಿಯು ಹೇಳಿದ ಮಾತನ್ನು ಕೇಳಿ, ಜರತ್ಕಾರು ಮುನಿಯು ಸತ್ಯವಾಕ್ಯನೆಂದು ಅವನ ಮಾತಿನಲ್ಲಿ ಅತ್ಯಂತ ವಿಶ್ವಾಸವಿಟ್ಟು, ತನ್ನ ತಂಗಿಯನ್ನು ಸರ್ಪಗಳ ರಕ್ಷಣೆಗಾಗಿ ಆಶ್ರಯಿಸಿದ್ದನು.

**ತತಃ ಕಾಲೇನ ಕಿಯತಾ ಜಾತೋಽಸೌ ಮುನಿಬಾಲಕಃ ।**
**ಆಸ್ತೀಕ ಇತಿ ನಾಮಾಸೌ ವಿಖ್ಯಾತಃ ಕುರುಸತ್ತಮ ॥೫೦॥**

ಎಲೈ ಕೌರವಶ್ರೇಷ್ಠನೇ, ಅನಂತರದಲ್ಲಿ ಕೆಲವು ಕಾಲವು ಕಳೆದ ಮೇಲೆ ಆಸ್ತೀಕ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಈ ಮುನಿಬಾಲಕನು ಹುಟ್ಟಿದನು. ಜರತ್ಕಾರುಮುನಿಯು ತನ್ನ ಹೆಂಡತಿಯನ್ನು ಬಿಟ್ಟುಹೋಗುವ ಕಾಲದಲ್ಲಿ ಅವಳು ಬಯಸುತ್ತಿರುವ ಪುತ್ರನು ಅವಳ ಗರ್ಭದಲ್ಲಿ 'ಅಸ್ತಿ' ಎಂದರೆ ಇರುವನೆಂದು ಹೇಳಿ ಹೊರಟುಹೋದ ಮೇಲೆ ಈ ಬಾಲಕನು ಜನಿಸಿದುದರಿಂದ ಈ ಕುಮಾರನಿಗೆ 'ಆಸ್ತೀಕ' ಎಂಬ ಹೆಸರು ಪ್ರಸಿದ್ಧವಾಯಿತು.

**ತೇನಾಯಂ ರಕ್ಷಿತೋ ಯಜ್ಞಸ್ತವ ಪಾರ್ಥಿವಸತ್ತಮ ।**
**ಮಾತೃಪಕ್ಷಸ್ಯ ರಕ್ಷಾರ್ಥಂ ಮುನಿನಾ ಭಾವಿತಾತ್ಮನಾ ॥೫೧॥**

ಎಲೈ ನೃಪಶ್ರೇಷ್ಠನೇ, ಆತ್ಮಜ್ಞಾನಿಯಾದ ಈ ಆಸ್ತೀಕಮುನಿಯಿಂದ ಮಾತೃ ವಂಶದ ಸಂತತಿಯನ್ನು ಕಾಪಾಡಲು ನಿನ್ನ ಯಜ್ಞವನ್ನು ನಿಲ್ಲಿಸಿ ರಕ್ಷಿಸಲಾಯಿತು.

**ಭವ್ಯಂ ಕೃತಂ ಮಹಾರಾಜ ಮಾನಿತೋಽಯಂ ತ್ವಯಾ ಮುನಿಃ ।**
**ಯಾಯಾವರಕುಲೋತ್ಪನ್ನೋ ವಾಸುಕೇರ್ಭಗಿನೀಸುತಃ ॥೫೨॥**

ಎಲೈ ಮಹಾರಾಜನೇ, ಯಾಯಾವರವೆಂಬ ವಂಶದಲ್ಲಿ ಹುಟ್ಟಿದ, ವಾಸುಕಿಯ ತಂಗಿಯ ಮಗನಾದ, ಈ ಆಸ್ತೀಕಮುನಿಯನ್ನು ನೀನು ಉಪಚರಿಸಿ ಮರ್ಯಾದೆ ಮಾಡಿದುದು ಬಹಳ ಉತ್ತಮವಾದ ಕಾರ್ಯವು.

**ಸ್ವಸ್ತಿ ತೇಽಸ್ತು ಮಹಾಬಾಹೋ ಭಾರತಂ ಸಕಲಂ ಶ್ರುತಂ ।**
**ದಾನಾನಿ ಬಹು ದತ್ತಾನಿ ಪೂಜಿತಾ ಮುನಯಸ್ತಥಾ ॥೫೩॥**

ಎಲೈ ಪರಾಕ್ರಮಶಾಲಿಯೇ, ನಿನಗೆ ಮಂಗಳವಾಗಲಿ. ನೀನು ಭಾರತವನ್ನು ಸಮಗ್ರವಾಗಿ ಶ್ರವಣಮಾಡಿರುತ್ತೀಯೆ. ಹಾಗೆಯೇ ಬಹುವಿಧವಾದ ಅನೇಕದಾನಗಳನ್ನು ಮಾಡಿ ಮುನಿಶ್ರೇಷ್ಠರನ್ನು ಉಪಚರಿಸಿ ಪೂಜಿಸಿರುತ್ತೀಯೆ.

**ಕೃತೇನ ಸುಕೃತೇನಾಪಿ ನ ಪಿತಾ ಸ್ವರ್ಗತಿಂ ಗತಃ ।**
**ಪಾವಿತಂ ನ ಕುಲಂ ಕೃತ್ಸ್ನಂ ತ್ವಯಾ ಭೂಪತಿಸತ್ತಮ ॥೫೪॥**

ಎಲೈ ನೃಪಶ್ರೇಷ್ಠನೇ, ಈ ವಿಧವಾದ ಸತ್ಕರ್ಮಗಳನ್ನು ಮಾಡಿದ್ದಾಗ್ಯೂ ನಿನ್ನ ತಂದೆಗೆ ಸದ್ಗತಿಯುಂಟಾಗಲಿಲ್ಲ. ನಿನ್ನ ಕುಲವು ಪಾವನವಾಗಲಿಲ್ಲವು. ಆದುದರಿಂದ,

**ದೇವ್ಯಾಶ್ಚಾಯತನಂ ಭೂಪ ವಿಸ್ತೀರ್ಣಂ ಕುರು ಭಕ್ತಿತಃ ।**
**ಯೇನ ವೈ ಸಕಲಾ ಸಿದ್ಧಿಸ್ತವ ಸ್ಯಾಜ್ಜನಮೇಜಯ ॥೫೫॥**

ಎಲೈ ದೊರೆಯಾದ ಜನಮೇಜಯರಾಜನೇ, ನೀನು ಈಗ ಮಹಾದೇವಿಯ ವಿಸ್ತಾರವಾದ ದೇವಾಲಯವನ್ನು ಭಕ್ತಿಭಾವದಿಂದ ರಚಿಸು. ಅದರಿಂದ ನಿನ್ನ ಸಮಸ್ತ ಇಷ್ಟಾರ್ಥಗಳೂ ಕೈಗೂಡುವುವು.

**ಪೂಜಿತಾ ಪರಯಾ ಭಕ್ತ್ಯಾ ಶಿವಾ ಸಕಲದಾ ಸದಾ ।**
**ಕುಲವೃದ್ಧಿಂ ಕರೋತ್ಯೇವ ರಾಜ್ಯಂ ಚ ಸುಸ್ಥಿರಂ ಸದಾ ॥೫೬॥**

ಈ ದೇವಿಯನ್ನು ಬಹಳ ಭಕ್ತಿಯಿಂದ ಪೂಜಿಸಿದರೆ, ಸರ್ವಕಾಲದಲ್ಲಿಯೂ ಮಂಗಳವನ್ನುಂಟುಮಾಡಿ, ಸಮಸ್ತ ಇಷ್ಟಾರ್ಥಗಳನ್ನು ಕೊಡುವಳು. ವಂಶಾಭಿವೃದ್ಧಿಯೂ ಆಗುವುದು. ರಾಜ್ಯವು ಸರ್ವಕಾಲದಲ್ಲಿಯೂ ನಿಷ್ಕಂಟಕವಾಗಿ ಸ್ಥಾಯಿಯಾಗಿರುತ್ತಾ ಅಭಿವೃದ್ಧಿಯನ್ನೈದುವುದು.

**ದೇವೀಮಖಂ ವಿಧಾನೇನ ಕೃತ್ವಾ ಪಾರ್ಥಿವಸತ್ತಮ ।**
**ಶ್ರೀಮದ್ಭಾಗವತಂ ನಾಮ ಪುರಾಣಂ ಪರಮಂ ಶೃಣು ॥೫೭॥**

ಎಲೈ ನೃಪೋತ್ತಮನೇ, ನೀನು ನವರಾತ್ರೋತ್ಸವ ಮೊದಲಾದ ಸಮಯದಲ್ಲಿ ದೇವೀಯಾಗವನ್ನು ವಿಧ್ಯುಕ್ತವಾಗಿ ಮಾಡಿ, ಅನಂತರದಲ್ಲಿ ಉತ್ತಮವಾದ ಶ್ರೀದೇವೀ ಭಾಗವತವೆಂಬ ಪುರಾಣವನ್ನು ಶ್ರವಣಮಾಡು.

**ತ್ವಾಮಹಂ ಶ್ರಾವಯಿಷ್ಯಾಮಿ ಕಥಾಂ ಪರಮಪಾವನೀಂ ।**
**ಸಂಸಾರತಾರಿಣೀಂ ದಿವ್ಯಾಂ ನಾನಾರಸಸಮಾಹೃತಾಂ ॥೫೮॥**

ಈ ದೇವೀಭಾಗವತವೆಂಬ ಮಹಾಪುರಾಣದ ಶ್ರವಣವು ಅತ್ಯಂತ ಪವಿತ್ರವಾದುದು. ಸಂಸಾರದ ಬಲೆಯಲ್ಲಿರುವ ಬಂಧವನ್ನು ವಿಮೋಚನೆಮಾಡುವುದು, ಭಕ್ತಿ ವೈರಾಗ್ಯ ಮುಂತಾದ ನಾನಾವಿಧ ರಸಗಳಿಂದ ಶೋಭಿತವಾಗಿರುವುದು. ಇಂಥಾ ಉತ್ತಮವಾದ ಕಥೆಯನ್ನು ನಿನಗೆ ನಾನೇ ಶ್ರವಣಮಾಡಿಸುವೆನು.

**ನ ಶ್ರೋತವ್ಯಂ ಪರಂ ಚಾಸ್ಮಾತ್ಪುರಾಣಾದ್ವಿದ್ಯತೇ ಭುವಿ ।**
**ನಾರಾಧ್ಯಂ ವಿದ್ಯತೇ ರಾಜನ್ ದೇವೀಪಾದಾಂಬುಜಾದೃತೇ ॥೫೯॥**

ಈ ಭೂಮಿಯಲ್ಲಿ ಈ ಪುರಾಣಕ್ಕಿಂತಲೂ ಉತ್ತಮವಾದ ಅಥವಾ ಸಮನಾದ ಪುರಾಣವು ಮತ್ತೊಂದಿಲ್ಲವು. ಇದನ್ನು ಬಿಟ್ಟು ಬೇರೆ ಪುರಾಣವನ್ನು ಶ್ರವಣಮಾಡಬೇಕಾಗಿಲ್ಲವು. ಮತ್ತು ಎಲೈ ರಾಜನೇ, ಈ ಜಗತ್ತಿನಲ್ಲಿ ದೇವೀಪಾದಕಮಲಗಳನ್ನು ಹೊರತಾಗಿ ಪೂಜಿಸಬೇಕಾದ ಬೇರೆ ಯಾವ ವಸ್ತುವೂ ಇರುವುದಿಲ್ಲವು.

**ತೇ ಸಭಾಗ್ಯಾಃ ಕೃತಪ್ರಜ್ಞಾ ಧನ್ಯಾಸ್ತೇ ನೃಪಸತ್ತಮ ।**
**ಯೇಷಾಂ ಚಿತ್ತೇ ಸದಾ ದೇವೀ ವಸತಿ ಪ್ರೇಮಸಂಕುಲೇ ॥೬೦॥**

ಎಲೈ ರಾಜಶ್ರೇಷ್ಠನೇ, ಭಕ್ತಿಪ್ರೇಮಯುತವಾದ ಯಾರ ಹೃದಯದಲ್ಲಿ ದೇವಿಯು ಸದಾ ವಾಸಮಾಡುವಳೋ, ಎಂದರೆ ಯಾರು ಅನನ್ಯವಾದ ಭಕ್ತಿ ಪ್ರೇಮಾದಿಗಳಿಂದ ದೇವಿಯನ್ನು ತಮ್ಮ ಚಿತ್ತದಲ್ಲಿ ಸದಾ ಧ್ಯಾನಿಸುವರೋ, ಅವರೇ ವಿವೇಕಿಗಳು, ಅವರೇ ಕೃತಕೃತ್ಯರು ಮತ್ತು ಅವರೇ ಪುಣ್ಯಶಾಲಿಗಳು !

**ಸುದುಃಖಿತಾಸ್ತೇ ದೃಶ್ಯಂತೇ ಭುವಿ ಭಾರತ ಭಾರತೇ ।**
**ನಾರಾಧಿತಾ ಮಹಾಮಾಯಾ ಯೈರ್ಜನೈಶ್ಚ ಸದಾಂಬಿಕಾ ॥೬೧॥**

ಎಲೈ ಭರತಕುಲೋತ್ಪನ್ನನೇ, ಈ ಭಾರತಭೂಮಿಯಲ್ಲಿ ಯಾರು ಸಮಸ್ತ ಜಗತ್ತಿಗೂ ಮಾತೃವಾದ, ಮಹಾಮಾಯಾಸ್ವರೂಪಿಣಿಯಾದ, ದೇವಿಯನ್ನು ಆರಾಧಿಸುವುದಿಲ್ಲವೋ ಅವರು ಸದಾ ದುಃಖವುಳ್ಳವರಾಗಿಯೇ ಇರುವುದು ಪ್ರತ್ಯಕ್ಷವಾಗಿದೆ.

**ಬ್ರಹ್ಮಾದಯಃ ಸುರಾಃ ಸರ್ವೇ ಯದಾರಾಧನತತ್ಪರಾಃ ।**
**ವರ್ತಂತೇ ಸರ್ವದಾ ರಾಜಂಸ್ತಾಂ ನ ಸೇವೇತ ಕೋ ಜನಃ ॥೬೨॥**

ಎಲೈ ರಾಜನೇ, ಬ್ರಹ್ಮನೇ ಮೊದಲಾದ ಸಮಸ್ತದೇವತೆಗಳೂ ಸಹ ಈ ದೇವಿಯ ಆರಾಧನೆಯಲ್ಲಿ ಸರ್ವಕಾಲದಲ್ಲಿಯೂ ಆಸಕ್ತರಾಗಿರುತ್ತಾರೆ. ಹೀಗಿರುವಲ್ಲಿ ಮನುಷ್ಯರು ಯಾರು ತಾನೇ ಆ ಮಹಾದೇವಿಯನ್ನು ಸೇವಿಸದೆ ಇರುವರು ?

**ಯ ಇದಂ ಶೃಣುಯಾನ್ನಿತ್ಯಂ ಸರ್ವಾನ್ಕಾಮಾನವಾಪ್ನುಯಾತ್ ।**
**ಭಗವತ್ಯಾ ಸಮಾಖ್ಯಾತಂ ವಿಷ್ಣವೇ ಯದನುತ್ತಮಂ ॥೬೩॥**

ಸಾಕ್ಷಾದ್ಭಗವತೀದೇವಿಯಿಂದಲೇ ವಿಷ್ಣುವಿಗೆ ಹೇಳಲ್ಪಟ್ಟ, ಪರಮಶ್ರೇಷ್ಠವಾದ, ಈ ಮಹಾಪುರಾಣವನ್ನು ಯಾವ ಮನುಷ್ಯನು ಪ್ರತಿದಿನವೂ ಕೇಳುವನೋ ಅವನು ತನ್ನ ಎಲ್ಲ ಕೋರಿಕೆಗಳನ್ನೂ ಹೊಂದುವನು.

**ತೇನ ಶ್ರುತೇನ ತೇ ರಾಜಂಶ್ಚಿತ್ತಶಾಂತಿರ್ಭವಿಷ್ಯತಿ ।**
**ಪಿತೄಣಾಂ ಚಾಕ್ಷಯಃ ಸ್ವರ್ಗಃ ಪುರಾಣಶ್ರವಣಾದ್ಭವೇತ್ ॥೬೪॥**

ಎಲೈ ರಾಜನೇ, ಈ ಪುರಾಣಶ್ರವಣದಿಂದ ನಿನಗೆ ಮನಸ್ಸಮಾಧಾನವುಂಟಾಗುವುದು. ಅಲ್ಲದೆ ದುರ್ಗತಿಯಲ್ಲಿರುವ ನಿನ್ನ ಪಿತೃಗಳಿಗೆ ಶಾಶ್ವತವಾದ ಸ್ವರ್ಗಲೋಕ ಪ್ರಾಪ್ತಿಯೂ ಆಗುವುದು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ**
**ಶ್ರೋತೃಪ್ರವಕ್ತೃಪ್ರಸಂಗೋ ನಾಮ ದ್ವಾದಶೋಽಧ್ಯಾಯಃ**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ದ್ವಿತೀಯಸ್ಕಂಧೇ**
**ದ್ವಾದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಎರಡನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

**ದ್ವಿತೀಯಃ ಸ್ಕಂಧಶ್ಚ ಸಮಾಪ್ತಃ**

ಎರಡನೆಯ ಸ್ಕಂಧವು ಮುಗಿದುದು.

**ದ್ವಾವಿಂಶತ್ಯಧಿಕೈಃ ಸಂಖ್ಯೈಃ ಪದ್ಯೈಃ ಸಪ್ತಶತೈಃ ಶುಭೈಃ ।**
**ಶ್ರೀಮದ್ವ್ಯಾಸಮುಖೋದ್ಗೀತೈರ್ದ್ವಿತೀಯಸ್ಕಂಧ ಈರಿತಃ ॥**

ಶ್ರೀವ್ಯಾಸಮುನಿಯಿಂದ ಹೇಳಲ್ಪಟ್ಟಿರುವ ಈ ದೇವೀಭಾಗವತದ ಎರಡನೆಯ ಸ್ಕಂಧವು ಏಳನೂರ ಇಪ್ಪತ್ತೆರಡು ಶ್ಲೋಕಗಳಿಂದ ಶೋಭಿಸುತ್ತಿರುವುದು.

**ಸಾಹಿತ್ಯಂ ಜನಜೀವನಸ್ಯ ಮುಕುರಾದರ್ಶಸ್ಸದಾ ನಿರ್ಮಲಃ**
**ಬಿಂಬಾನೀಹ ಯತೋ ವ್ಯತೀತಸಮಯೋ ದೇಶೇಽಪಿ ಯೋ ದರ್ಶಯೇತ್ ।**
**ಆಶಾಭಂಗವಿಯೋಗವಿಹ್ವಲಜನಂ ಚಾಶ್ವಾಸ್ಯ ಯಸ್ತೋಷಯೇತ್**
**ಮೋಹೋನ್ಮೂಲನಶಾಂತಿಸೌಖ್ಯಕಲನೇ ಯೋ ರತ್ನದೀಪಾಯತೇ ॥**

**ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರಶಾಸನಾತ್ ।**
**ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥**
**ಸುಬ್ಬಮಾಂಬಾದೇವಯಜ್ವತನಯಶ್ಚಂದ್ರಶೇಖರಃ ।**
**ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥**
**ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।**
**ಪ್ರಾಣಿಕರ್ಮವಶಾದ್ಬ್ರಹ್ಮಣೀಚ್ಛಾಜ್ಞಾನಕ್ರಿಯಾತ್ಮಿಕಾ ॥**

॥ ಶ್ರೀರಸ್ತು ॥

